ಅಂತರ ಭಾರತೀಯ ಪುಸ್ತಕ ಮಾಲೆ

# ಚೌಕಟ್ಟಿನ ಮನೆ

ಕೇರಳ ಸಾಹಿತ್ಯ ಅಕಾಡೆಮಿಯ ಶ್ರೇಷ್ಠ ಕಾದಂಬರಿ
ಪ್ರಶಸ್ತಿ ಪಡೆದ ಮಲಯಾಳ ಭಾಷೆಯ ಕಾದಂಬರಿ

ಎಂ. ಟಿ. ವಾಸುದೇವನ್ ನಾಯರ್

ಅನುವಾದ:
ಬಿ. ಕೆ. ತಿಮ್ಮಪ್ಪ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಹೊಸ ದೆಹಲಿ

ಮೊದಲ ಆವೃತ್ತಿ : 1972
ದ್ವಿತೀಯ ಆವೃತ್ತಿ: 1989



ರೂ.19.00

Original Title: NALU KETTU (Malayalam)
Kannada Title: CHOUKATTINA MANE.

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್‌ಪಾರ್ಕ್, ಹೊಸ ದೆಹಲಿ-110 016,
ಇವರಿಂದ ಪ್ರಕಟಿತ.

# ಮುನ್ನುಡಿ

ಕೇರಳದ ಭಾಷೆಯಾದ ಮಲಯಾಳದಲ್ಲಿ ಅಪ್ಪು ನೆಡುಂಗಾಡಿಯವರ 'ಕುಂದಲತ' ಕಾದಂಬರಿ (1887) ಮೊದಲು ಪ್ರಕಟವಾದದ್ದು. ಒಂದು ದೃಷ್ಟಿಯಲ್ಲಿ ಅದು ಸರಿಯಾದ ದಾರಿಯಲ್ಲಿ ಸಾಗಲಿಲ್ಲವೆನ್ನಬೇಕು. ಅದರ ಸ್ವರೂಪ ಹೊಸವಾದರೂ ಆಕರ್ಷಕ ಕಥೆ ಕಥಾನಕಗಳು ಹಳೆಯವೇ. ಕಥಾ ವಸ್ತುವಿನ ಅಂಶಗಳು ಶೇಕ್ಸ್‌ಪಿಯರರ 'ಸಿಂಬೆಲಿನ್' ನಾಟಕದಿಂದ ಮತ್ತು ಸ್ಕಾಟನ 'ಇವಾನ್ ಹೋ' ಕೃತಿಯಿಂದ ಆಯ್ದುಕೊಂಡವುಗಳು. ಅಲ್ಲದೆ ಕಥಾ ಸಂವಿಧಾನ ಮತ್ತು ಕಥೆಯಲ್ಲಿ ಬರುವ ಘಟನೆಗಳು ಅನಿರ್ದಿಷ್ಟ ದೇಶ ಮತ್ತು ಕಾಲಕ್ಕೆ ಸಂಬಂಧಿಸಿದುವಾಗಿವೆ. ಸಾಮಾಜಿಕ ಪರಿಸರಣಗಳಾಗಲೀ ಪ್ರಾಸಂಗಿಕ ಕಥೆಗಳಾಗಲೀ ಅಥವಾ ಪಾತ್ರಗಳಾಗಲೀ ಕೇರಳಕ್ಕೆ ಸಂಬಂಧಿಸಿದುವಲ್ಲ.

ಕುಂದಲತೆ 1887ರಲ್ಲಿ ಬರೆದದ್ದು ಎನ್ನುವುದೇ ಅದರ ವೈಶಿಷ್ಟ್ಯ. ಆದರೆ ಅದು ಆ ಕಾಲಕ್ಕೂ ಹಿಂದಿನ ಕಾಲದ ಕಥೆ ಮತ್ತು ಚಿತ್ರಣಗಳನ್ನು ಒಳಗೊಂಡದ್ದು. ಎರಡು ವರ್ಷಗಳ ನಂತರ ಹೊರ ಬಂದ ಚಂದು ಮೆನನ್ನರ 'ಇಂದು ಲೇಖ'ದಲ್ಲಿ ಕಂಡು ಬರುವ ಸಮಕಾಲೀನ ಪ್ರಜ್ಞೆ ಮತ್ತು ಪರಿಭಾವನೆಗಳು ಇಂದಿಗೂ ಹೊಂದಿಕೊಳ್ಳುವಂತಿವೆ. ಇದಕ್ಕೆ ಕಾರಣ ಕಾಲ ದೇಶಗಳ ಬಗ್ಗೆ ಇರುವ ಪರಸ್ಪರ ಹೊಂದಾಣಿಕೆಗಳು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದ ಕೇರಳದ ಸಾಮಾಜಿಕ ಪರಿಸರಣಗಳನ್ನು ಪಾತ್ರಗಳನ್ನು ಮತ್ತು ಪ್ರಾಸಂಗಿಕ ಕಥೆಗಳನ್ನು ಒಳಗೊಂಡಿದೆ.

ಮಾತೃ ಪ್ರಧಾನವಾದ ನಾಯರರ ದೊಡ್ಡ ಅವಿಭಕ್ತ ಕುಟುಂಬವೊಂದು ಹಳೆಯ ಜಹಗೀರುದಾರಿಕೆಗೆ ಅಂಟಿಕೊಂಡಿರುವ ಪದ್ಧತಿ ಆಧುನಿಕ ಯುಗದೊಂದಿಗೆ ಸ್ಪರ್ಧಿಸಲಾರದು ಎನ್ನುವುದನ್ನು ಸೂಚಿಸುವ ವಿಷಯ ಈ ಕಾದಂಬರಿಯಲ್ಲಿ ಹೊರಹೊಮ್ಮಿ ಬೆಳಕನ್ನು ಬೀರುತ್ತದೆ. ಪರಿವರ್ತನೆಯ ಪರಿಸ್ಥಿತಿಗೆ ಹೊಂದಿಕೊಳ್ಳಲಾರದೆ ಕಷ್ಟಕ್ಕೊಳಗಾಗುವ ಅವನತಿಗೊಳಗಾಗುವ ಕಥಾವಸ್ತು ಈ ಕಾದಂಬರಿಯದು. ಮಲಯಾಳೇತರ ಓದುಗರಿಗೆ ಈ ಜನತೆಯ ಸಾಮಾಜಿಕ ಹಿನ್ನೆಲೆಯನ್ನರಿಯಲು ಸಹಾಯಕವಾಗಲಿ ಎನ್ನುವ ಉದ್ದೇಶದಿಂದ ಈ ಕಾದಂಬರಿಯನ್ನು ನೀಡಲಾಗಿದೆ.

ಉತ್ತರದ ಕಡೆಯಿಂದ ವೈದಿಕ ಬ್ರಾಹ್ಮಣ್ಯ ಮೊದಲು ಮೆಲ್ಲ ಮೆಲ್ಲನೆ ಆವರಿಸಿಕೊಂಡು ಬರುತ್ತಿದ್ದದ್ದು ಎಂಟು ಮತ್ತು ಒಂಬತ್ತನೆಯ ಶತಕದಲ್ಲಿ ದೊಡ್ಡ ಪ್ರವಾಹವಾಗಿ ಮುನ್ನುಗ್ಗಿತು. ಆ ಕಾಲದಲ್ಲಿ ಕೇರಳ ಸಮಾಜದಲ್ಲಿ ಜನತೆಯ ಕಸಬನ್ನು ಅನುಸರಿಸಿದಂತೆ ರೈತರು, ಕುರುಬರು, ಬೆಸ್ತರು ಇತ್ಯಾದಿ ಔದ್ಯೋಗಿಕ ವಿಭಾಗಗಳಿದ್ದುವು. ಆದರೆ ವೈದಿಕ ಬ್ರಾಹ್ಮಣ್ಯ 'ಚಾತುರ್ವರ್ಣ್ಯ'ವನ್ನೇ ಬಲವಾಗಿ ಅನುಮೋದಿಸಿತು. ಬ್ರಾಹ್ಮಣರು ಅಲ್ಪ ಸಂಖ್ಯಾತರಾಗಿದ್ದರೂ ಬಹಳ ಮೊದಲೇ 'ಪೌರೋಹಿತ್ಯ' ಮುಂತಾದುವುಗಳನ್ನು

ಕೈಗೊಂಡಿದ್ದರು. ಆದ್ದರಿಂದ ಅವರು ಕೇರಳ ಸಮಾಜಕ್ಕೆ ಪರಿಣಾಮಕಾರಿಯಾದ ಪುನರ್ ರೂಪವನ್ನು ಕೊಡಲು ಸಾಧ್ಯವಾಯಿತು. ಅವರು ಸ್ವಸಾಮರ್ಥ್ಯದಿಂದ ಸಮಾಜದಲ್ಲಿ ಉನ್ನತ ಶಿಖರವನ್ನೇರಿದರು. ಆಳುವ ಅರಸರು ಮತ್ತು ಸೇನಾಧಿಪತಿಗಳು ಉತ್ಸವಾದಿಗಳನ್ನಾಚರಿಸುವಂತೆ ಒತ್ತಾಯ ಪಡಿಸಿದರು. ಅದರಿಂದಾಗಿ ಕೆಲವರು ಕ್ಷತ್ರಿಯರಾಗಿ ಪರಿವರ್ತನೆ ಹೊಂದಿದರು.

ಹತ್ತನೆಯ ಶತಮಾನದಲ್ಲಿ ಕೇರಳದ ಚೇರರಿಗೂ ತಮಿಳು ನಾಡಿನ ಚೋಳರಿಗೂ ನೂರು ವರ್ಷಗಳ ವರೆಗೆ ಯುದ್ಧ ನಡೆಯಿತು. ಚೇರ ಚಕ್ರಾಧಿಪತ್ಯದ ರಾಜಧಾನಿಯಾದ ಮಹೋದಯಪುರ ಅವನತಿ ಹೊಂದಿದುದು 1019ರಲ್ಲಿ. ಚೇರರು ಚೋಳರ ಆಕ್ರಮಣವನ್ನೂ ಆ ಗಂಡಾಂತರ ಪರಿಸ್ಥಿತಿಯನ್ನೂ ಎದುರಿಸಲು ಬೇಗ ಬೇಗನೆ ಸೈನ್ಯವನ್ನು ಸಜ್ಜುಗೊಳಿಸಿದರು. ಪ್ರಖ್ಯಾತ ಬಲಿದಾನಿಗಳಾದ ಯುದ್ಧ ವೀರರು (ಚಾವೇರ್ ನಾಯರ್ಸ್) ಮಸುಕಾದ ಇತಿಹಾಸದ ಕಾಲ ಸ್ಥಿತಿಯಲ್ಲಿ ಎದ್ದು ನಿಂತ ಶೂರರು. ಈ ಸಂದರ್ಭದಲ್ಲೇ ನಾವು ಮೊತ್ತ ಮೊದಲಾಗಿ 'ನಾಯರ್' ಶಬ್ದವನ್ನು ಕಾಣುವುದು. ಪ್ರಾರಂಭದಲ್ಲಿ ಈ ಶಬ್ದ ಜಾತಿ ಸೂಚಕವಾದುದಾಗಿರಲಿಲ್ಲ. ಸಮರ ಶೂರರನ್ನು ಕುರಿತು, ಅವರ ಸ್ಥಾನವನ್ನು ಕುರಿತು ಪ್ರಯೋಗಿಸಿದ ಶಬ್ದವಾಗಿತ್ತು. ಆದರೆ ಸೈನ್ಯಕ್ಕೆ ಸೇರಿ ಸೇವೆ ಸಲ್ಲಿಸುವುದರ ಆಧಾರದ ಮೇಲೆ ಜಾತಿಯ ವಿಂಗಡಣೆ ತೀವ್ರಗತಿಯಲ್ಲಿ ಹೆಜ್ಜೆಯಿರಿಸಿ ಮನೆ ಮಾಡಿಕೊಂಡಿತು. ಸಾಮ್ರಾಜ್ಯವನ್ನು ಸಂರಕ್ಷಿಸುವುದಕ್ಕಾಗಿ ಮರಣವನ್ನೂ ಲೆಕ್ಕಿಸದೆ ಹೋರಾಡುವ ಯುದ್ಧ ಕೌಶಲದಿಂದಾಗಿ ಈ ನಾಯರ್ ಸಮುದಾಯ ಅರಸು ಮನೆತನಗಳ ಸಮೀಪವರ್ತಿಯಾಯಿತು. ಅದರ ಫಲವಾಗಿ ನಾಯರರು ಸಮಾಜದಲ್ಲಿ ಉನ್ನತ್ತ ಸ್ಥಾನವನ್ನೂ ಪಡೆದರು. ಬ್ರಾಹ್ಮಣ ಮತ್ತು ಕ್ಷತ್ರಿಯ ಯುವಕರು ನಾಯರ್ ಹುಡುಗಿಯರನ್ನು ಮದುವೆಯಾಗುವುದಕ್ಕೆ ಅವಕಾಶವುಂಟಾಯಿತು.

ಪೂರ್ವಕಾಲದ ಚೇರ ರಾಜವಂಶಾವಳಿ ಪಿತೃ ಪ್ರಾಧಾನ್ಯವುಳ್ಳದ್ದಾಗಿತ್ತು ಎನ್ನುವುದು ಸುಸ್ಪಷ್ಟವಾಗಿ ತಿಳಿದು ಬರುತ್ತದೆ. ಬಹುಶಃ ಮಾತೃ ಯಜಮಾನ್ಯ ವಂಶಗಳು ಮೊತ್ತ ಮೊದಲು ಜನ್ಮತಾಳಿದುದು ಚೇರರಿಗೂ ಚೋಳರಿಗೂ ನಡೆದ ಸಂಘರ್ಷಣೆಯ ಕಾಲದಲ್ಲಾಗಿರಬೇಕು. ವಲಸೆ ಬರುವ ಜನರಲ್ಲಿ ಹೆಂಗಸರ ಸಂಖ್ಯೆಗಿಂತ ಗಂಡಸರ ಸಂಖ್ಯೆ ಸಹಜವಾಗಿ ಹೆಚ್ಚಿಗೆ ಕಂಡು ಬರುವಂತೆ ಕೇರಳಕ್ಕೆ ವಲಸೆ ಬಂದ ಗುಂಪಿನಲ್ಲೂ ಇದು ಕಂಡು ಬಂದಿತ್ತು. ಹಾಗಾಗಿ ಹೊಸ ಪೀಳಿಗೆಯ ಹಿರಿಯ ಬ್ರಾಹ್ಮಣ ತನ್ನದೇ ಆದ ಜಾತಿಯಿಂದ ಹೆಣ್ಣು ತರುವ ಸಂಪ್ರದಾಯ ಆಚರಣೆಯಲ್ಲಿತ್ತು. ಹೊಸ ತಲೆಮಾರಿನ ಕಿರಿಯ ಬ್ರಾಹ್ಮಣ ಯುವಕರು ಕ್ಷತ್ರಿಯ ಅಥವಾ ನಾಯರ್ ಹೆಣ್ಣು ಮಕ್ಕಳನ್ನು ಮದುವೆಯಾಗುತ್ತಿದ್ದರು. ಹೆಣ್ಣುಮಕ್ಕಳಿಗೆ ಕುಟುಂಬದ ಆಸ್ತಿಯಲ್ಲಿ ಹಕ್ಕು ಲಭಿಸುತ್ತಿರಲಿಲ್ಲ. ಆದ್ದರಿಂದ ಆರ್ಥಿಕ ಕಟ್ಟಳೆಗಳನ್ನು ಭದ್ರಗೊಳಿಸಿ ಆಸ್ತಿಯ ಹಕ್ಕು ಮಾತ್ರ

ಪ್ರಧಾನವೂ ಮಾತ್ರ ಮೂಲವೂ ಆಗಿರಬೇಕೆಂದು ಪರಿವರ್ತಿಸಿ ವಿಧಿಸಿದರು. ಚೋರರೊಡನೆ ನಡೆದ ಸಮರ ಯಜ್ಞದಲ್ಲಿ ಅಧಿಕ ಸಂಖ್ಯೆಯ ನಾಯರ್ ಯೋಧರು ಆಹುತಿಯಾದರು. ಬ್ರಾಹ್ಮಣರ ಗುಂಪಿಗೆ ಸೇರಿ ಹೋಗಿದ್ದ ಅಧಿಕ ಸಂಖ್ಯೆಯ ಸ್ತ್ರೀಯರಿಗೆ ಮಾತ್ರ ಯಜಮಾನ್ಯವುಳ್ಳ ಸಮಾಜ ಪದ್ಧತಿಯನ್ನು ಮತ್ತಷ್ಟು ವ್ಯಾಪಕಗೊಳಿಸಿಕೊಳ್ಳಲು ಅವಕಾಶವುಂಟಾಯಿತು.

ಪೌರೋಹಿತ್ಯವನ್ನು ವಹಿಸುವ ಅಧಿಕಾರವನ್ನು ಪಡೆದುಕೊಂಡದ್ದು, ಅರಸುಮನೆತನಗಳಲ್ಲಿ ನಂಟಸ್ತಿಕೆ ಬೆಳೆಸುವುದರ ಮೂಲಕ ಪರೋಕ್ಷವಾಗಿ ರಾಜ್ಯಾಡಳಿತ ಸೂತ್ರವನ್ನು ವಹಿಸಿಕೊಂಡದ್ದು, ಎಲ್ಲ ಕ್ಷತ್ರಿಯರ ಮನೆಗಳ ಪೌರೋಹಿತ್ಯವನ್ನೂ ತಾವೇ ವಹಿಸಿಕೊಂಡದ್ದು, ಸ್ತ್ರೀಯರ ಮೂಲಕ ಭೂಮಿಯ ಯಜಮಾನ್ಯವನ್ನು ಪಡೆದು ಆರ್ಥಿಕಮಟ್ಟವನ್ನು ಅತ್ಯುನ್ನತಿಗೊಳಿಸಿಕೊಂಡದ್ದು—ಇವೆಲ್ಲವುಗಳ ಒಟ್ಟುಗೂಡುವಿಕೆಯಿಂದ ನಂಬೂದಿರಿಗಳು (ಬ್ರಾಹ್ಮಣರು) ಕೇರಳ ಸಮಾಜದಲ್ಲಿ ಉಂಬಳಿಯ ಶಿಖರವನ್ನೇರಿದರು. ಹಾಗೆಯೇ ನಾಯರರು ಸಂಪೂರ್ಣವಾಗಿ ರಾಜ್ಯ ಸಂರಕ್ಷಣೆಯ ಜವಾಬ್ದಾರಿಯನ್ನು ಹೊತ್ತು ಬಹಳ ಮೇಲಿನ ಸ್ಥಾನವನ್ನೇರಿ ದೇಶ ರಕ್ಷಕರೆನ್ನಿಸಿಕೊಂಡರು. ಇವರು ಈ ಸ್ಥಾನಗಳನ್ನು ಕಾಯ್ದಿರಿಸಿಕೊಂಡದ್ದು ಕೇರಳದ ಇತರ ಮುಖ್ಯ ಮತಗಳಾದ ಕ್ರೈಸ್ತರು ಮತ್ತು ಮುಸಲ್ಮಾನರು ವ್ಯಾಪಾರ ಮತ್ತಿತರ ಉದ್ಯೋಗಗಳನ್ನು ಕೈಗೊಳ್ಳುವುದಕ್ಕೆ ವರವನ್ನು ಅನುಗ್ರಹಿಸಿದಂತಾಯಿತು. ಕೇರಳದಲ್ಲಿ ಅನೇಕ ರಾಜಧಾನಿಗಳು ತಲೆಯೆತ್ತಿದ್ದುವು. ಪ್ರತಿಯೊಂದು ರಾಜಧಾನಿಯೂ ತನ್ನದೇ ಆದ ಸೈನ್ಯವನ್ನು ಬಲಪಡಿಸಿಕೊಂಡಿತು. ನಾಯರ್ ಸಮಾಜ ಉನ್ನತ ಸ್ಥಾನ, ಗೌರವ ಮತ್ತು ಸಂಪತ್ತುಗಳನ್ನು ಪಡೆದು ವೈಭವದಿಂದ ಬಾಳುತ್ತಿತ್ತು. ಆದರೆ ಹದಿನೆಂಟನೆಯ ಶತಮಾನದಲ್ಲಿ ರಾಜ ಮಾರ್ತಾಂಡ ವರ್ಮ ಈ ಎಲ್ಲ ತುಂಡರಸರನ್ನೂ ರಾಜಧಾನಿಗಳನ್ನೂ ವಶಪಡಿಸಿಕೊಂಡು ಬಲವಾದ ಒಂದು ರಾಜಧಾನಿಯನ್ನು ತಿರುವಾಂಕೂರಿನಲ್ಲಿ ನಿರ್ಮಿಸಿದ. ಇದರಿಂದಾಗಿ ನಾಯರರಿಗೆ ಯುದ್ಧೋದ್ಯಮ ಕೈತಪ್ಪಿ ಹೋದದ್ದು, ಹಿಂದಿನ ತಮ್ಮ ಅಂತಸ್ತು ಬೇರೆ ಉದ್ಯಮಗಳನ್ನು ಕೈಗೊಳ್ಳುವುದಕ್ಕೆ ಅಡ್ಡ ಬಂದದ್ದು, ವಿಧಿಯಿಲ್ಲದೆ ಭೂಮಿಯನ್ನು ಹಂಚಿಕೊಂಡು ವ್ಯವಸಾಯಕ್ಕಂಟಿಕೊಳ್ಳಬೇಕಾಗಿ ಬಂದದ್ದು ಮುಂತಾದುವನ್ನೆಲ್ಲ ಹದಿನೆಂಟನೆಯ ಶತಮಾನದ ಕೇರಳದ ರೆಬೆಲ್ (ಫ್ರೆಂಚ್ ಸಾಹಿತಿ) ಎನ್ನಿಸಿಕೊಂಡ ಕುಂಜನ್ ನಂಬಿಯಾರ್ ಕೆಲವೆಡೆಗಳಲ್ಲಿ ನಿರ್ದಯವಾಗಿ ಹಾಸ್ಯ ಮಾಡುತ್ತಾರೆ.

'ಇಂದುಲೇಖ' ಕಾದಂಬರಿ ನಂಬಿಯಾರರ ವಿಡಂಬನೆಗೂ ಎಂ. ಟಿ. ವಾಸುದೇವನ್ ನಾಯರ್ ಮತ್ತು ಅನಂತರದ ಬರಹಗಾರರ ಕಾವ್ಯಾದರ್ಶಗಳಿಗೂ ಹೊರತಾದ ಉಲ್ಲಾಸದಾಯಕ ಕೃತಿಯೆನ್ನಿಸಿದೆ. ಆ ಕಾಲದಲ್ಲಿ ವೈಭವದಿಂದ ಬಾಳುತ್ತಿದ್ದ ಪಂಗಡಗಳು ಭೂಮಿಯ ಉತ್ಪತ್ತಿಯನ್ನು ಹೆಚ್ಚಿಸುವ ಗೊಡವೆಗೇ ಹೋಗದೆ ಇದ್ದದ್ದು ನಮಗೆ

ಪರೋಕ್ಷವಾಗಿ ತಿಳಿದು ಬರುತ್ತದೆ. ಮಾತೃ ಪ್ರಧಾನ (ಅಳಿಯ ಸಂತಾನ) ಕುಟುಂಬಕ್ಕೆ ಯಜಮಾನನಾದವನ ದರ್ಪಾಡಳಿತಕ್ಕೆ ಎದುರಾಗಿ ಅವನ ಅಳಿಯಂದಿರು ಮತ್ತು ಸೊಸೆಯರು ನಡೆಸುತ್ತಿದ್ದ ಕಲಹದಲ್ಲೇ ಕೇಂದ್ರೀಕೃತಗೊಂಡಿದ್ದರ ಫಲವಾಗಿ ಎಷ್ಟೋ ಅವಿಭಕ್ತ ಕುಟುಂಬಗಳು ವಿಪರೀತ ಅವ್ಯವಸ್ಥೆಗೊಳಗಾಗಿ ಬೆಳೆಯ ತೊಡಗಿದುವು.

ಅನಂತರ ಬಂದ ಮಲಯಾಳ ಕಾದಂಬರಿಯ ವಿಕಾಸ ಮತ್ತು ರಚನಾವಿಧಾನವೆಂತ-ಹದು, ಯಾವ ಚೌಕಟ್ಟಿಗೊಳಪಟ್ಟದ್ದು, ಯಾವ ವರ್ಗಕ್ಕೆ ಸೇರಿದುದು ಮುಂತಾದುವನ್ನು ಇಲ್ಲಿ ಗುರುತಿಸಬಹುದು. ಪ್ರತಿಯೊಂದು ಪಂಗಡವೂ ಪರಿವರ್ತನೆ ಹೊಂದುತ್ತಿರುವ ಸಮಾಜದ ತಪ್ಪು ವ್ಯವಸ್ಥೆಗಳನ್ನು ಅರಿಯುವ ಪ್ರಯತ್ನ 'ಇಂದು ಲೇಖ' ಕಾದಂಬರಿ-ಯಲ್ಲಿ ಕಂಡು ಬರುತ್ತದೆ. ಇದೊಂದು ಕಾವ್ಯಛಾಯೆಯುಳ್ಳ ಚಾರಿತ್ರಿಕ ಕಾದಂಬರಿ. ಸಿ. ವಿ. ರಾಮನ್ ಪಿಳ್ಳೆ ಅವರು 1891–1920ರ ಅವಧಿಯಲ್ಲಿ ಈ ವಿಷಯಗಳನ್ನು ಕುರಿತ ಭವ್ಯ ಗ್ರಂಥವನ್ನು ಸೃಷ್ಟಿಸಿದ್ದಾರೆ. ಇಲ್ಲಿ ಕೂಡ ಪರಿವರ್ತನೆಯ ಯುಗದ, ಪೂರ್ವ ಸಂಪ್ರದಾಯದವರ ಅಂತರಾಳವನ್ನು ಕಂಡುಕೊಳ್ಳಬಹುದು. ನಾಯರ್ ಪಂಗಡದ ಅಧಿಕಾರ ಶಕ್ತಿ ಕುಂದುತ್ತಿದ್ದಾಗ ಪಿಳ್ಳೆ ಅವರು ತಮ್ಮ ಉದ್ಗ್ರಂಥದಲ್ಲಿ 18ನೆಯ ಶತ-ಮಾನದ ಕೊನೆಯಲ್ಲಿ ಮೈಸೂರನ್ನು ಆಳುತ್ತಿದ್ದ ಹೈದರಾಲಿ ಮತ್ತು ಅವನ ಮಗ ಟಿಪ್ಪೂ ಸುಲ್ತಾನ್ ತಿರುವಾಂಕೂರು ಸಂಸ್ಥಾನಕ್ಕೆ ಕೊಡುತ್ತಿದ್ದ ಉಪಟಳಗಳನ್ನು ಹತ್ತಿಕ್ಕಿ ಆ ಸಂಸ್ಥಾನವನ್ನು ಸುಭದ್ರಗೊಳಿಸಿದ ನಾಯರ್ ಪಂಗಡದ ರಾಜನೀತಿ ನಿಪುಣನಾದ ರಾಜಾ ಕೇಶವದಾಸನನ್ನು ಸ್ಮರಿಸಿದ್ದಾರೆ. ಒಂದು ದೃಷ್ಟಿಯಲ್ಲಿ ಹಿಂದೆಲ್ಲ ಸಾಮರ್ಥ್ಯದಿಂದ ಮತ್ತು ಪ್ರಾಮಾಣಿಕತೆಯಿಂದ ರಾಜ್ಯ ರಕ್ಷಣೆ ಮಾಡಿದ ನಾಯರ್ ಪಂಗಡವನ್ನು ಪುನರುಜ್ಜೀವ-ಗೊಳಿಸಿದುದು ಎಂದು ಹೇಳಬೇಕು.

ನಂಬೂದಿರಿಗಳ ಪಂಗಡದಲ್ಲಿದ್ದ ಒಂದು ವ್ಯಾಧಿಯೆಂದರೆ ಸ್ತ್ರೀಯರನ್ನು ಅಡಿಗೆ ಮನೆಯಲ್ಲಿ ಕೊಳೆ ಹಾಕುತ್ತಿದ್ದದ್ದು ಮತ್ತು ಹುಡುಗಿಯರು ಋತುಮತಿಯರಾಗುವುದಕ್ಕೆ ಮೊದಲೇ ವಿವಾಹ ಮಾಡಿಕೊಡುತ್ತಿದ್ದ ಪದ್ಧತಿ. ಕೆಲವು ಸಂದರ್ಭಗಳಲ್ಲಿ ಐಶ್ವರ್ಯ ವಂತನಾದ ಮುದಿ ನಂಬೂದಿರಿಗೂ ಮದುವೆ ಮಾಡಿ ಕೊಡುತ್ತಿದ್ದ ಪದ್ಧತಿಯಿತ್ತು. ಕ್ರೈಸ್ತ ಮತಕ್ಕೆ ಸಾಮಾಜಿಕ ಪರಿವರ್ತನೆ ಹೊಂದಲು ಯಾವ ಅಡಚಣೆಯೂ ಇರಲಿಲ್ಲ. ಅದು ಶಾಂತವಾಗಿ ತೀವ್ರಗತಿಯಲ್ಲಿ ವ್ಯಾಪಿಸುತ್ತಿದ್ದ ಆಧುನಿಕತೆಯ ಪರಿಣಾಮವನ್ನು ಅವಲೋಕಿಸುತ್ತಿತ್ತು. ಯಾವುದೋ ಕಾಲದಲ್ಲಿ ಆಗಿಹೋದ ಬಹುದೊಡ್ಡ ನಾಯರ್ ಅವಿಭಕ್ತ ಕುಟುಂಬ, ಪರಿವರ್ತನೆಯ ಯುಗದ ಒತ್ತಡಕ್ಕೆ ಸಿಕ್ಕಿ ಸಣ್ಣ ಸಣ್ಣ ಕುಟುಂಬ-ಗಳಾಗಿ ಹೋದ ವಿಷಯವನ್ನು ಇಲ್ಲಿ ಪ್ರತಿಪಾದಿಸಲು ಹೊರಟಿರುವುದು. ಮುಸ್ಲಿಂ ಸಮಾಜದಲ್ಲೂ ಧಾರ್ಮಿಕ ಸಂಪ್ರದಾಯಗಳ ಮತ್ತು ವಿಪರೀತ ಪೂರ್ವಾಚಾರಗಳ ತೊಂದರೆಗಳು ಇದ್ದುವು.

ಪ್ರತಿಯೊಂದು ಪಂಗಡದಲ್ಲೂ ತನ್ನದೇ ಆದ ಪೂರ್ವಾಚಾರದ ಗುಂಪು ಮನೋಧರ್ಮದಿಂದಾಗಿ ಹೊಸ ಜಗತ್ತಿಗೆ ಹೊಂದಿಕೊಳ್ಳುವುದಕ್ಕಿರುವ ಪ್ರತ್ಯೇಕ ಸಮಸ್ಯೆಯಿಂದಾಗಿ ಕಾದಂಬರಿ ಆರ್ಥಿಕ ಮತ್ತು ರಾಜಕೀಯ ಬಿಕ್ಕಟ್ಟಿನ ಕಡೆಗೆ ತಿರುಗುತ್ತದೆ. ಸಾಹಿತಿ ಚೆರುಕ್ಕಾಡ್, ಭೂಮಾಲೀಕನಿಗೂ ಗೇಣಿದಾರನಿಗೂ ಇರುವ ಘರ್ಷಣೆಯನ್ನು ವಿವರಿಸುವುದರ ಮೂಲಕ ಗ್ರಾಮಾಂತರ ಸ್ಥಿತಿಗತಿಗಳನ್ನು ಸಜೀವವಾಗಿ ಚಿತ್ರಿಸಿದ್ದಾರೆ. ತಕಟಿ ಮತ್ತು ಕೇಶವದಾಸ್ ಹಳ್ಳಿಗಳ ಹಣೆಬರಹವನ್ನೂ ನಗರಗಳ ಗೋಂದಲಮಯ ಬದುಕನ್ನೂ ವಿವರಿಸಿದ್ದಾರೆ. (ಜಮೀನಿನಲ್ಲಿ ಕೂಲಿ ಕೆಲಸ ಮಾಡುವವರು, ಕಸಗುಡಿಸುವವರು, ರಿಕ್ಷ ಎಳೆಯುವವರು—ಇತ್ಯಾದಿ).

ಪೂರ್ವ ಸಂಪ್ರದಾಯಗಳಿಗಂಟಿಕೊಂಡ ಬದುಕಿನ ನಿರ್ಧಾರ. ತೀವ್ರಗತಿಯಲ್ಲಿ ಕೈತಪ್ಪಿ ಹೋಗಿ ಬಿಕ್ಕಟ್ಟು ಉದ್ಭವಿಸಿ ಮಧ್ಯೆ ರಾಜಕೀಯ ತಲೆಹಾಕಿ ಅವ್ಯವಸ್ಥೆಯುಂಟಾಗುವುದು ಕೇರಳ ಜೀವನದ ಒಂದು ಪ್ರತ್ಯೇಕತೆ. ಲಂಗರು ಮುರಿದು ಬಿದ್ದು ಮುಂದೆ ಯಾನ ಮಾಡಲಾಗದಂತಹ ಅಂಶ ಬಂದಿವೆ—ಮೌಲ್ಯಗಳಲ್ಲಿಯೂ ಅವು ಬೇರೆ ಬೇರೆ ರೀತಿಯವು. ಮನುಷ್ಯ ತನ್ನ ಸತ್ವವನ್ನು ಕಳೆದುಕೊಂಡು ಸೂತ್ರದ ಗೊಂಬೆಯಾಗುವುದು ಶ್ರೀ. ವಿ. ಟಿ. ನಂದ ಕುಮಾರರ ಕೃತಿಗಳಲ್ಲಿ ಕಂಡು ಬಂದರೆ, ಶ್ರೀ. ಒ. ವಿ. ವಿಜಯನ್ನರ ಕೃತಿಗಳಲ್ಲಿ ಪಾತ್ರಗಳು ಮೃದು ಮನೋಭಾವದ ಪರಾಕಾಷ್ಠೆಯನ್ನು ತಲಪಿ ನಿಂತಿರುವುದು ಕಂಡು ಬರುತ್ತದೆ. ಆದರೆ ಅವುಗಳಲ್ಲಿ ಮಾನವ ತನ್ನ ಗುರಿಯನ್ನು ತಲಪಿದ್ದಾಗಲೀ, ಗುರಿ ತಲಪುವ ಸಾಮರ್ಥ್ಯವನ್ನು ಪಡೆದದ್ದಾಗಲೀ ಕಂಡು ಬರುವುದಿಲ್ಲ.

ಇದಕ್ಕೆ ಪ್ರತಿಯಾಗಿ ಇನ್ನೂ ಕೆಲವು ಮಂದಿ ಕಾದಂಬರಿಕಾರರು ಅಗ್ನಿ ಪರೀಕ್ಷೆಯ ಮೂಲಕ ಮಾನವನಲ್ಲಿ ಹೊಸ ಭರವಸೆಯನ್ನು ಮೂಡಿಸಿ ಗೆಲ್ಲಿಸುವ ಪ್ರಯತ್ನ ಮಾಡಿದ್ದಾರೆ—ಹಳೆಯ ರೀತಿಯ ಅನಾಯಾಸದ ರಾಜಕೀಯ ಆದರ್ಶಗಳು ಶ್ರೀ. ಕೆ. ಸುರೇಂದ್ರನ್ ಅವರ ನಿಜವಾದ ರಾಜಕೀಯ ಆದರ್ಶಗಳ ಮುಂದೆ ನಿಲ್ಲಲಾರವು. ಆದರೂ ಅವರಲ್ಲಿ ಆ ವರ್ಗದ ಆಂತರಿಕ ಪ್ರಜ್ಞೆಯನ್ನೂ ಆ ರಾಜಕೀಯ ಕಟ್ಟುಪಾಡುಗಳನ್ನೂ ಕಂಡುಹಿಡಿಯಲು ಪ್ರಯತ್ನ ಮಾಡಿರುವುದು ಕಂಡು ಬರುತ್ತದೆ. ಕೇಶವದೇವ್ ಸಾಮಾಜಿಕ ಬಿಕ್ಕಟ್ಟುಗಳಿಗೂ ಅವುಗಳ ವಿಕೃತ ಭಾವನೆಗಳಿಗೂ ಕೊಡುವುದಕ್ಕೆ ಹೋಗುವುದಿಲ್ಲ. ಆದರೂ ಕೇಶವದೇವ್ ಎಲ್ಲರೂ ಕೇವಲ ನೆರೆ ಹೊರೆಯವರಲ್ಲ, ಒಬ್ಬರು ಮತ್ತೊಬ್ಬರ ಅವಲಂಬಿಗಳು ಎನ್ನುವುದನ್ನು ತಿಳಿಸಲೆತ್ನಿಸಿದ್ದಾರೆ.

ನಾವೀಗ ನಮ್ಮ ಮುಂದಿರುವ ಕಾದಂಬರಿಯ ಕರ್ತೃವಿನ ವಿಚಾರವಾಗಿ ನೋಡೋಣ.

ಘಟನಾ ಸಂಪತ್ತು ಎಂ. ಟಿ. ವಾಸುದೇವನ್ ನಾಯರರ ಕಾದಂಬರಿಗಳಲ್ಲಿದೆ. ಆದರೆ ಸಂದಿಗ್ಧತೆಯನ್ನೂ ಗಂಭೀರ ಪರಿಸ್ಥಿತಿಯನ್ನೂ ಉಂಟುಮಾಡುವ ಸಮಾಜದ ವಾಸ್ತವಿ-

ಕತೆಗಳನ್ನು ನೇರವಾಗಿ ಎದುರಿಸುವುದು ಕಡಿಮೆ. ಎಂ. ಟಿ. ಅವರ ನಿರಾಶಾವಾದ ತತ್ತ್ವ-ಶಾಸ್ತ್ರದ ಬೇರಿನ ಆಳಕ್ಕಿಳಿಯುತ್ತದೆ. 'ಅಭಯಾರ್ಥಿ' ಎನ್ನುವ ಅಸಾಧಾರಣ ಕಥೆ 1967ರಲ್ಲಿ ಬರೆದದ್ದು. ಅದರಲ್ಲಿ ಒಬ್ಬಾತ ಎಷ್ಟೋ ವರ್ಷಗಳ ವರೆಗೆ ತನ್ನ ಊರಿನಿಂದ ಹೊರಗಿರುತ್ತಾನೆ. ಮತ್ತೆ ಊರಿಗೆ ಹಿಂದಿರುಗಿ ಬಂದು ಎಲ್ಲರೊಡನೆ ಬಾಳುವುದಕ್ಕೆ ತೊಡಗುತ್ತಾನೆ. ಹಿಂದಿನ ಮಿತ್ರರನ್ನೆಲ್ಲ ಕಾಣುತ್ತಾನೆ. ಎಲ್ಲರೂ ಹೊಸಬರಾಗಿ ಕಾಣಿಸು-ತ್ತಾರೆ. ಯಾರೂ ಆತ್ಮೀಯರಾಗಿ ಕಾಣಿಸುವುದಿಲ್ಲ. ಈ ಕಥೆಯಲ್ಲಿ ಬೆಕೆಟ್‌ನ ನಾಟಕ 'ವೇಯ್ಟಿಂಗ್ ಫಾರ್ ಗೋಡೋಟ್' ನ ಸ್ವಲ್ಪ ಅಂಶವೂ, ಕಾಫ್ಕನ 'ಕ್ಯಾಸಲ್' ಕಾದಂಬರಿಯ ಸ್ವಲ್ಪ ಅಂಶವೂ—ಅಯನೆಸ್ಕೋನ ಬೇಡದ, ಅರ್ಥಗರ್ಭಿತ ಮಾತು-ಗಳಂತವೂ ಇವೆ. ಭಯಾನಕ ಘಟನೆಗಳು ಮನುಷ್ಯನ ನೈರಾಶ್ಯ ಮತ್ತು ವ್ಯರ್ಥ ಪ್ರಯತ್ನ ಗಳ ಮೂಲಕ ಪ್ರತ್ಯೇಕ ಜಗತ್ತನ್ನು ಕಾಣುವ ಪ್ರಯತ್ನ ಕಂಡು ಬರುತ್ತದೆ.

ಮಾನವನ ಪ್ರಾಪಂಚಿಕ ವ್ಯವಹಾರಗಳಿಂದ ಉಂಟಾಗುವ ದೌರ್ಭಾಗ್ಯಗಳಿಗಿಂತಲೂ ಈ ವಿಮುಖತಾ ಭಾವನೆ ಅಧಿಕವಾಗಿದೆಯೋ ಎಂಬಂತೆ ಕಾಣಿಸಿಕೊಳ್ಳುತ್ತದೆ. ಈ ವಿಮುಖತೆ ಸಮಾಜದ ಮೇಲೆ ಒಂದು ವೈಚಾರಿಕ ಹಾಗು ನಿಶ್ಚಿತ ತೀರ್ಪನ್ನು ನೀಡಲು ಶಕ್ತವೆನಿಸುವುದಿಲ್ಲ, ಏಕೆಂದರೆ ಕಾದಂಬರಿಕಾರನ ಉತ್ಪ್ರೇಕ್ಷೆಯೇ ಇದರ ಕಥಾವಸ್ತು. ಇದನ್ನು ಆಯ್ದುಕೊಂಡವನೂ ಕಾದಂಬರಿಕಾರನೇ. ಅಂತರ್ಧ್ಯಾನ ಮತ್ತು ಏಕಾಂತ ಸ್ಥಿತಿಯ ವ್ಯೋಮಗರ್ಭದಿಂದ ಮೂಡಿ ಬಂದ ಮತ್ತೊಂದು ಕಾದಂಬರಿ "ಇರುಳಿನ ಆತ್ಮ". ಕಥಾ ಸಂವಿಧಾನ ತುಂಬ ಲಲಿತ ಮನೋಹರವಾದ ಮತ್ತೊಂದು ಕಿರು ಕಾದಂಬರಿ 'ಮಂಜು' 1965ರಲ್ಲಿ ಬರೆದದ್ದು ನಿಷ್ಪ್ರಯೋಜಕ ನಿರೀಕ್ಷೆಯಲ್ಲಿ ಇಬ್ಬರು ಕಾದು ಕುಳಿತ ಕಥೆ. ನೈನಿಟಾಲಿಗೆ ಪ್ರವಾಸಿಯಾಗಿ ಬಂದಿದ್ದ ಯುವಕನಲ್ಲಿ ಅನುರಕ್ತಿಗೊಂಡ ವಿಮಲ, ಅವನು ಮತ್ತೆ ಬರುವೆನೆಂದು ಹೇಳಿ ಹೋದ ಮಾತನ್ನು ನಂಬಿ ನಿರೀಕ್ಷಿಸುತ್ತಾ ಕುಳಿತಿರುತ್ತಾಳೆ—ಮತ್ತೊಬ್ಬ ಭೋಟ್ಯ ಯುವಕ; ಆಂಗ್ಲ ಪ್ರವಾಸಿಯೊಬ್ಬನಿಗೂ ಆ ಪರ್ವತ ಪ್ರದೇಶದ ಹೆಣ್ಣೊಬ್ಬಳಿಗೂ ಆಕಸ್ಮಿಕ ಸನ್ನಿವೇಶದಲ್ಲಿ ಜನಿಸಿದ ಹುಡುಗ; ತನ್ನ ಹತ್ತಿರ ಇದ್ದ ಮಸುಕಾದ ಜನ್ಮದಾತೃವಿನ ಚಿತ್ರವನ್ನು ಇರಿಸಿಕೊಂಡು ಜೀವನದಲ್ಲಿ ಒಮ್ಮೆಯಾದರೂ ಆತನನ್ನು ಕಾಣಬೇಕು ಎಂದು ಪರಿತಪಿಸುತ್ತಾ ಕುಳಿತಿರುತ್ತಾನೆ. 'ಆಕಸ್ಮಿಕವಾಗಿ' ಎಂದು ಹೇಳದೇ ಇದ್ದಿದ್ದರೆ—ಅದು ಕ್ರೂರವಾಗಿ ಮನಸ್ಸನ್ನು ಇರಿಯು-ತ್ತಿತ್ತು. ಅಲ್ಲಲ್ಲಿ ಚದುರಿದ ಕಥಾಂಶಗಳನ್ನು ಹೇಗಾದರೂ ಒಂದುಗೂಡಿಸುವ ಪ್ರಯತ್ನ ವಾಸುದೇವನ್ ನಾಯರ್ ಸೃಷ್ಟಿಸುವ ಪಾತ್ರಗಳಲ್ಲಿ ಕಂಡು ಬರುತ್ತದೆ. ಇತ್ತೀಚಿನ 'ಕಾಲಂ' ಕಾದಂಬರಿಯಲ್ಲಿ ಮಾತ್ರ ಜಗತ್ತಿನ ವಕ್ರಮಾರ್ಗಗಳ ವಿಷಯವಾಗಿ ಸಮಾಧಾನ ನೀಡುವ ಸಾದೃಶ್ಯ ಕಂಡು ಬರುತ್ತದೆ. ಇದರಲ್ಲಿ ಕೂಡ ಎಲ್ಲವನ್ನೂ ಸಹಿಸಿಕೊಂಡು ಹೋಗುವ ಮನಃ ಪ್ರವೃತ್ತಿಯಲ್ಲದೆ ಪ್ರತಿಭಟಿಸುವ ವಿರೋಧ ಭಾವನೆ ಕಾಣಿಸುವುದಿಲ್ಲ.

'ಅಸುರ ಬೀಜ' (ಅಸುರವಿತ್ತು) ಎಂ. ಟಿ. ವಾಸುದೇವನ್ ನಾಯರ್ ಅವರ ಎರಡನೆ ಕಾದಂಬರಿ (1962). ನಾಯರರ ಅವಿಭಕ್ತ ಕುಟುಂಬದ ಅವನತಿಯನ್ನು ಚಿತ್ರಿಸುವ ವಿಶಿಷ್ಟ ಕಥಾವಸ್ತು ಈ ಕಾದಂಬರಿಯದು. ಒಂದು ದೃಷ್ಟಿಯಲ್ಲಿ ಇದು ಹಳೆಯ ಸಾಹಸ ಕೃತ್ಯಗಳನ್ನು ಕುರಿತ ಕಾದಂಬರಿ. ಅಷ್ಟಾಗಿ ರುಚಿಸುವ ಕಾದಂಬರಿಯೇನಲ್ಲ. ಕಥೆ, ಅನೇಕ ಸಾಹಸಗಳ ಸುರುಳಿಯನ್ನೊಳಗೊಂಡದ್ದು. ಇಲ್ಲಿ ಪ್ರತಿನಾಯಕ ಅನೇಕ ದುರ ದೃಷ್ಟಗಳ ಸೆಳೆತಕ್ಕೆ ಸಿಕ್ಕಿ ಕೊಚ್ಚಿಕೊಂಡು ಹೋಗುತ್ತಾನೆ. ಈ ಕಾದಂಬರಿಯ ನಾಯ ಕನೂ ಅತಿ ಭೀತಿಯನ್ನುಂಟುಮಾಡುವ, ಅಸ್ಪಷ್ಟ ದಿಗಂತದಲ್ಲಿ ಉಳಿದು ಅಲ್ಲಿಂದ ಪಾರಾಗುವ ಬಗೆಯನ್ನು ಚಿಂತಿಸುತ್ತಾ ಉಳಿಯುವುದನ್ನು ಕಾಣುತ್ತೇವೆ. ಅದನ್ನು ಗೆದ್ದು ನಿಲ್ಲುವ ಭರವಸೆಯೂ ಕಂಡು ಬರುವುದಿಲ್ಲ.

ಇದೇ ವಸ್ತುವನ್ನು ಆಯ್ದುಕೊಂಡು ಬರೆದ ಇದಕ್ಕೂ ಮೊದಲಿನ ಕಾದಂಬರಿಯನ್ನು (1958) ಇಲ್ಲಿ ನೀಡಲಾಗಿದೆ. ಕಾದಂಬರಿಯ ಹೆಸರು ಚೌಕಟ್ಟಿನ ಮನೆ.* ಇದೊಂದು ಸಾಂಕೇತಿಕ ಶಬ್ದ. ಪ್ರಾಚೀನ ರೀತಿಯ ಕಟ್ಟಡ. ಅವಿಭಕ್ತ ಕುಟುಂಬ ಜೀವನದಲ್ಲಿ ವಿಶ್ವಾಸವನ್ನಿರಿಸಿಕೊಂಡು ಬಾಳುತ್ತಿದ್ದ ಸಾಮಾಜಿಕ ಪದ್ಧತಿಯನ್ನು ಪ್ರತಿನಿಧಿಸುವ ಶಬ್ದ. ಮಧ್ಯೆ ಒಂದು ಅಂಗಳ. ಅದಕ್ಕೆ ಹೊಂದಿಕೊಂಡು ಸುತ್ತಲೂ ಕೋಣೆಗಳು. ಅಂತಹುದು ಎಷ್ಟು ಬೇಕಾದರೂ ಇರಬಹುದು. ಹೀಗೆ ಅವಿಭಕ್ತ ಕುಟುಂಬ ವೃದ್ಧಿಯಾಗುತ್ತಾ ಹೋದಂತೆಲ್ಲ ಕಟ್ಟಡವನ್ನೂ ವಿಸ್ತರಿಸುತ್ತಾ ಹೋಗಲು ಅನುಕೂಲವುಳ್ಳದ್ದು.

ಈ ಕಥೆ ಒಬ್ಬ ಹುಡುಗನ ಬದುಕಿನ ಹೋರಾಟಗಳಿಗೆ ಸಂಬಂಧಿಸಿದ್ದು. ಮನೆಯ ಹಿರಿಯರ ಇಚ್ಛೆಗೆ ವಿರುದ್ಧ ತಾನು ಪ್ರೇಮಿಸಿದ ವ್ಯಕ್ತಿಯೊಡನೆ ಓಡಿಹೋಗಿ ಬಾಳಿದ ಹೆಣ್ಣಿನ ಮಗ. ತರವಾಡು ಮನೆ**ಯಲ್ಲಿ ತಾನು ಸ್ಥಾನವನ್ನು ಪಡೆಯಲು ಹೋರಾಡಿದ ಹುಡುಗ—ಆ ಕುಟುಂಬದಲ್ಲಿ ಒಬ್ಬನಾಗಿ ಅಂಗೀಕರಿಸಲ್ಪಟ್ಟ. ಅದಕ್ಕೆ ಕಾರಣ ಅವನು ಆ ಕುಟುಂಬದ ಹಕ್ಕುದಾರನಾಗಿದ್ದದ್ದು. ಆದರೆ ಆ ಮನೆಗೆ ಯಜಮಾನನಾಗಿದ್ದ ಕಠಿಣ ಸ್ವಭಾವದ ದೊಡ್ಡ ಮಾವನ ಹೃದಯ ಮಾತ್ರ ಅವನನ್ನು ಅಂಗೀಕರಿಸಲಿಲ್ಲ. ತಾಯಿ-ಯನ್ನು ತಪ್ಪಾಗಿ ಭಾವಿಸಿ ಮಗನೂ ದೂರ ನಿಂತ. ಅನಾಥಳೂ ವಿಧವೆಯೂ ಆದ ಆಕೆ ಮಗನ ವಿದ್ಯಾಭ್ಯಾಸವನ್ನು ಮುಂದುವರಿಸಲು ಹೃದಯಾನುಕಂಪವುಳ್ಳ ವ್ಯಕ್ತಿ-ಯೊಬ್ಬನನ್ನು ಆಶ್ರಯಿಸಿದಳು. ಗೊಡ್ಡು ಹರಟೆ ಹೊಡೆಯುವವರ ಸುಳ್ಳು ಸುದ್ದಿಯನ್ನೇ ಬಲವಾಗಿ ನಂಬಿ ತಾಯಿಗೆ ಅವಮಾನ ಮಾಡಿದ. ಅವಳು ಆ ವ್ಯಕ್ತಿಯಿಂದ ಸಹಾಯ ಪಡೆದದ್ದು ಸಂಶಯಕ್ಕೆ ಆಸ್ಪದವನ್ನುಂಟುಮಾಡುವ ಸಂದರ್ಭದಲ್ಲಾಗಿತ್ತು. ಹುಡುಗ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಾನೆ; ಪ್ರಗತಿ ಹೊಂದುತ್ತಾನೆ, ನೌಕರಿಯನ್ನೂ

---

* ಪೌಳಿ ಮನೆ, ನಾಲ್ಕು ಸೂತ್ರದ ಮನೆ, ತೊಟ್ಟಿ ಮನೆ. ** ಕುಟುಂಬದ ಮನೆ.

ಪಡೆಯುತ್ತಾನೆ. ಆಮೇಲೆ ಕುಟುಂಬದಲ್ಲಿ ಸ್ಥಾನವನ್ನು ಪಡೆಯಲು ಊರಿಗೆ ಹಿಂದಿರುಗುತ್ತಾನೆ. ಅಷ್ಟರಲ್ಲಿ ಕುಟುಂಬದ ಐಶ್ವರ್ಯ ಕ್ರಮವಾಗಿ ಕ್ಷಯಿಸುತ್ತಾ ಬಂದಿರುತ್ತದೆ. ಅವಿಭಕ್ತ ಕುಟುಂಬದ ಪದ್ಧತಿಯನ್ನು ಪುನರುತ್ಥಾನಗೊಳಿಸುವ ಇಚ್ಛೆ ಅವನದಾಗಿರಲಿಲ್ಲ. ಆದ್ದರಿಂದಲೇ ಅವನು ಆ ಹಳೆಯ ಕಟ್ಟಡವನ್ನು ಕ್ರಯಕ್ಕೆ ಕೊಂಡುಕೊಳ್ಳುತ್ತಾನೆ. ಆಗ ಮಾತ್ರ ಅವನಿಗುಂಟಾಗಿದ್ದ ಅತೀವ ಕಹಿ ನೆನಪುಗಳನ್ನು ಹೋಗಲಾಡಿಸಿಕೊಂಡು ತನಗಾಗಿ ಒಂದು ಹೊಸ ಮನೆಯನ್ನು ಕಟ್ಟಿಸಿಕೊಳ್ಳಲು ಸಾಧ್ಯ ಎನ್ನಿಸುತ್ತದೆ.

ಅವಿಭಕ್ತ ಕುಟುಂಬದಿಂದ ಬೇರ್ಪಟ್ಟ ಹೊಸ ರೀತಿಯ ಕುಟುಂಬದ ಪ್ರಾರಂಭ ಎನ್ನುವ ನಿರ್ಧಾರವೇ ಪರಿವರ್ತನೆಯ ಸಂಕೇತ ಎನ್ನುವುದು ಕೂಡ ಅಷ್ಟೊಂದು ಸಮರ್ಪಕವಾದುದಲ್ಲ.

ತನಗರಿವಿಲ್ಲದ ಪರಿಸ್ಥಿತಿಯ ಒತ್ತಡಗಳಿಗೆ ಸಿಕ್ಕಿ ಬಾಲ್ಯದ ಕಷ್ಟಮಯ ಜೀವನದ ನೆನಪುಗಳಿಂದ ವಿವೇಕ ಮತ್ತು ಸಹಾನುಭೂತಿಯನ್ನು ಹೊಂದಿ ಬದುಕನ್ನು ಉತ್ತಮ ರೀತಿಯಲ್ಲಿ ರೂಪಿಸಿಕೊಂಡದ್ದು ಈ ಕಾದಂಬರಿಯಲ್ಲಿ ಪ್ರಕಟಗೊಳ್ಳುತ್ತದೆ.

**ಕೃಷ್ಣ ಚೈತನ್ಯ**

# 1

ಬೆಳೆಯುತ್ತಾ, ಬೆಳೆಯುತ್ತಾ ದೊಡ್ಡವನಾಗುತ್ತೇನೆ. ಕೈಗಳಿಗೆ ಒಳ್ಳೆಯ ಬಲ ಬರುತ್ತದೆ. ಆಗ ಯಾರಿಗೂ ಭಯಪಡಬೇಕಾಗಿಲ್ಲ. ತಲೆಯೆತ್ತಿ ನಿಲ್ಲಬಹುದು. ಯಾರಾದರೂ "ಯಾರೋ ನೀನು?" ಎಂದು ಕೇಳಿದರೆ, ಹೆದರದೆ ಗಟ್ಟಿಯಾದ ಧ್ವನಿಯಲ್ಲಿ ಹೇಳುತ್ತೇನೆ: "ಕೋಂಪುಣ್ಣಿ ನಾಯರ ಮಗ ಅಪ್ಪುಣ್ಣಿ" ಎಂದು.

ಆಗ ಒಮ್ಮೆ ಸೈದಾಲಿ ಕುಟ್ಟಿಯನ್ನು ಕಂಡುಹಿಡಿಯದೆ ಬಿಡುವುದಿಲ್ಲ. ಅವನನ್ನು ಹಿಡಿದುಕೊಳ್ಳುತ್ತೇನೆ. ಆ ಸೈದಾಲಿ ಕುಟ್ಟಿಯ ಕುತ್ತಿಗೆ ಹಿಡಿದುಕೊಳ್ಳುತ್ತೇನೆ. "ನೀನಲ್ಲವೆ? ನೀನಲ್ಲವೆ ನನ್ನ—"

—ಅದನ್ನು ನೆನಸಿಕೊಂಡಾಗ ಅಪ್ಪುಣ್ಣಿಯ ಕಣ್ಣುಗಳಲ್ಲಿ ನೀರಾಡುತ್ತದೆ.

ಸೈದಾಲಿ ಕುಟ್ಟಿಯನ್ನು ಪ್ರತ್ಯಕ್ಷವಾಗಿ ಕಾಣುವ ಆ ದೃಶ್ಯ ಎಷ್ಟೋ ಸಲ ಕಣ್ಣೆದುರಿಗೆ ಬರುತ್ತದೆ. ನಿದ್ದೆಬಾರದೆ ಕಣ್ಣುಮುಚ್ಚಿ ಮಲಗಿದ್ದಾಗಲೂ, ಕುಂಡಂಗಲ್ಲಿನವರ ಮೆಟ್ಟಿಲ ಕೆಳಗಿರುವ ಕೇಸರ ವೃಕ್ಷದ ತಂಪಾದ ನೆಳಲಿನಲ್ಲಿ ಒಂಟಿಯಾಗಿ ಕುಳಿತಾಗಲೂ......

ಯಾರು ಆ ಸೈದಾಲಿ ಕುಟ್ಟಿ? ಅಪ್ಪುಣ್ಣಿ ಕಂಡದ್ದಿಲ್ಲ. ಕಾಣಬಾರದು ಎಂದು ಅವನು ಪ್ರಾರ್ಥಿಸುವುದುಂಟು. ಸ್ವಲ್ಪಕಾಲ ಕಳೆದ ಮೇಲೆ ಕಂಡರೆ ಸಾಕು: ಬೆಳೆದು ದೊಡ್ಡವನಾದ ಮೇಲೆ. ಆಗ ಕಂಡುಹಿಡಿದರಾಯ್ತು......ಆದರೆ ಸಾಯಂಕಾಲ ಅಂಗಡಿಗೆ ಹೊರಟಿದ್ದಾಗ ಅವನು ಸೈದಾಲಿ ಕುಟ್ಟಿಯನ್ನು ಕುರಿತು ಯೋಚಿಸಿರಲಿಲ್ಲ. ಆತನನ್ನು ಕಾಣುತ್ತೇನೆಂದು ಭಾವಿಸಿಯೂ ಇರಲಿಲ್ಲ.

ಅಂದು ಸ್ಕೂಲ್ ಬಿಟ್ಟು ಮನೆಗೆ ಬರುವುದು ತಡವಾಗಿತ್ತು. ದೇವಸ್ಥಾನದ ಮಾರ್ಗವಾಗಿ ಜೊತೆಗಾರರೊಂದಿಗೆ ಹೊರಟಿದ್ದ. ಶಾರಡಿ ಗುಡ್ಡದ ಗೇರು ಹಣ್ಣಿನ ತೋಟದಿಂದ ಗೇರು ಹಣ್ಣು ಕೆಡವಿದ್ದ. ಪರಂಗೋಡನ ತೋಟದಿಂದ ಅಚ್ಯುತ ಕುರುಪ್ಪನ ತೋಟದಿಂದ, ಗೇರು ಹಣ್ಣು ಬೀಳಿಸುವುದನ್ನಂತು ನೋಡುವುದೇ ಬೇಡ. ಅವರದೊಂದು ದೊಡ್ಡ ಗುಂಪು. ಕಂಡು ಹಿಡಿದರೆ ತಂದೆ ತಾಯಿಗಳಿಗೆ ಹೇಳುತ್ತಾರೆ. ಶಾರಡಿಯನ್ನು ಕೇಳಿದರೆ ಅನುಮತಿ ಕೊಡುತ್ತಾನೆ. ಆ ಮುದುಕನಿಗೆ ಗೇರು ಬೀಜ ಮಾತ್ರ ಸಿಕ್ಕಿದರೆ ಸಾಕು, ಆತನಿಗೆ ಮಕ್ಕಳಿಲ್ಲದ್ದರಿಂದ ಮಕ್ಕಳನ್ನು ಕಂಡರೆ ಇಷ್ಟೊಂದು ಪ್ರೀತಿ.

ಆದನ್ನು ದಾಟಿ ಗುಡ್ಡದ ಹತ್ತಿರ ಬಂದಾಗ ನೆನೆದು ನಿಂತಿದ್ದ ಹುಲ್ಲಿನ ಕಂತೆಗಳನ್ನು ದಾಟಿ ಕಾಲಿನಿಂದ ಕೆದರಿ ಅತ್ತಿತ್ತ ಹರಡುತ್ತಾ ಆಟವಾಡಿಕೊಂಡು ಹೊತ್ತು ಹೋದದ್ದೇ ತಿಳಿಯಲಿಲ್ಲ.

ಹೊತ್ತಿಗೆ ಸರಿಯಾಗಿ ಶಾಲೆ ಬಿಟ್ಟು ಮನೆ ತಲಪ್ಪುವ ದಿವಸಗಳಲ್ಲಿ ನಂಬೂದ್ರಿಗಳ ಮನೆಯಿಂದ ಕೆಲಸ ಮುಗಿಸಿ ಅಮ್ಮ ಮರಳುತ್ತಿದ್ದಿಲ್ಲ. ಅಡುಗೆ ಮನೆಯಲ್ಲಿ ಒಲೆಯ ಮೇಲೆ ಇಟ್ಟಿದ್ದ ಗಂಜಿ ಪಾತ್ರೆಯನ್ನು ತೆಗೆದುಕೊಂಡು ಒಂದೇ ಗುಟುಕಿಗೆ ಕುಡಿದು, ಕೊಟ್ಟಿಗೆಯಲ್ಲಿದ್ದ ಮುತ್ತಜ್ಜಿಯ ಹತ್ತಿರ ಹೋಗಿ ಹರಟೆ ಹೊಡೆಯುತ್ತಿದ್ದಾಗಲೇ ಅಮ್ಮ ಬರುತ್ತಿದ್ದದ್ದು.

ಆದರೆ ಅಂದು ಅವನು ಬಂದಾಗ ಅಮ್ಮ ಅಡಿಗೆಮನೆಯಲ್ಲಿ ಅಡಿಗೆ ಕೆಲಸದಲ್ಲಿ ನಿರತಳಾಗಿದ್ದಳು.

"ಯಾಕೋ ಇಷ್ಟು ತಡ?"

"ಯಾಕೂ ಇಲ್ಲಮ್ಮ."

"ಎಷ್ಟು ಸಲ ಹೇಳ್ದೆ ಅಪ್ಪುಣ್ಣೀ. ಸಂಜೆ ಆಗೋದರೊಳಗೆ ಮನೆಗೆ ಬರಬೇಕೂಂತ."

ಅದಕ್ಕೆ ಅವನೇನೂ ಪ್ರತ್ಯುತ್ತರ ಕೊಡಲಿಲ್ಲ. ಅವನಿಗೆ ಗೊತ್ತು. ಹೆಚ್ಚು ಅಂದರೆ ತಾಯಿ ಅಷ್ಟೇ ಸಿಟ್ಟು ಮಾಡಿಕೊಳ್ಳುವುದು ಎಂದು.

ನಿಂತುಕೊಂಡೇ ಗಂಜಿ ಕುಡಿದ. ಆಗ ತಾಯಿ ಹೇಳಿದಳು:

"ಮಗಾ, ಹೋಗಿ ಆ ಯೂಸೂಫಿನ ಅಂಗಡಿಯಿಂದ ಎರಡಾಣೆ ತೆಂಗಿನೆಣ್ಣೆ ಕೊಂಡ್ಕೊಂಡು ಬಾ" ಎಂದು.

ಅವನು ಹೊರಕ್ಕೆ ನೋಡಿದ. ಬಿಸಿಲು ಸ್ವಲ್ಪವೂ ಇಲ್ಲ. ಆದರೆ ಕತ್ತಲಾಗಿಲ್ಲ. ಆಕಾಶ ಕಪ್ಪಾಗುತ್ತಿದೆ. ಕತ್ತಲಾದರೆ, ಎರಡು ಕಡೆಗಳಲ್ಲೂ ಕೇದಿಗೆ ಮರಗಳು ಬೆಳೆದಿರುವ ಆ ಸಣ್ಣ ದಾರಿಯಲ್ಲಿ ಹೋಗಲು ತುಂಬ ಭಯ. ಆ ದಾರಿಯ ಪಕ್ಕದಲ್ಲಿಯೇ ಮಂತ್ರವಾದಿ ಪರೋಮನನ್ನು ದಹಿಸಿದ್ದು. ಅವನಿಗೆ ಸ್ವಲ್ಪ ಔದಾಸೀನ್ಯವುಂಟಾಯಿತು.

"ನಾಳೆ ತಂದರಾಗದಮ್ಮ?"

"ಒಂದು ತೊಟ್ಟೂ ಇಲ್ಲ ಕಣೋ. ಓಡಿಹೋಗಿ ಬಾ."

ಅವನು ಮತ್ತೂ ಅನುಮಾನಿಸುತ್ತ ನಿಂತಿದ್ದ. ಭಯವಾಗುತ್ತದೆ ಎಂದು ಹೇಳಿದರೆ ಅಮ್ಮ ಹೋಗಬೇಡ ಎನ್ನುತ್ತಾಳೆ. ಆದರೆ ಅದು ಅವಮಾನ ಅಲ್ಲವೇ? ಅವನು ಅಷ್ಟು ಸಣ್ಣ ಹುಡುಗನೇನೂ ಅಲ್ಲ. ಎಂಟನೆಯ ತರಗತಿಯಲ್ಲಿ ಓದುತ್ತಿದ್ದಾನೆ. ಮಾಸ್ತರು ಅವನನ್ನು ಕ್ಲಾಸಿನ ಮಾನಿಟರ್ ಆಗಿ ಮಾಡಿದ್ದಾರೆ.

"ಹ್ಞೂ, ಹೋಗು ಅಪ್ಪುಣ್ಣೀ, ಬೇಗ ತಂದ್ರೆ ಈರುಳ್ಳಿ ಒಗ್ಗರಣೆ ಹಾಕಿ ಅಡುಗೆ ಮಾಡ್ತೀನಿ."

ಮತ್ತೆ ಅವನು ಅನುಮಾನಿಸುತ್ತಾ ನಿಲ್ಲಲಿಲ್ಲ. ದುಡ್ಡನ್ನು ಕೆಂಪು ಷರಾಯಿಯ ಕಿಸೆಯಲ್ಲಿಟ್ಟುಕೊಂಡು ಆ ಶೀಸೆಯನ್ನು ಹಿಡಿದುಕೊಂಡು ಅಂಗಡಿಯ ಕಡೆಗೆ ಒಂದು ಓಟ ಕಿತ್ತ.

ಕೇದಿಗೆ ವನಗಳ ನಡುವಣ ಕಿರುದಾರಿಯನ್ನು ಸಮೀಪಿಸಿದಾಗ ಒಂದು ನಿಮಿಷ ಸಂಶಯಪಟ್ಟುಕೊಂಡು ನಿಂತ. ಇಲ್ಲ, ಅಷ್ಟೊಂದು ಕತ್ತಲಾಗಿಲ್ಲ. ಏನಿದ್ದರೂ ದಟ್ಟವಾಗಿ ಬೆಳೆದಿರುವ ಕೇದಿಗೆ ಮರಗಳಲ್ಲವೆ ಇಕ್ಕಡೆಗಳಲ್ಲಿಯೂ? ಕೇದಿಗೆ ಮರದ ಬುಡದ ಬಿಲಗಳಲ್ಲಿ ದುಷ್ಟ ಸರ್ಪಗಳು ವಾಸಮಾಡುವುವು. ಕೇದಿಗೆ ಹೂವಿನ ವಾಸನೆ ಸರ್ಪಗಳಿಗೆ ತುಂಬ ಇಷ್ಟ. ಸುವಾಸನೆ, ಒಳ್ಳೆಯ ಸಂಗೀತ, ಸುಂದರ ಸ್ತ್ರೀಯರು. ಇವುಗಳೆಲ್ಲ ವಿಷವಿರುವ ನಾಗರ ಹಾವಿಗೆ ತುಂಬ ಇಷ್ಟವಂತೆ. ವಿಷವಿರುವ ಹಾವುಗಳಿಗೆ ಮಾತ್ರವೋ ಇದು?

ಆ ಕಾಲುದಾರಿಯ ಹಳ್ಳ-ಕೊಳ್ಳಗಳೂ, ಏರು-ಪೇರುಗಳೂ ಅವನಿಗೆ ಚೆನ್ನಾಗಿ ಪರಿಚಯವಿದೆ. ನಿಧಾನವಾಗಿ ಹೋದರೆಯಲ್ಲವೆ ಹೆದರಿಕೆಯಾಗುವುದು? ಜೋರಾಗಿಯೇ ಓಟ ಕಿತ್ತ. ಆಚೆ ಅಂಚಿನ ಬಯಲಿನ ಹತ್ತಿರ ಹೋದಾಗಲೇ ಓಟ ನಿಲ್ಲಿಸಿದ್ದು.

ಒಂದು ಗದ್ದೆ ಬದಿಯನ್ನು ದಾಟಿದರೆ, ಹೊಳೆ ಪಕ್ಕದಲ್ಲಿ ಅಂಗಡಿ. ಎಲ್ಲವೂ ನೆಲ್ಲು ಹುಲ್ಲು ಹೊದಿಸಿದ ಅಂಗಡಿಗಳು. ಹೆಂಚು ಹೊದಿಸಿದ ಅಂಗಡಿ ಇರುವುದು ಒಂದೇ. ಅದರಲ್ಲಿ ವ್ಯಾಪಾರ ಇಲ್ಲ. ಮಹಡಿಯ ಮೇಲೆ ಯಾರೋ ವಾಸವಾಗಿದ್ದಾರೆ.

ಅಂಗಡಿಗಳಲ್ಲಿ ದೀಪ ಹಚ್ಚುತ್ತಿದ್ದಾರೆ. ಹೆಚ್ಚಿನ ಅಂಗಡಿಗಳಲ್ಲಿ ಚಿಮಿಣಿ ಎಣ್ಣೆಯ ಹಳೆಯ ಕಾಲದ ದೀಪಗಳು. ಯೂಸೂಫನ ಅಂಗಡಿಯಲ್ಲಿ ಮಾತ್ರ ಪೆಟ್ರೋಮ್ಯಾಕ್ಸ್ ಬೆಳಕು. ಅದೊಂದೇ ಊರಿನಲ್ಲೆಲ್ಲ ದೊಡ್ಡ ಅಂಗಡಿ. ಅಲ್ಲಿ ಮಾತ್ರ ವಿಷು[1] ಬಂದಾಗ ಪಟಾಕಿ ಮಾರುವುದು. ಹೊಸದಾಗಿ ಪಟ್ಟಾಂಬಿಯಿಂದ ಒಬ್ಬ ದರ್ಜಿ ಬಂದಿದ್ದಾನೆ. ಕುಡಲ್ಲೂರಿಗೆ ಬಂದ ಮೊದಲನೆಯ ಹೊಲಿಗೆಯವನಾದ ಅವನು ಮಿಷನ್ ಇಟ್ಟುಕೊಂಡು ಬಟ್ಟೆ ಹೊಲಿಯುತ್ತಿರುವುದು ಯೂಸೂಫನ ಅಂಗಡಿಯಲ್ಲಿ.

ಯೂಸೂಫನ ಅಂಗಡಿಗೆ ಹೋಗುವುದೆಂದರೆ ಅಪ್ಪುಣ್ಣಿಗೆ ತುಂಬ ಇಷ್ಟ. ಜೊತೆಗೆ ಬಟ್ಟೆ ಹೊಲಿಯುವ ಸೂಜಿ 'ಕಟ ಕಟ' ಎಂದು ಶಬ್ದ ಮಾಡುತ್ತ, ವೇಗವಾಗಿ ಮೇಲೆ ಕೆಳಗೆ ಆಡುವುದನ್ನೂ. ಆಕರ್ಷಕವಾದ ಬಟ್ಟೆಗಳು ಸುರುಳಿ ಸುರುಳಿಯಾಗಿ ಮುಂದೆ ಬರುವುದನ್ನೂ ನೋಡುವ ಆಸೆ.

ತುಂಬ ದಿನಗಳಿಂದ ಆಲೋಚಿಸುತ್ತಿದ್ದಾನೆ, ಇನ್ನು ಮುಂದೆ ಹೊಲಿದ ಬಟ್ಟೆ ಕೊಂಡುಕೊಳ್ಳಬೇಡ ಎಂದು ತಾಯಿಯ ಹತ್ತಿರ ಹೇಳಬೇಕು ಎಂದು. ಅವನು ಹಾಕಿಕೊಳ್ಳುವ ಮೂರು ಅಂಗಿಗಳೂ ಬಟ್ಟೆ ಮಾರುವ ರಾವುತ್ತರ್ ಬೀದಿಯಲ್ಲಿ ಸಾರುತ್ತಾ ಹೋದಾಗ ಕೊಂಡುಕೊಂಡವು. ಎರಡು ತುಂಬ ಸಡಿಲ. ಒಂದು ತುಂಬ ಬಿಗಿ. ಬಟ್ಟೆ ಕೊಂಡುಕೊಂಡು ದರ್ಜಿಯ ಕೈಯಲ್ಲಿ ಕೊಡಬೇಕು. ಆಗ ಅಂಗಡಿಗೆ ಬಂದು ಎಲ್ಲರೂ ನೋಡುತ್ತಾ ಇದ್ದಾಗ ದರ್ಜಿ ಅವನ ಅಳತೆ ತೆಗೆದುಕೊಳ್ಳಬೇಕು. ಟೇಪ್‌ನಿಂದ ಅಳತೆ

---

1 ವಿಷು: ಹೊಸ ವರ್ಷವನ್ನು ಸೂಚಿಸುವ ಹಬ್ಬ.

ತೆಗೆದುಕೊಂಡು ಹೋಲಿವರೆ ಆಂಪವಾಗಿರುತ್ತದೆ. ಬಟ್ಟೆ ಕತ್ತರಿಸುವುದನ್ನೂ ಹೊಲಿಯು ವುದನ್ನೂ ಸ್ವಲ್ಪ ಹೊತ್ತು ನೋಡುತ್ತ ನಿಲ್ಲಬಹುದಲ್ಲ!

ಅಪ್ಪುಣ್ಣಿ ಯೂಸೋಫನ ಅಂಗಡಿಯ ಹತ್ತಿರ ಬಂದಾಗ ತುಂಬ ಗಲಾಟೆಯಿತ್ತು. ಕೆಲಸ ಮುಗಿಸಿ ಕೂಲಿಯ ಬತ್ತವನ್ನು ತೆಗೆದುಕೊಂಡು ಬರುವ ಹೊಲತಿಯರು ಸಾಮಾನು ಕೊಂಡುಕೊಳ್ಳುವ ಸಮಯ. ಅಪ್ಪುಣ್ಣಿ ಅಂಗಡಿಯ ಜಗಲಿಯ ಮೇಲೆ ನಿಂತುಕೊಂಡಿದ್ದ. ಹೊತ್ತಾಯ್ತಲ್ಲ ದೇವರೇ!

ಕೇಪಿಗೆ ವನಗಳಲ್ಲಿ ನಾಗರ ಹಾವುಗಳು ಸಂಜೆ ಹೊತ್ತು ತಂಗುತ್ತವೆ. ಅಲ್ಲದೆ ಆ ವಾರಿಯ ಪಕ್ಕದಲ್ಲೇ ಮಂತ್ರವಾದಿ ಪರೋಮನನ್ನು ದಹಿಸಿರುವುದು.

"ಎರಡಾಣೆಗೆ ತೆಂಗಿನೆಣ್ಣೆ."

ಹೊಲತಿಯರ ಗದ್ದಲದ ಮಧ್ಯೆ ಮುಸಲಿಯಾರ್‌ಗೆ ಅದು ಕೇಳಿಸಲಿಲ್ಲ. ಅವರ ಮಧ್ಯದಲ್ಲಿ ನುಗ್ಗಿ ಹತ್ತಿರ ಹೋಗಲು ಅವನು ಹೆಜ್ಜೆ ಇಟ್ಟುನೋಡಿದ. ಅವರನ್ನು ಮುಟ್ಟಿಸಿಕೊಂಡರೂ ಚಿಂತೆಯಿಲ್ಲ. ಹೇಗೂ ಮನೆಗೆ ಹೋದ ಮೇಲೆ ಸ್ನಾನಮಾಡಬೇಕು. ಅವರ ಕಪ್ಪನೆಯ ದೇಹಗಳ ಹತ್ತಿರ ಹೋದಾಗ, ಬೆವರು, ಎಣ್ಣೆ, ಧೂಳು, ವಾಂತಿ ಬರಿಸುವ ಒಂದು ತರಹ ವಾಸನೆಯು ಬಂದಿತು. ಅವನು ಮತ್ತೆ ಹಿಂದಕ್ಕೆ ಬಂದು ನಿಂತು ಕೊಂಡ.

ಪೆಟ್ರೋಮ್ಯಾಕ್ಸಿನ ಸುತ್ತ ಚಿಟ್ಟೆಗಳು ಹಾರಾಡುತ್ತಿರುವುದನ್ನು ನೋಡುತ್ತಾ ನಿಂತು ಕೊಂಡಿದ್ದ.

ಅಷ್ಟರಲ್ಲಿ ಇಬ್ಬರು ಅಲ್ಲಿಗೆ ಬಂದರು. ಬಿಳಿಯ ಷರಟು, ಅಲ್ಲಲ್ಲಿ ಬಿಳಿಯ ಸಣ್ಣ ಮೀಸೆಯೂ ಇದ್ದ ಒಬ್ಬ ದಪ್ಪನಾದ ಗಿಡ್ಡನಾದ ಮನುಷ್ಯ. ಮತ್ತೊಬ್ಬ ದೋಣಿ ಕಡವಿನ ಹತ್ತಿರ ಎಷ್ಟೋ ವರ್ಷ ಚಹಾ ವ್ಯಾಪಾರ ಮಾಡಿ ನಷ್ಟಹೊಂದಿದ ಪದ್ಮನಾಭನ್ ನಾಯರ್. ಅವನು ಅಪ್ಪುಣ್ಣಿಗೆ ಗೊತ್ತು. ಅವನ ಇಬ್ಬರು ಮಕ್ಕಳು ಅವನ ತರಗತಿ ಯಲ್ಲೇ ಓದುತ್ತಿದ್ದಾರೆ.

ಅಪ್ಪುಣ್ಣಿ ಇನ್ನೂ ಸ್ವಲ್ಪ ದೂರಕ್ಕೆ ಸರಿದು ಅಂಗಡಿ ಬಾಗಿಲ ಹಲಗೆಗಳನ್ನೊರಗಿ ಕೊಂಡು ನಿಂತ.

"ವ್ಯಾಪಾರ ಭಾರಿ ಜೋರಾಗಿದೆಯಲ್ಲೋ ಸಾಹುಕಾರ?" ದೊಡ್ಡ ದೇಹದ ಗಿಡ್ಡನೆಯ ಮನುಷ್ಯ ಕೇಳಿದ. ಹೊಲತಿಯರು ಆ ಶಬ್ದವನ್ನು ಕೇಳಿ ತಿರುಗಿ ನೋಡಿ ದರು. ಮೇಜಿನ ಹತ್ತಿರ ಚಿಲ್ಲರೆ ಎಣಿಸುತ್ತಿದ್ದ ಯೂಸೋಫ್‌ಗೆ ಅವನು ಕಾಣಿಸಲಿಲ್ಲ.

"ಯಾರು ಅದು?"

ತೇಗದ ಎಲೆಯಲ್ಲಿ ಕೊತ್ತಂಬರಿಯನ್ನು ಕಟ್ಟಿ ಕೊಡುತ್ತಿದ್ದ ಮುಸಲಿಯಾರ್ ತನ್ನ ಕೆಂಪಾದ ಹಲ್ಲುಗಳನ್ನು ಪೂರ್ತಿ ತೋರಿಸುತ್ತಾ ಹೇಳಿದ:

"ಅರೆ ಅಲ್ಲಾ, ನೀ ಇನ್ನೂ ಸತ್ತಿಲ್ಲ; ಹಾಳಾದವನೆ !"

"ನಾನು ರೆಡಿ ಇದ್ದೇನೆ. ಇಸ್ರಾಯಿ[1]ಗೆ ಬೇಡವಾಗಿರಬೇಕು."

ಯೂಸೂಫ್ ಎದ್ದುನಿಂತ. ಬಿಳಿಯ ಷರಟಿನವನನ್ನು ನೋಡಿದಾಗ ಅವನು ಹೇಳಿದ:

"ಅರೆ ಅಲ್ಲಾ ! ಇದು ಯಾರಪ್ಪಾ !"

ಮುಸ್ಲಿಯಾರ್ ಹೇಳಿದ:

"ನೀನು ಯಾವಾಗ ಬಂದೆ?"

"ಐದೂವರೆ ಗಂಟೆ ಗಾಡಿಯಲ್ಲಿ."

ಮುಸ್ಲಿಯಾರ್ ಪೊಟ್ಟಣ ಕಟ್ಟುವುದರ ಮಧ್ಯದಲ್ಲಿ ಹೇಳಿದ:

"ಇವನು ಒಳ್ಳೆ ಚೆನ್ನಾಗಿ ಆಗಿದ್ದಾನೆ, ಅಲ್ವೆ ಪದ್ಮನಾಭನ್ ನಾಯರೆ?"

ಪಕ್ಕದಲ್ಲಿ ಬೀಡಿ ಹತ್ತಿಸಿಕೊಂಡು ಸೇದುತ್ತಾ ಬಟ್ಟೆಗಳನ್ನು ನೋಡುತ್ತಾ ಇದ್ದ ಪದ್ಮನಾಭನ್ ಹೇಳಿದ:

"ಬೇರೆ ಊರಿನ ಊಟ ತಾನೆ?"

ಆ ಕಡೆ ತಿರುಗಿ ಹೊರಗೆ ಉಗಿಯುವುದಕ್ಕೆ ಹೋದಾಗ ಅವನು ಅಪ್ಪುಣ್ಣಿಯನ್ನು ಕಂಡ.

"ಏನೋ?"

"ಏನೂ ಇಲ್ಲ."

ಅಪ್ಪುಣ್ಣಿಗೆ ಅಳು ಬರುವಂತಾಯಿತು. ಸ್ವಲ್ಪ ಹೊತ್ತು ಹೋದರೆ ಅಳು ಬರುತ್ತೋ ಎಂದು ಭಯ. ಅವನು ಮುಖ ನೋಡದೆ ಹೇಳಿದ.

"ತೆಂಗಿನೆಣ್ಣೆ ಬೇಕಾಗಿತ್ತಾ?"

ಹೊಲತಿಯರ ಗುಂಪಿನಿಂದ ಗುಸುಗುಸು ಕೇಳಿಬಂತು.

"ಈ ಹುಡುಗ ಯಾರು?"

ಬಿಳಿ ಷರಟಿನ ಮನುಷ್ಯ ಪದ್ಮನಾಭನ್ ನಾಯರ ಹತ್ತಿರ ಕೇಳಿದ.

"ನಮ್ಮ ಬಡಗುವಮನೆ ಕೋಂದುಣ್ಣಿಯವರ ಮಗ."

ಅಪ್ಪುಣ್ಣಿ ತಲೆಯೆತ್ತಿ ನೋಡಲಿಲ್ಲ. ಹೊಲತಿಯರು ತಟ್ಟನೆ ಮಾತು ನಿಲ್ಲಿಸಿದರು. ಅಪ್ಪುಣ್ಣಿಗೆ ತೀರ ಹತ್ತಿರದಲ್ಲಿ ನಿಂತಿದ್ದ ಇಬ್ಬರು ತಮ್ಮತಮ್ಮಲ್ಲಿ ಏನೋ ಮಾತಾಡಿಕೊಳ್ಳುತ್ತಿದ್ದರು. ಮುಂದೆ ನಿಂತಿದ್ದವರು ಸ್ವಲ್ಪ ಜಾಗ ಬಿಟ್ಟು ನಿಂತರು. ಈಗ ಮುಟ್ಟಿಸಿಕೊಳ್ಳದೆ ಮುಂದೆ ಹೋಗಬಹುದು. ಮುಸಲಿಯಾರ್ ಕುಪ್ಪಿ ಈಸಿಕೊಂಡು ಅಳತೆ ಹಾಕಿ

---

1 ಮೃತ್ಯು, ಯಮ.

ಜಟಾಕನ್ನು ಟಿನ್ನಿನಲ್ಲಿ ಮುಳುಗಿಸಿ ಎರಡು ಸಲ ಹಾಕಿದ. ಒಂದು ತೊಟ್ಟು ಹೆಚ್ಚಿಗೆಯೂ.

ಕಾಸನ್ನು ಕೊಟ್ಟು ಎಲೆಯನ್ನು ಸುತ್ತಿ ಕುಪ್ಪಿಬಾಯಿಗೆ ಇಡುತ್ತಿರುವಾಗ ಆ ಬಿಳಿಯ ಪರಟಿನವನು ಕೇಳಿದ:

"ಒಬ್ಬನೇ ಹೋಗ್ತೀಯಾ?"

ತನ್ನ ಹತ್ತಿರವೇ ಕೇಳುತ್ತಿರುವುದು ಎಂದು ಮೊದಲು ಅನ್ನಿಸಲಿಲ್ಲ.

"ಹೊರಗೆ ಕತ್ತಲೆಯಾಗಿದೆಯಲ್ಲೋ ಹುಡುಗ?"

ಆಗ ಅವನು ಯಾರೂ ಕೇಳಿಸಿಕೊಳ್ಳದಂತೆ ಏನೋ ಪಿಸುಗುಟ್ಟಿದ.

ಅಧಿಕಾರಿಯ ಮನೆಯಲ್ಲಿ ಕೆಲಸಮಾಡುತ್ತಿದ್ದ ವಯಸ್ಸಾದ ಹೊಲತಿ ಕೋಚಿ ಗಟ್ಟಿಯಾಗಿ ಹೇಳಿದಳು:

"ನಿಲ್ಲಿ ಚಿಕ್ಕ ಸ್ವಾಮಿ. ಒಬ್ಬರೇ ಹೋಗಬೇಡಿ. ನಾನು ಆ ದಾರೀಲೇ ಬರ್ತೀನಿ."

ಕೋಚಿ ಕೇದಿಗೆ ಓಲೆಯಿಂದ ಸಂಪಾದಿಸಿದ ಹಣವನ್ನೂ, ವೀಳ್ಯದೆಲೆ ಕಟ್ಟನ್ನೂ ಅಂಗಡಿಯಿಂದ ಕೊಂಡುಕೊಂಡ ಸಾಮಾನುಗಳನ್ನೂ ಜಾಗರೂಕತೆಯಿಂದ ಇಟ್ಟುಕೊಂಡು ಹಿಂದಿನಿಂದ ಹೊರಟಳು.

ಪಕ್ಕದ ಅಂಗಡಿಯ ಚಿಮಣಿಯ ತೆಂಗಿನಗರಿ ಹೊತ್ತ[1] ಹೊತ್ತಿಸಿ ಹೇಳಿದಳು:

"ನಡೀರಿ, ಚಿಕ್ಕ ಸ್ವಾಮಿ."

ಅಪ್ಪುಣ್ಣಿಯ ಭಯ ಹೋಯಿತು. ಕಾಲುದಾರಿ ಕಡೆಯಾಗುವ ಹೊತ್ತಿಗೆ ಕೇದಿಗೆ ಹೂವಿನ ತಂಗಿ ನಿಂತಿದೆ ಅನ್ನಿಸಿತು. ಅಂಥೂ ಕಾಲಿನ ಹತ್ತಿರ ಬೆಳಕಿದೆ.

ದಾರಿಯಲ್ಲಿ ಅವನು ಕೇಳಿದ:

"ಅದ್ಯಾರು ಕೋಚಿ?"

"ಯಾರು ಚಿಕ್ಕ ಸ್ವಾಮಿ?"

"ಯೂಸೋಫನ ಅಂಗಡಿಯಲ್ಲಿ......"

"ಅದು ಸೈದಾಲಿಕುಟ್ಟಿ ಮಾಪಿಳ್ಳೆ ಅಲ್ವಾ?"

"ಯಾವ ಸೈದಾಲಿಕುಟ್ಟಿ?"

"ಮುಂಡತ್ತಾಯದ......ಊರು ಬಿಟ್ಟು ಹೋಗಿ ಯಾವುದೋ ಕಾಲ ಆಯ್ತಲ್ಲ."

"ಸೈದಾಲಿಕುಟ್ಟಿ !"

ಅವನ ಮೈ ರೋಮಗಳೆಲ್ಲ ನೆಟ್ಟಗಾದುವು.

ದಪ್ಪನಾದ ಗಿಡ್ಡವಾದ ಕೈಗಳು ಮೈತುಂಬಾ ಒತ್ತಾದ ರೋಮ. ಕೆಂಡದಂತಹ ದುಂಡು ಕಣ್ಣುಗಳು. ಅವನು ಸೈದಾಲಿಕುಟ್ಟಿ.

---

1 ಸೂಟಿ.

ಅವನೇ ಹೌದು......

ಹಿಂದೆ ದೇವಾಲಯದ ಮುಂದೆ ಕಥಕ್ಕಳಿ ನಡೆದಾಗ......ಬೆಳಗ್ಗೆ ಕಣ್ಣು ತೆರೆದಾಗ ಕಂಡ ನೋಟ ಅವನಿಗೆ ನೆನಪಾಯಿತು. ಭೀಮ ದುಶ್ಯಾಸನನ ಎದೆಯ ಮೇಲೆ ಕುಳಿತು ಕೊಂಡು ಹೊಟ್ಟೆಯನ್ನು ಬಗೆದು ಕರುಳಿನ ಮಾಲೆಯನ್ನು ಹೊರಕ್ಕೆ ತೆಗೆಯುತ್ತಿದ್ದ ದೃಶ್ಯ !

ಅದರ ಹಾಗೆ ಸೈದಾಲಿಕುಟ್ಟಿಯ ಎದೆಯ ಮೇಲೆ......ಆದರೆ ಅವನಿಗೆ ಅಷ್ಟು ಶಕ್ತಿ ಇಲ್ಲ, ದೊಡ್ಡವನಾಗಿಲ್ಲ.

ಅಪ್ಪುಣ್ಣಿ ಏದುಸಿರು ಬಿಡುತ್ತಿದ್ದ. ಅಂತೂ ಅವನನ್ನು ಕಲ್ಲು ಅಗೆಸಿದ ಗುಂಡಿ ಯೊಳಕ್ಕೆ ನೂಕಿಬಿಟ್ಟರೆ......ಅಥವಾ ಹತ್ತಿರದ ಆನೆಬಂಡೆಯ ಕೆಳಗಿರುವ ಸಣ್ಣ ದಾರಿ ಯಲ್ಲಿ ಹೋಗುವಾಗ ಬಂಡೆಯನ್ನು ಕೆಳಕ್ಕೆ ತಳ್ಳಿಬಿಟ್ಟರೆ......ಅಥವಾ ಒಂದು ದಪ್ಪ ಕಲ್ಲನ್ನೆತ್ತಿ ತಲೆಯ ಮೇಲೆ ಹಾಕಿಬಿಟ್ಟರೆ...... !

"ಇನ್ನು ಹೋಗಿ ಚಿಕ್ಕ ಸ್ವಾಮಿ."

ಅಷ್ಟರಲ್ಲಿ ಅವನು ಮನೆ ತಲಪಿದ್ದ.

"ಅಪ್ಪುಣ್ಣೀ"

ಅಮ್ಮನ ಧ್ವನಿ ಕೇಳಿಸಿತು. ಮುಂಬಾಗಿಲಿನ ಮೆಟ್ಟಲಿನ ಹತ್ತಿರ ಅಮ್ಮ ಕಾದು ನಿಂತಿದ್ದಳು.

ಅವನು ಏದುಸಿರು ಬಿಡುತ್ತಾ ಅಮ್ಮನ ಹತ್ತಿರಕ್ಕೆ ಹೋದ.

"ಅಶ್ ನಮ್ಮಪ್ಪ ! ಗಾಬರಿಯಾಗಿ ಹೋಗಿದ್ದೆ."

ಅವನು ಏನೂ ಮಾತಾಡಲಿಲ್ಲ. ಅವನ ತಲೆಯಲ್ಲಿ ಕಲ್ಲು ಅಗೆಸಿದ ಗುಂಡಿಯ ಕಡೆಗೆ ನೋಡಿದಾಗ ತಲೆಗೆ ಏಟುಬಿದ್ದು ರಕ್ತ ಚಿಮ್ಮುತ್ತಿರುವ ದೃಶ್ಯ......

"ಯಾಕೆ ಅಪ್ಪುಣ್ಣಿ ಇಷ್ಟು ತಡಮಾಡಿದ್ದೆ?"

"ಅಲ್ಲಿ ತುಂಬ ಗಲಾಟೆಯಿತ್ತಮ್ಮ."

ಕೊಳೆಯಾಗಿದ್ದ ಟವಲನ್ನು ಸುತ್ತಿಕೊಂಡು ಬಾವಿಯ ಕಡೆಗೆ ಸ್ನಾನ ಮಾಡುವುದಕ್ಕೆ ಹೋದ. ಅಮ್ಮ ನೀರು ಸೇದಿ ಸ್ನಾನ ಮಾಡಿಸಿದಳು. ಈಗಲೂ ಅಮ್ಮನೇ ಅವನಿಗೆ ಮೈ ಉಜ್ಜಿ ಸ್ನಾನ ಮಾಡಿಸಬೇಕು. ಮೊದಲು ಅವನು ತಲೆಯ ಮೇಲೆ ನೀರು ಸುರಿದು ಕೊಂಡ. ಆಮೇಲೆ ಅಮ್ಮ ಅವನ ತಲೆಗೂದಲನ್ನು ಹಿಡಿದು ನೋಡಿ 'ಸರಿಯಾಗಿ ಒದ್ದೆಯಾಗಿಲ್ಲ' ಎಂದು ಹೇಳಿ ಇನ್ನೊಮ್ಮೆ ಸ್ನಾನ ಮಾಡಿಸಿದಳು.

ಈರುಳ್ಳಿ ಒಗ್ಗರಣೆ ಹಾಕಿ ಮಾಡಿದ್ದ ಅಡುಗೆಯಲ್ಲಿ ಯಾಕೋ ಅಷ್ಟೊಂದು ರುಚಿ ಕಾಣಿಸಲಿಲ್ಲ.

ಅಮ್ಮ ಮುಂಬಾಗಿಲನ್ನೂ ಅಡುಗೆ ಮನೆಯ ಬಾಗಿಲನ್ನೂ ಹಾಕಿದ ಮೇಲೆ ಪಾತ್ರೆ

ಗಳನ್ನು ತೊಳೆದು ಮಗುಚಿಟ್ಟು ಬಳಿಕ ಒಳಗಿನ ರೂಮಿನಲ್ಲಿ ಅವನ ಹಾಸಿಗೆ ಹಾಸಿದಳು. ಹತ್ತಿರದಲ್ಲೇ ಅವಳ ಚಾಪೆಯೂ......

ದೀಪ ಆರಿಸಿದಾಗ ಕತ್ತಲೆಯಲ್ಲಿ ಅವನಿಗೆ ಏಕೋ ಭಯವುಂಟಾಯಿತು. ತುಂಡು ತಲೆಗೂದಲನ್ನೂ ಕೆಂಪಾದ ಆ ಎರಡು ಕಣ್ಣುಗಳನ್ನೂ ಆ ಕತ್ತಲೆಯಲ್ಲಿ ಅವನು ಕಾಣು ತ್ತಿದ್ದಾನೆ.

"ನಿದ್ದೆ ಬಂತೇನಮ್ಮ?"

"ಇಲ್ಲ. ಏನು?"

ಹೇಳಿಬಿಡಲೇ......

ಕಣ್ಣು ರೆಪ್ಪೆಯನ್ನು ಬಲವಾಗಿ ಮುಚ್ಚಿಕೊಂಡು ಬೇಗ ನಿದ್ದೆ ಬರಲಿ ಎಂದು ಪ್ರಾರ್ಥಿಸಿದ.

"ಅಮ್ಮಾ......"

ಅವನ ಬೆನ್ನಿನ ಮೇಲೆ ಕೈಯಿಟ್ಟು ತಡವುತ್ತಾ ಅವನನ್ನು ಅಪ್ಪಿಕೊಂಡು ಕೇಳಿದಳು.

"ಏನಪ್ಪಾ?"

ಮತ್ತೂ ಆಲೋಚಿಸಿದ. ಹೇಳಿಬಿಡಲೇ......

"ಮತ್ತೇ; ಆ ಸೈದಾಲಿಕುಟ್ಟಿ ಸಿಕ್ಕಿದ್ದ."

ಯಾವ ಸೈದಾಲಿಕುಟ್ಟಿ ಎಂದು ತಾಯಿ ಕೇಳಲಿಲ್ಲ. ಅವನನ್ನು ಮತ್ತೊಮ್ಮೆ ಅಪ್ಪಿ ಕೊಂಡು ಅಮ್ಮ ಹೇಳಿದಳು:

"ನನ್ನಪ್ಪಾ, ನಿದ್ದೆ ಮಾಡು."

ಅಮ್ಮ ಆ ಕಥೆಯನ್ನು ಅವನಿಗೆ ಹೇಳಿಲ್ಲ. ಆದರೆ ಕೊಟ್ಟಿಗೆ ಮುತ್ತಜ್ಜಿ ಅನೇಕ ಸಲ ಅವನಿಗೆ ಹೇಳಿರುವುದರಿಂದ ಅವನಿಗೆ ಅಲ್ಪ ಸ್ವಲ್ಪ ವಿಷಯ ತಿಳಿದಿದೆ.

ಅವರ ಹಿತ್ತಿಲಿನ ತೆಂಕುಭಾಗದಲ್ಲೇ ಕೊಟ್ಟಿಗೆ ಇರುವುದು. ಅಲ್ಲಿಯೆ ಮುತ್ತಜ್ಜಿಯ ವಾಸ. ಬಿಡುವಾದಾಗಲೆಲ್ಲ ಅವನು ಇರುವುದು ಅಲ್ಲಿಯೇ. ಆದರೆ ಮುತ್ತಜ್ಜಿ ಎಲ್ಲ ಸಮಯದಲ್ಲೂ ಅಲ್ಲಿರುವುದಿಲ್ಲ. ಕೆಲವು ಸಲ ಹಳದಿ ಬಣ್ಣದ ಶಾಲನ್ನು ಹೊದೆದು ಕೊಂಡು ಮುತ್ತಜ್ಜಿ ಬೆಳಗ್ಗೆಯೇ ಕೋಲೂರಿಕೊಂಡು ಹೊರಗೆ ಹೋಗಿರುತ್ತಾಳೆ. ಆ ಮೇಲೆ ಎರಡು ಮೂರು ದಿನಗಳು ಕಳೆದ ಮೇಲೆಯೇ ಹಿಂದಿರುಗುವುದು. ನಿಗದಿಯಾದ ಕೆಲವು ಸ್ಥಳಗಳನ್ನು ಸಂದರ್ಶಿಸುತ್ತಾಳೆ. ತೇಂದೇಂಗಿಲ್ಲಕ್ಕೋ ಮೂಂಗೋತ್ತಿಲ್ಲಕ್ಕೋ[1] ಹೋಗುತ್ತಾಳೆ. ಅವನ ಕುಟುಂಬದ ಎರಡು ಮೂರು ಮನೆಗಳಿಗೂ ಹೋಗುವು ದುಂಟು. ಅಲ್ಲಿ ಅಕ್ಕಿ ತೆಂಗಿನಕಾಯಿ ಸಿಕ್ಕುತ್ತದೆ. ಅವಳು ಕೇಳದಿದ್ದರೂ ಎಲ್ಲರೂ ಅವಳಿಗೆ

---

1 ಮನೆಯ ಹೆಸರು.

ಕೊಡಬೇಕು. ಆಗಾಗ ತನ್ನ ಸಮಾಧಾನಕ್ಕೋ ಎಂಬಂತೆ ಹೇಳಿಕೊಳ್ಳುತ್ತಾಳೆ: "ನಾನು ಬೇಡುವುದಕ್ಕೇನೂ ಹೋಗುತ್ತಿಲ್ಲ" ಎಂದು.

ಕೊಟ್ಟಿಗೆಯ ಮುತ್ತಜ್ಜಿಯನ್ನು ಅರಿಯದವರು ಕುಡಲ್ಲೂರಿನಲ್ಲಿ ಯಾರೂ ಇಲ್ಲ. ತಾರುಣ್ಯದಲ್ಲಿ ಮೂವರು ಗಂಡಂದಿರು. ಮಕ್ಕಳನ್ನು ಹೆತ್ತವಳಲ್ಲ. ಮೊದಲನೆಯ ಗಂಡ ಮುತ್ತಜ್ಜಿಯನ್ನು ಉಪೇಕ್ಷಿಸಿದ. ಮುತ್ತಜ್ಜಿ ಎರಡನೆಯವನನ್ನೂ ಮೂರನೆಯವನನ್ನೂ ಉಪೇಕ್ಷಿಸಿದಳು. ಎಪ್ಪತ್ತು ದಾಟಿದ ಮುತ್ತಜ್ಜಿ ಸಣ್ಣ ಸಣ್ಣ ಮಕ್ಕಳೊಡನೆ ಈಗಲೂ ತಮಾಷೆ ಮಾಡುತ್ತಾ ಚಪ್ಪಾಳೆ ತಟ್ಟುತ್ತಾ ಹುಡುಗಾಟವಾಡುತ್ತಾಳೆ. ಶ್ರೀಮಂತರ ಮನೆಗಳಿಗೆ ಹೋದರೆ ಒಂದೋ ಎರಡೋ ದಿವಸ ಇರುತ್ತಾಳೆ. ಹೊರಟಾಗ ಹೆಂಗಸರು ಅಕ್ಕಿಯನ್ನು ಕೊಡಬೇಕು; ಯುವಕರು ಹಣ ಕೊಡಬೇಕು. ಅಕ್ಕಿಯೋ ಕಾಸೋ ಸಿಕ್ಕಿದರೆ ಆ ಮನೆಯವರ ಒಳ್ಳೆಯ ಸ್ವಭಾವವನ್ನೂ ಸ್ಥಿತಿಯನ್ನೂ ಊರಿನಲ್ಲೆಲ್ಲ ಹೊಗಳಿಕೊಂಡು ತಿರುಗುತ್ತಾಳೆ.

ಸೂಲಗಿತ್ತಿಯಾಗಿ ಹೆರಿಗೆಯ ಮನೆಗಳಿಗೂ ಖಾಯಿಲೆಯಿರುವವರ ಮನೆಗಳಿಗೂ ಮುತ್ತಜ್ಜಿ ಹೋಗುವುದು ವಾಡಿಕೆ. ಊರಿನಲ್ಲಿ ಎಷ್ಟೋ ಹೆರಿಗೆ ಮಾಡಿಸಿದವಳು ಈ ಮುತ್ತಜ್ಜಿ. ಅನೇಕ ಮಕ್ಕಳನ್ನು ಸಾಯಿಸಿದ್ದೂ ಉಂಟು. ಯಾರಾದರೂ ಮುತ್ತಜ್ಜಿಗೆ ಇನ್ನೂ ಯಮನ ಕರೆ ಯಾಕೆ ಬಂದಿಲ್ಲ ಎಂದರೆ ಅದು ಅವಳಿಗೆ ಹಿಡಿಸುವುದಿಲ್ಲ.

"ಮುತ್ತಜ್ಜೀನ ತೆಂಕು ದಿಕ್ಕಿನ ಮಸಾಣಕ್ಕೆ ಸಾಗಿಸೋ ಕಾಲ ಹತ್ರ ಬರ್ತಾ ಇದೆ ಅಲ್ವೇನೋ ಮಕ್ಕಳಾ" ಎಂದು ಆಗಾಗ ಅವಳು ಕೇಳುವುದುಂಟು. ಆದರೆ "ಇನ್ನೂ ನನ್ನ ಚೀಟಿ ಎತ್ತಿಲ್ಲ" ಎಂದು ಮುತ್ತಜ್ಜಿ ತನಗೆ ತಾನೇ ಸಮಾಧಾನ ಪಟ್ಟುಕೊಳ್ಳುತ್ತಾಳೆ.

ಒಂದು ಸಲ ಸುತ್ತು ಹಾಕಿ ಹಿಂದಿರುಗಿದ ಮೇಲೆ ಅವಳು ಐದಾರು ದಿನಗಳು ಕೊಟ್ಟಿಗೆಯಲ್ಲಿಯೇ ಇರುತ್ತಾಳೆ. ಆಗ ಅಪ್ಪುಣ್ಣಿಗೆ ಸಂತೋಷ. ಕೊಟ್ಟಿಗೆಯಲ್ಲಿ ಹಗ್ಗದ ಮಂಚದ ಮೇಲೆ ಕುಳಿತರೆ ಸಾಕು. ತಿರುಗಾಟದಲ್ಲಿ ಸಿಕ್ಕಿದ ಕಸಿಮಾವು, ತೇಂದೇಂಗಿಲ್ಲದಿಂದ ತಂದ ಹಲಸಿನ ಹಪ್ಪಳ—ಅದೇ ರೀತಿ ಒಳ್ಳೆಯದೆಲ್ಲವೂ ಅಪ್ಪುಣ್ಣಿಯ ಪಾಲು. ಕೇಳಿಸಿಕೊಳ್ಳುವುದಕ್ಕೆ ಎರಡು ವರ್ಷದ ಒಂದು ಮಗು ಸಿಕ್ಕಿದರೂ ಸಾಕು, ಮುತ್ತಜ್ಜಿಗೆ ಹೇಳುವುದಕ್ಕೆ ಎಷ್ಟೋ ವಿಷಯಗಳಿರುತ್ತವೆ.

ತಂದೆಯನ್ನು ಕುರಿತು ಕೆಲವು ವಿಷಯಗಳನ್ನು ತಿಳಿದಿರುವುದೂ ಮುತ್ತಜ್ಜಿಯಿಂದಲೇ.

"ಕೋಂದುಣ್ಣಿ ಸಾಯುವಾಗ ಅಪ್ಪು, ನೀನು ಇಷ್ಟೇ ಇದ್ದದ್ದು," ಎಂದು ಹೇಳಿ ಮುತ್ತಜ್ಜಿ ತನ್ನ ತೋರು ಬೆರಳನ್ನು ತೋರಿಸಿದಳು.

ಅಪ್ಪುಣ್ಣಿಗೆ ಇದು ತಮಾಷೆಯಾಗಿ ತೋರಿತು.

ಎಲ್ಲ ಗಂಡು ಮಕ್ಕಳನ್ನೂ ಅಪ್ಪು ಎಂದೂ ಹೆಣ್ಣುಮಕ್ಕಳನ್ನು ಅಮ್ಮು ಎಂದೂ ಮುತ್ತಜ್ಜಿ ಕರೆಯುತ್ತಿದ್ದಳು.

"ಅದೊಂದು ಸಾಧಾರಣ ಮರಣವಾಗಿರಲಿಲ್ಲ. ಯಾರೋ ವಿಷಹಾಕಿ ಸಾಯಿಸಿದ್ದು.

ಅವನಂಥ ಒಳ್ಳೆ ಹುಡುಗ ಈ ತನಕ ಈ ಊರಿನಲ್ಲಿ ಯಾರೂ ಇಲ್ಲ. ಆನೆಯ ಸೊಂಡಿಲೂ ಬಳಸೋದಕ್ಕಾಗ್ತಿರಲಿಲ್ಲ. ಅಂಥ ಮೈಕಟ್ಟು. ಯಾವಾಗ ಮುತ್ತಜ್ಜೀನ ಕಂಡರೂ ಎಲೆ ಅಡಿಕೆ ಕೊಂಡುಕೊಳ್ಳುವುದಕ್ಕೆ ಏನಾದರೂ ಕೊಡ್ತಿದ್ದ......" ಎನ್ನುತ್ತಾ ಮುತ್ತಜ್ಜಿ ಅವನ ತಲೆಯನ್ನು ನೇವರಿಸುತ್ತಾ ಹೇಳುತ್ತಾಳೆ.

"ಅವಳಿಗೆ ದೈವ ಆ ಸೌಭಾಗ್ಯ ಕೊಡಲಿಲ್ಲ."

ತಂದೆಯನ್ನು ಕುರಿತು ಅಪ್ಪುಣ್ಣಿಗೆ ತೀರ ಅಸ್ಪಷ್ಟವಾದ ನೆನಪು ಮಾತ್ರ ಉಳಿದಿರುವುದು. ಅಂತು ಅವನನ್ನು ಕಂಡವರೆಲ್ಲ ಅವನ ತಂದೆಯ ವಿಚಾರವಾಗಿ ಮಾತನಾಡುತ್ತಾರೆ. ಊರಿನ ಜನರಿಗೆಲ್ಲ ತಂದೆ ತುಂಬ ಬೇಕಾದ ವ್ಯಕ್ತಿಯಾಗಿದ್ದರು. ಯಾವುದಕ್ಕೂ ಕೋಂದುಣ್ಣಿ ನಾಯರ್ ಬೇಕು. ಮದುವೆಯಾಗಿರಲಿ, ತಿಥಿಯಾಗಿರಲಿ, ಮನೆ ಕಟ್ಟುವುದಾಗಿರಲಿ, ಯಾವುದಕ್ಕೆ ಬೇಕಾದರೂ ದುಡಿಯುವುದಕ್ಕೆ ತಂದೆ ಹಾಜರಿರುತ್ತಿದ್ದರು. ಆದರೆ ತಂದೆಯ ಮನೆಯವರಿಗೆ ಮಾತ್ರ ಚಿಕ್ಕಂದಿನಿಂದಲೂ ತಂದೆಯನ್ನು ಕಂಡರಾಗುತ್ತಿರಲಿಲ್ಲ.

"ಅವನು ಪಗಡೆ ದಾಳ ಉರುಳಿಸಿಕೊಂಡೇ ಹೋಗಲಿ, ತನಗೆ ತೋರಿದ ಹಾಗೆ ನಡೆದು ಕೊಳ್ಳೋನು!" ಎಂದಷ್ಟೇ ಅವನ ತಾಯಿ ಹೇಳುತ್ತಿದ್ದಳು. ಅವಳು ತೀರಿ ಕೊಂಡ ಮೇಲೆ ಅವನು ಒಂಟಿಯಾದ.

ಕೋಂದುಣ್ಣಿ ನಾಯರ್ ಪಗಡೆ ಆಟದಲ್ಲಿ ತುಂಬ ಹೆಸರು ಪಡೆದವನಾಗಿದ್ದ.

ಓಣಂ,[1] ವಿಷು, ತಿರುವಾದಿರ[2] ಮುಂತಾದ ಸಂದರ್ಭಗಳಲ್ಲಿ ಈಗಲೂ ಆಲದ ಮರ ದಡಿಯಲ್ಲಿ ಪಗಡೆ ಆಟವಾಡುವುದುಂಟು. ಕುಡಲ್ಲೂರು ಪ್ರದೇಶದವರಿಗೂ ಪೆರುಂಬಲಂ ಪ್ರದೇಶದವರಿಗೂ ಒಳಗೊಳಗೇ ಮಾತ್ಸರ್ಯವಿತ್ತು.

"ದೊಡ್ಡ ದೊಡ್ಡ ಪಗಡೆ ಆಟದವರೆಲ್ಲ ಹೋದರು. ಈಗಿರೋರೆಲ್ಲ ಚಿಕ್ಕ ಚಿಕ್ಕ ಹುಡುಗರು. ಆಟದಲ್ಲಿ ಈಗ ಮೊದಲಿನಷ್ಟು ಸುಖವಿಲ್ಲ" ಎಂದು ಹಿಂದಿನ ಕಾಲದ ಆಟಗಾರರು ಹೇಳುವುದುಂಟು.

ದಾಳ ಉರುಳುವ ಶಬ್ದವನ್ನು ಕೇಳುವಾಗಲೂ, ಜನರ ಬೊಬ್ಬೆ ಕೇಳುವಾಗಲೂ ತಂದೆಯ ನೆನಪುಂಟಾಗುತ್ತದೆ. ನೋವಿಗಿಂತ ಹೆಚ್ಚಾಗಿ, ಅಭಿಮಾನವುಂಟಾಗುತ್ತದೆ. ಸಂಖ್ಯೆ ಹೇಳಿ ದಾಳ ಉರುಳಿಸಿ ಹೇಳಿದ್ದಷ್ಟನ್ನು ಎಣಿಸುವುದರಲ್ಲಿ ಇದ್ದದ್ದು ಒಬ್ಬನೇ ಒಬ್ಬ ಆಟಗಾರ. ಅದು ಅವನ ತಂದೆ ಮಾತ್ರ.

---

1 ಕೇರಳದಲ್ಲಿ ಶ್ರಾವಣ ಮಾಸದಲ್ಲಿ ಆಚರಿಸುವ ಹಬ್ಬ.

2 ಪತಿಗೆ ಶ್ರೇಯಸ್ಸನ್ನು ಕೋರಲು ಪತ್ನಿಯರು ಆಚರಿಸುವ ಹಬ್ಬ.

"ಇಲ್ಲಿ ಕೇಳ್ರೋ, ನಾನು ಕಣ್ಣಾರೆ ಕಂಡದ್ದು. ಅದು ಪೆರುಂಬಲವವರ ಕಡೇ ಆಟವಾಗಿತ್ತು. ಎದುರುಗಡೆ ಆಡುತ್ತಿದ್ದವನು ಮಾರಾರ್. ಅವನಿಗೆದುರಾಗಿ ಅಚ್ಚುಮಾನ್ ಕೊಂಬು ಕಟ್ಟಿ ಮೂರನೆಯ ಸಲ ದಾಳ ಉರುಳಿಸುವ ಹೊತ್ತು ಅದು. ಇನ್ನು ಬದುಕಿಯೂ ಫಲವಿಲ್ಲ ಅನ್ನಿಸಿತ್ತು. ಆ ಕಡೆಯವರು ಪಣ್ಣಾನ್ ಚೋಪನನ್ನು ಕರೆದುಕೊಂಡು ಮಂತ್ರ ಮಾಡಿಸಿದ್ದರು. ಆಮೇಲೇ ಅಲ್ಲವೆ ನಮಗೆ ಅದು ತಿಳಿದದ್ದು. ಮೂವತ್ತೆರಡು ಎಣಿಕೆ ಆಗಬೇಕು, ಸರಿಯಾಗಿ ಕೊಂಬು ಕಟ್ಟ ಬೇಕಾದರೆ, ಅಚ್ಚುಮಾನ್ ದಾಳವನ್ನು ಕೈಯಲ್ಲಿ ಹಿಡಿದುಕೊಂಡು 'ಮೋಸ ಮಾಡಿದೆಯಲ್ಲೇ ತಾಯೀ' ಎಂದು ಆಕಾಶವನ್ನು ನೋಡುತ್ತ ನಿಂತಿದ್ದ. ನಿಜ ಹೇಳಲು ಅಚ್ಚುಮಾನ್‌ಗೆ ಧೈರ್ಯವಿಲ್ಲ. ಆ ಕೈಯಲ್ಲಿ ಆಟ ಸಿಕ್ಕದೆ ಹೋದರೆ ಸೋತ ಹಾಗೆಯೇ. ನನ್ನ ಕಡೆಗೆ ನೋಡಿ ಮೂಪ್ಪರು ಮೆಲ್ಲಗೆ ಹೇಳಿದ: 'ಏನು ಮಾಡೋದೋ, ಊರಿನ ಮಾನ ಹೋಗುತ್ತೆ' ಎಂದು. ಅಚ್ಚುಮಾನ್ ಎಷ್ಟು ಮಾತ್ರಕ್ಕೂ ಮಾತಾಡುತ್ತಿಲ್ಲ."

"ಯಾರಾದರೂ ಹುಡುಗರಿದ್ದಾರಾ?"

ಆಗಲೇ "ದಾಳ ಇಲ್ಲಿ ತನ್ನಿ" ಎಂದದ್ದು ಕೇಳಿಸಿತು. ತಿರುಗಿ ನೋಡಿದಾಗ ಕೋಂದುಣ್ಣಿ ನಾಯರ್ !

ಸೋಲಿಸಲು ಮಾರಾರನೂ, ಅವನ ಕಡೆಯವರೂ ನೆಲದ ಮೇಲೆ ಬಿದ್ದು ಊರಿನ ದೇವತೆಗಳಿಗೆಲ್ಲ ಮೊರೆಯಿಡುತ್ತಿದ್ದರು. ಆ ಶಬ್ದವನ್ನು ದೂರದಿಂದಲೇ ಕೇಳಬಹುದಾಗಿತ್ತು.

"ನಾನ್ಯಾಕೆ ಆ ಕೆಲಸಕ್ಕೆ ಬಾರದವಳನ್ನು ಬೇಡಿಕೊಳ್ಳಬೇಕು" ಎಂದು ಕೋಂದುಣ್ಣಿ ನಾಯರ್ ಬಯ್ದ. ಯಾರನ್ನು? ಭಗವತಿಯನ್ನು. ಅದನ್ನೆಲ್ಲ ಹೇಳುವಾಗ ನನ್ನ ಮೈ ರೋಮ ನೆಟ್ಟಗಾಗುತ್ತದೆ. ಕಣ್ಣು ಮುಚ್ಚಿಕೊಂಡು ಸ್ವಲ್ಪ ಹೊತ್ತು ನಿಂತಿದ್ದ. ದಾಳ ತೆಗೆದುಕೊಂಡು ಉರುಳಿಸಿದ. ಹೇಳಿ ಹೇಳಿದಂತೆ ಹನ್ನೆರಡು. ಕಣ್ಣೆಲ್ಲ ಕೆಂಪಾಗಿತ್ತು, ನೋಡುವುದಕ್ಕೂ ಹೆದರಿಕೆ. ಎರಡನೆಯ ಸಲ ಉರುಳಿಸಿದ. ಆಗಲೂ ಹನ್ನೆರಡು. ಮತ್ತೊಮ್ಮೆ ಉರುಳಿಸಿದ. ಎರಡ ಮೂರ್ರು ಆರು.

"ಇನ್ನು ಕೊಂಬು ಕಟ್ಟಿಕೊಳ್ಳಿ" ಎಂದು ಹೇಳಿ ಕೋಂದುಣ್ಣಿ ನಾಯರ್ ಅಲ್ಲಿಂದ ಹೊರಟ. ನಾಯರ್ ಅಷ್ಟು ದೂರ ಹೋದಾಗ—ಇಲ್ಲಿ ದಾಳ ಉರುಳಿತ್ತು. ನೋಡಿದರೆ ಜಯ !

"ಹಾಗೆ ಆಡುವ ಗಂಡು ಮತ್ತೊಬ್ಬ ಇಲ್ಲ." ಎಂದು ಕುಡಲ್ಲೂರಿನ ಇತ್ತೀಚಿನ ಆಟಗಾರನಾದ ಕುಟ್ಟು ನಾಯರ್ ಹೇಳುವುದು.

ಆ ಆಟಗಾರ ತನ್ನ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಕುಟ್ಟಿಪ್ಪುರ, ತಳಾಂಚೇರಿಗಳಲ್ಲಿ ಸಂಚರಿಸಿ ಅಲ್ಲಿಯ ಮಹಾ ಆಟಗಾರರನ್ನೆಲ್ಲ ಸೋಲಿಸಿದ್ದ.

ಕೋಂದುಣ್ಣಿಯನ್ನು ಸೋಲಿಸಲು ಸಾಧ್ಯವಿಲ್ಲವಲ್ಲ ಎಂದು ಕೊರಗಿದ್ದ ಒಬ್ಬ ತೆಕ್ಕನ್ ಮಣ್ಣಾನ್ ಇದ್ದ. ಅವನು ತನ್ನ ಮನೆಯ ಮುಂದೆಯೇ ಆಡುತ್ತಿದ್ದ. ಆಟಕ್ಕೆ ಬಂದವರನ್ನೆಲ್ಲ ಸೋಲಿಸುತ್ತಿದ್ದ. ಓಣಂ ಕಳೆದಾಗ ತಂದೆ ಅಲ್ಲಿಗೆ ಆಡುವುದಕ್ಕೆ ಹೊರಟಾಗ ಜೊತೆಯಲ್ಲಿ ಅಪ್ಪು ಪಣಿಕ್ಕರ್ ಇದ್ದ. ಅಪ್ಪು ಪಣಿಕ್ಕರ್ ಈಗಲೂ ಅದನ್ನು ಹೇಳದ ದಿನಗಳಿಲ್ಲ. ಬೆಳಗ್ಗೆ ಆಟ ಪ್ರಾರಂಭವಾಗಿ ಕೊಯಿಬು ಕಟ್ಟಿದ್ದು. ಮಣ್ಣಾನ್, ತಾನು ಕಲಿತಿದ್ದ ವಿದ್ಯೆಯನ್ನೆಲ್ಲ ಉಪಯೋಗಿಸಿದ್ದ. ನಾಲ್ಕನೆಯ ದಿನ ಜೂಜು ಪ್ರಾರಂಭವಾದದ್ದು ಸಂಜೆಯಲ್ಲಿ. ಮರಳು ಎರಚಿದರೆ ಕೆಳಗೆ ಬೀಳದಷ್ಟು ಜನ. ಆಡಿ ಗೆದ್ದು ತಂದೆ ಎದ್ದು ನಿಂತಾಗ ಮಣ್ಣಾನ್ ಕೈಮುಗಿದು ಹೇಳಿದ.

"ಇಲ್ಲಿ ಇನ್ನು ನಾನು ಆಡುವುದಿಲ್ಲ. ಇದು ನನ್ನ ಸಂತೋಷಕ್ಕಾಗಿ" ಎಂದು ನಾಲ್ಕು ತೊಲ ಇದ್ದ ಕಂಚಿನ ದಾಳವನ್ನು ಆಗ ಮಣ್ಣಾನ್ ತಂದೆಗೆ ಉಡುಗೊರೆಕೊಟ್ಟದ್ದು. ಆ ದಾಳ ಉರುಳಿಸಿದರೆ ಈಗಿನ ತರುಣರ ಎದೆ ನಡುಗುತ್ತದೆ. ಕಾಸ್ತೋತ್ತು ಪಣಿಕರನನ್ನು ಸೋಲಿಸಿದ್ದು ಆ ದಾಳದಿಂದಲೇ, ಹಾಗೆಯೇ ಹೇಳುವುದಕ್ಕೆ ಬೇಕಾದಷ್ಟಿದೆ ! ಅದೆಲ್ಲವೂ ಅವನ ತಂದೆಯನ್ನು ಕುರಿತೇ ಹೇಳಿದ್ದು.

ಊರಿನ ಯುವಕರೆಲ್ಲ ತಂದೆಯ ಹಿಂದೆ ನಡೆಯುತ್ತಿದ್ದರು. ಎಲ್ಲರಿಗೂ ಬೇಕಾಗಿದ್ದ ವ್ಯಕ್ತಿಯಾಗಿದ್ದರು. ಮದುವೆಯಾದ ಮೇಲೆ ಜೊತೆಯವರು ತಂದೆಯನ್ನು ಕೈ ಬಿಟ್ಟಿದ್ದು. ಕಾರಣ—ತಂದೆ, ತಾಯಿಯ ಮನೆಗೆ ಅವಮಾನ ಮಾಡಿದ್ದು.

ವಡಕ್ಕೇಪಾಟ್ಟ್ ಮನೆತನಕ್ಕೆ ಅವಮಾನ ಮಾಡಿದುದು ಹಲವರಿಗೆ ತಂದೆಯವರನ್ನು ಕಂಡು ಬೇಸರವನ್ನುಂಟು ಮಾಡಿತ್ತು.

ತಂದೆಯ ಮನೆತನ ಅಷ್ಟೇನೂ ಶ್ರೇಷ್ಠವಾದದ್ದಲ್ಲ, ಹಿಂದೆ ಮೂರೋ ನಾಲ್ಕೋ ತಲೆಮಾರಿಗೆ ಮೊದಲು, ತಂದೆಯ ಮನೆಯಲ್ಲಿ ಒಬ್ಬಳು ಹುಡುಗಿ ದುರ್ನಡತೆಯವಳಾಗಿದ್ದದ್ದು ಕಾರಣ. ಅಲ್ಲದೆ ತಂದೆಗೆ ಎಲ್ಲಾ ಜಾತಿಯವರೊಡನೆ ಸ್ನೇಹ. ಮಾಪಿಳ್ಳೆಯವರ ಮನೆಯಲ್ಲಿ ಚಹಾ ಕುಡಿಯುತ್ತಿದ್ದರು. ಆಗ ಚಹಾ ಕುಡಿಯುವುದೇ ತಪ್ಪಾಗಿತ್ತು. ಮಾಪಿಳ್ಳೆಯ ಮನೆಯಲ್ಲಂತೂ ಹಿಂದುಗಳು ಚಹಾ ಕುಡಿಯಲೇ ಬಾರದು. ಅದು ದೊಡ್ಡ ತಪ್ಪಾಗಿತ್ತು. ಪಗಡೆ ಆಡುವುದು ಕೂಡ ಬಡಗು ಮನೆಯವರ ದೃಷ್ಟಿಯಲ್ಲಿ ದೊಡ್ಡ ತಪ್ಪಾಗಿತ್ತು. ಪಗಡೆ ಆಡುವುದಕ್ಕೆ ಹೋಗುವಾಗಲೆಲ್ಲ ತಂದೆ ಶೇಂದಿ ಕುಡಿಯುತ್ತಿದ್ದರು. ಹಾಗಿದ್ದವರಿಗೆ ಬಡಗು ಮನೆಯ ಹೆಣ್ಣನ್ನು ಯೋಗ್ಯ ರೀತಿಯಲ್ಲಿ ಮದುವೆ ಮಾಡಿಕೊಡುವುದಿಲ್ಲ.

ತಾಯಿಯ ಒಬ್ಬ ಅಣ್ಣ ಗತಿಸಿ ಹೋಗಿದ್ದರು. ಅವರನ್ನು ಅಪ್ಪುಣ್ಣಿ, ಮಾಧವ ಮಾವ ಎಂದು ಕರೆಯುತ್ತಿದ್ದ. ಮಾಧವ ಮಾವನೂ ಕೋಂದುಣ್ಣಿ ನಾಯರೂ ಚಿಕ್ಕಂದಿನಲ್ಲಿ ಸ್ನೇಹಿತರಾಗಿದ್ದರು.

ಆ ದಿನ ದೊಡ್ಡ ಮಾವ ಮನೆಯಲ್ಲಿರಲಿಲ್ಲ. ಬತ್ತಾಯದ ಮನೆಗೆ ಇತರರು ಹೋಗುವ ಹಾಗಿಲ್ಲ. ಸಂಜೆಯಲ್ಲಿ ಮಾಧವ ಮಾವನೂ ತಂದೆಯೂ ಬತ್ತಾಯದ ಮೇಲೆ ಕುಳಿತುಕೊಂಡು ಮಾತಾಡುತ್ತಿದ್ದರು. ಹೊತ್ತು ಹೋದದ್ದೇ ತಿಳಿಯಲಿಲ್ಲ. ಹೊರಗೆ ಪಡಸಾಲೆಯಿಂದ ದೊಡ್ಡ ಮಾವನ ಧ್ವನಿ ಕೇಳಿದಾಗ ಬೆಚ್ಚಿದ್ದು.

"ಯಾರು ಅದು ಬತ್ತಾಯದ ಕೋಣೆಯಲ್ಲಿ?"

ಇಬ್ಬರೂ ಕೆಳಗಿಳಿದು ಬಂದರು. ಮೆಲ್ಲಗೆ ಹೆಜ್ಜೆಯಿಡುತ್ತಾ. ಎದೆಯ ಮೇಲೆ ಕೈಯಾಡಿಸುತ್ತಾ ಹೊರಗೆ ಬಂದರು.

"ಯಾರೋ ಮಾಧವ ಅದು?"

ಆಗ ತಂದೆಯೇ ಉತ್ತರ ಕೊಟ್ಟದ್ದು.

"ನಾನು ಕೆಳಮನೆ ಕೋಂಮಣ್ಣಿ."

"ಕತ್ತಲೆ ಹೊತ್ತಿನಲ್ಲಿ ಬೇರೆ ಗಂಡಸರಿಗೆ ಇಲ್ಲೇನು ಕೆಲಸ?"

ತಂದೆ ವಿನಯದಿಂದ ಹೇಳಿದರು:

"ನಾನು ಬಡಗು ಮನೆ ಕಡೆಗೆ ಹೋಗಿರಲಿಲ್ಲ. ಇಲ್ಲಿ ಒಬ್ಬರು ಗಂಡಸರ ಹತ್ತಿರ ಮಾತಾಡುತ್ತಿದ್ದೆ."

ದೊಡ್ಡ ಮಾವ ಕಾಲಿನಲ್ಲಿ ನೆಲ ಕೆರೆದು ಮುಂದೆ ಹೆಜ್ಜೆ ಹಾಕುತ್ತಾ ಹೇಳಿದರು:

"ಬಂದರೆ ಪಡಸಾಲೆಯಲ್ಲಿ ಕುಳಿತು, ವಿಷಯ ಮಾತಾಡಿ ಹೋಗಬೇಕು. ಅದೇ ಬಡಗು ಮನೆ ಬತ್ತಾಯದ ಕೋಣೆಗೆ ಕೆಳಮನೆ ಗಂಡಸರು ಬರಬಾರದು."

ತಂದೆ ಸಿಟ್ಟನ್ನು ತಡೆದುಕೊಂಡು ಹೇಳಿದರು: "ನಾನು ಗಂಟು ತಿಳಿಯೋಕೆ ಬಂದೆ ದ್ದಲ್ಲ, ಇಲ್ಲಿಂದ ಹೆಣ್ಣು ಬೇಕಾಗಿದ್ದರೆ ಪಡೆಯೋದು ಕೋಂಮಣ್ಣಿಗೆ ಗೊತ್ತಿದೆ."

"ಥೂ!"

ದೊಡ್ಡ ಮಾವ ಮುಖದ ಕಡೆಗೆ ಉಗಿದರು.

ತಂದೆಯೂ ಕ್ಯಾಕರಿಸಿ ಉಗಿದು ಹೊರಟು ಹೋದರು. ಹೋಗುವಾಗ ಮತ್ತೂ ಒಂದು ಸಲ ಕ್ಯಾಕರಿಸಿ ಉಗಿದು ಹೇಳಿದರು:

"ಭಾರೀ ದೊಡ್ಡ ಮನೆತನದವರು!"

ಇದನ್ನೆಲ್ಲ ವಿವರಿಸಿದ್ದು ಕೊಟ್ಟಿಗೆ ಮುತ್ತಜ್ಜಿ. ತೆಂಕು ಮನೆ ಮೆಟ್ಟಲಿನ ಮೇಲೆ ಸ್ವಲ್ಪ ದೂರದಲ್ಲಿ ಒಬ್ಬಾಕೆ ಇದೆಲ್ಲವನ್ನೂ ನೋಡುತ್ತಾ ನಿಂತಿದ್ದಳು.

ಅವಳು ಪಡಕ್ಕೇ ಪಾಟ್ ಯಜಮಾನರ ಕಿರಿಯ ಮೊಮ್ಮಗಳಾಗಿದ್ದಳು. ಮದುವೆಯನ್ನು ವಿಜೃಂಭಣೆಯಿಂದ ಮಾಡಿಕೊಡಬೇಕೆಂದು ನಿಶ್ಚಯಿಸಿದ್ದರು.. ಹನ್ನೆರಡು ಮೈಲಿ ಉದ್ದದ ಕಾಡೂ, ಗದ್ದೆಯ ಬಯಲೂ ಇದ್ದ ಒಂದು ದೊಡ್ಡ ಕುಟುಂಬದ ಸಂಬಂಧವಾಗಿತ್ತು. ಪೂಮಾನ್ ತೋಡಿನಿಂದ ಹಿಡಿದು ಕೇದಿಗೆ ವನದ ವರೆಗಿನ ಎಲ್ಲ ನಾಯರರ

ಕುಟುಂಬಗಳನ್ನೂ ಆಹ್ವಾನಿಸಿದ್ದರು. ಅಡಿಗೆಗೆ ಕೊಡಿಗುಡ್ಡೆಯಿಂದ ಯುವಕರಾದ ಅಡಿಗೆ ಭಟ್ಟರನ್ನು ಬರಮಾಡಿದ್ದರು.

ಆದರೆ ಆ ಮದುವೆ ನಡೆಯಲಿಲ್ಲ. ಮದುವೆಗೆ ಬಂದ ಜನರಿಗೆ ಮನೆಯ ಮೆಟ್ಟಿಲ ಹತ್ತಿರವೇ ಸುದ್ದಿ ತಿಳಿಯಿತು:

"ಮದುವೆ ಹೆಣ್ಣಿಲ್ಲ."

"ಅದ್ಯಾಕೆ ಮುತ್ತಜ್ಜಿ?"

ಆಶ್ಚರ್ಯದಿಂದ ಅವನು ಕೇಳಿದ.

"ಗೋಂದುಣ್ಣಿ ಪಾರುಕುಟ್ಟೀನ ಅಪಹರಿಸಿಕೊಂಡು ಹೋದ ಅಷ್ಟೆ."

ರಾವಣ ಸೀತೆಯನ್ನು ಪುಷ್ಪಕ ವಿಮಾನದಲ್ಲಿ ಕೂರಿಸಿಕೊಂಡು ಅಪಹರಿಸಿಕೊಂಡು ಹೋದ ಕಥೆಯನ್ನು ಕೇಳಿದ್ದುಂಟು. ರಾವಣ ದುಷ್ಟನಾಗಿದ್ದ. ಅವನು ಶ್ರೀರಾಮನ ಹೆಂಡತಿಯನ್ನು ಅಪಹರಿಸಿಕೊಂಡು ಹೋದದ್ದು ಅಪರಾಧ. ಅರ್ಜುನ ಸುಭದ್ರೆಯನ್ನು ಅಪಹರಿಸಿಕೊಂಡು ಹೋದ ಕಥೆಯನ್ನೂ ಜ್ಞಾಪಿಸಿಕೊಂಡ. ಅರ್ಜುನ ಮಹಾವೀರ ನಾಗಿದ್ದ. ಬಿಲ್ಲು ಹಿಡಿದವರಲ್ಲಿ ಅರ್ಜುನನನ್ನು ಜಯಿಸಲು ಯಾರಿಗೂ ಸಾಧ್ಯವಿರಲಿಲ್ಲ. ಮಲಯಾಳಂ ಪದ್ಯ ಪುಸ್ತಕದಲ್ಲಿ ಆ ಕಥೆಯಿತ್ತು. ಸನ್ಯಾಸಿಯಾಗಿ ಶ್ರೀಕೃಷ್ಣನ ಮನೆಗೆ ಹೋಗಿ ಸುಭದ್ರೆಯನ್ನು ಅಪಹರಿಸಿಕೊಂಡು ಒಂದೇ ಓಟ. ಬೆನ್ನಟ್ಟಿ ಬಂದ ಯಾದವರಿಗೆ ಅರ್ಜುನನನ್ನು ಸೋಲಿಸಲಾಗಲಿಲ್ಲ. ಸುಭದ್ರೆಯನ್ನು ರಥದಲ್ಲಿ ಕೂರಿಸಿಕೊಂಡು ಹೋಗುವ ಕಥಾಭಾಗವನ್ನು ಓದುವಾಗ ಕೂಸನ್ ಚಾತ್ತುನಾಯರನ ವಿವರಣೆ ಕೂಡಲೆ ನೆನಪಾಗು ತ್ತದೆ. ಅದನ್ನು ವಿವರಿಸುವ ಅಧಿಕಾರ ಅವನಿಗೆ ಮಾತ್ರ ಇರುವುದು.

"ನಾನು ಕಣ್ಣಾರೆ ಕಂಡದ್ದು ಕಣ್ರೋ. ಅಂಥ ಒಬ್ಬ ಗಂಡ್ಸು ಬೇರೆ ಯಾರೂ ಇಲ್ಲ." ಆತ ವಿವರಿಸುತ್ತಾನೆ.

ಪ್ರವಾಹ ಬಂದಿದ್ದ ಸಮಯ ಅದು. ಗದ್ದೆ ಬಯಲಿನಲ್ಲೆಲ್ಲ ಎದೆಯುದ್ದ ನೀರು. ಲೆಕ್ಕವಿಲ್ಲದಷ್ಟು ಜಿಗಣೆಗಳು. ಅಲ್ಲಿಗೆ ತಲುಪಿದಾಗ ಕೈಯಲ್ಲಿ ಒಂದು ಓಲೆಗರಿ ಹಿಡಿದು ಕೊಂಡು ಬರುವಂತೆ ಮಡಕ್ಕೆ ತಂದ ಧೀರ.

ಲಾಂದ್ರ ಹಿಡಿದುಕೊಂಡು ದಾರಿ ತೋರಿಸುತ್ತಾ ಹಿಂದುಗಡೆ ಬರುತ್ತಿದ್ದ ಕೂಸನ್ ಚಾತ್ತುನಾಯರ್ ಕೇಳಿದ:

"ಅವರು ಹಿಂದಟ್ಟಿ ಬಂದರೊ?"

ಆಗ ಹಿಂದಿರುಗಿ ನಿಂತು ಒಂದು ಸಲ ನೋಡಿ ಹೇಳಿದರು: "ಬರಲಿ. ಗಂಡು ಹೌದಾದರೆ ನೋಡಿಕೊಳ್ತೀನಿ. ಹುಟ್ಟಿದ ಮೇಲೆ ಸಾಯೋದು ಒಂದೇ ಸಲ ತಾನೇ?"

ಮುತ್ತಜ್ಜಿ ಆ ಕಥೆ ಹೇಳುತ್ತಿದ್ದಾಗ ಕೆಲವು ಸಲ ಅಪ್ಪುಣ್ಣಿ ತಚ್ಚೊಳ್ಳಿ ಚಂದುವನ್ನು

ಕೋಮಪ್ಪನನ್ನೂ ನೆನಪುಮಾಡಿಕೊಳ್ಳುತ್ತಿದ್ದ. ಹುಡುಗನಾಗಿದ್ದಾಗ ಕೇಳಿದ ಕಥೆಗಳು ಪಂಥ ಕಟ್ಟಿ ಜಯಿಸಿದ ಕಥೆಗಳು......

ಕೊತ್ತಲಂಗಾಡಿನ ನಂಬೂದ್ರಿಗಳ ಮನೆಯ ಒಪ್ಪರಿನಲ್ಲಿ[1] ಒಂದು ದಿನ ತಂಗಿದ್ದರು. ಆಮೇಲೆ ಗದ್ದೆ ಬಯಲಿನ ಅಂಚಿನಲ್ಲಿ ನಂಬೂದ್ರಿಗಳಿಂದ ಸ್ವಲ್ಪ ಸ್ಥಳ ಗೇಣಿ[2]ಗೆ ತೆಗೆದು ಕೊಂಡರು. ಯಾವುದಕ್ಕೂ ಬೇಡದ ಜಮೀನಾಗಿತ್ತು ಅದು. ಅದರಲ್ಲಿ ತಂದೆ ಒಂದು ಮನೆ ಕಟ್ಟಿದರು.

"ಎರಡು ಮೂರು ವರ್ಷಗಳಲ್ಲಿ ಅವನು ಆ ಜಾಗವನ್ನೆಲ್ಲ ತರಕಾರಿ ತೋಟ ಮಾಡಿ ಬಿಟ್ಟ."

ತಾಯಿಯ ಮನೆಯವರು ಸೂತಕ ಸ್ನಾನಮಾಡಿ ವಂಶತನಕ್ಕೆ ಸಂಭವಿಸಿದ್ದ ಕೇಡನ್ನು ಮರೆಯಲು ಶ್ರಮಿಸುತ್ತಿದ್ದರು.

ಹೆಣ್ಣನ್ನು ಅಪಹರಿಸಿಕೊಂಡು ಹೋದ ಕೋಂದುಣ್ಣಿ ನಾಯರನ್ನು ಕುರಿತು ಊರಿ ನಲ್ಲೆಲ್ಲರೂ ಎಷ್ಟೋ ದಿನಗಳವರೆಗೆ ಮಾತನಾಡಿಕೊಳ್ಳುತ್ತಿದ್ದರು.

ಅಪ್ಪುಣ್ಣಿಗೆ ಆಗ ಮೂರು ವರ್ಷ ವಯಸ್ಸಾಗಿತ್ತು. ಹೊಳೆ ಪಕ್ಕದ ಗದ್ದೆ ಬಯಲಿನ್ನೆಲ್ಲ ಗೇಣಿಗೆ ತೆಗೆದುಕೊಂಡರು. ಸೈದಾಲಿಕುಟ್ಟಿಯೂ ತಂದೆಯೂ ಜೊತೆಯಲ್ಲಿ ಗೆಣಸು ನೆಟ್ಟರು.

ಮುತ್ತಜ್ಜಿ ಹೇಳಿದ್ದು :

ಗೆಣಸು ನೆಟ್ಟರಲ್ಲಾ—ಆಕಡೆಯಿಂದ ಹೊಳೆಯ ಬಡಗು ಭಾಗದ ವರೆಗೆ".

ಒಂದು ಸಾವಿರ ರೂಪಾಯಿ ಯಾರಾದರೂ ಕಣ್ಣು ಮುಚ್ಚಿಕೊಂಡು ಕೊಡಬೇಕು. ಅಷ್ಟು ಚೆನ್ನಾಗಿತ್ತು ಗೆಣಸು. ಪಳ್ಳಿಪ್ಪುರದ ವ್ಯಾಪಾರಗಾರ ಒಂದು ಒಟ್ಟಿಗೆ ಕೊಂಡು ಕೊಂಡ.

ಆ ರಾತ್ರಿ ಸೈದಾಲಿಕುಟ್ಟಿ ತಂದೆಯನ್ನು ತನ್ನ ಮನೆಗೆ ಊಟಕ್ಕೆ ಕರೆದುಕೊಂಡು ಹೋದ.

ಆಗ ಅಪ್ಪುಣ್ಣಿ ಸಂಶಯಪಟ್ಟು ಕೇಳಿದ:

"ಮಾಪಿಳ್ಳೆಯವರ ಮನೆಯಲ್ಲಿ ನಮ್ಮವರು ಊಟ ಮಾಡಬಹುದಾ ಮುತ್ತಜ್ಜಿ?"

"ನಿಮ್ಮಪ್ಪನಿಗೆ ಅದೆಲ್ಲ ಇಲ್ಲ."

ರಾತ್ರಿ ಇಬ್ಬರೂ ಪತ್ರಿಂಪನನ್ನೂ ಅಕ್ಕಿಯ ಚಪಾತಿಯನ್ನೂ ತಿಂದರು. ಮಾಂಸ ಅಷ್ಟೊಂದು ರುಚಿಯಾಗಿರಲಿಲ್ಲ.

"ಮುದಿ ಆಡಿನ ಮಾಂಸ" ಎಂದು ಸೈದಾಲಿಕುಟ್ಟಿ ಹೇಳಿಯೂ ಇದ್ದ.

---

1 ಕೈಸಾಲೆ. 2 ಗುತ್ತಿಗೆ.

"ಮುತ್ತಾಳಿ ಗುಡ್ಡದ ಮಸೀದಿಯಿಂದ ಆಚೆಕಡೆಯಲ್ಲಿ ಸೈದಾಲಿಕುಟ್ಟಿಯ ಮನೆ. ಊಟ ಮಾಡಿ ಅಲ್ಲಿಂದ ಹೊರಟು, ಕಲ್ಲು ಬೆಂಚಿನ ಹತ್ತಿರಕ್ಕೆ ಬಂದಾಗ ಹೊಟ್ಟೆ ನುಲಿಯುವುದಕ್ಕೆ ತೊಡಗಿತು. ಹಿಂಸೆಯಾದ ಹಾಗಾಯಿತು; ಒಂದುಸಲ ವಾಂತಿಯಾಯಿತು. ತೀರ ನಿಶ್ಶಕ್ತಿ. ಹೊಟ್ಟೆ ಹಿಡಿದುಕೊಂಡು ಮುಂದಕ್ಕೆ ಎರಡು ಹೆಜ್ಜೆ ಹಾಕಿದಾಗ ಬೀಳುವ ಹಾಗಾಯಿತು.

—ಅಪ್ಪಣ್ಣಿಯ ಕಣ್ಣುಗಳಲ್ಲಿ ನೀರಾಡುತ್ತಿತ್ತು.

"ಅಷ್ಟರಲ್ಲಿ ದೊಡ್ಡ ಹಿತ್ತಿಲು ಚೆಂದು ಬಂದದ್ದು. ಕುಂಬಿಡಿ ಸಂತೆಗೆ ಹೋಗಿ ತರಕಾರಿ ಮಾರಿ ಬರುತ್ತಿದ್ದ."

"ಯಾರು ಅದು?"

"ನಾನು ಚೆಂದು"

"ಅಯ್ಯೋ ದೇವರೇ. ನಮ್ಮ ನಾಯರ್‌ಗೇನಾಯ್ತಪ್ಪ?"

"ಸೈದಾಲಿ ಕುಟ್ಟಿ ನನಗೆ ಮೋಸ ಮಾಡಿದ ಚೆಂದು"

—ಆಗ ಅಪ್ಪಣ್ಣಿಯ ಕಣ್ಣುಗಳಲ್ಲಿ ನೀರು ಸುರಿಯುತ್ತಿತ್ತು.

ಚೆಂದು ತಂದೆಯನ್ನು ಕರೆದುಕೊಂಡು ಬಂದು ಮನೆ ತಲಪಿದಾಗ ಅಮ್ಮ ದೀಪ ಹಚ್ಚಿಟ್ಟುಕೊಂಡು ಕಾಯುತ್ತಾ ನಿಂತಿದ್ದಳು, ತಾನು ಮಲಗಿ ಆಗಿತ್ತು.

"ಪಾರುಕುಟ್ಟೀ......" ಎಂದು ಕರೆಯುತ್ತಾ ತಂದೆ ಕೆಳಗೆ ಬಿದ್ದದ್ದು. ಆಚೆ ಈಚೆ ಜನರೆಲ್ಲ ಬಂದು ಸೇರಿದಾಗ......ಏನು ಹೇಳುವುದು ಅಪ್ಪಣ್ಣೀ......ಹಣೆ ಬರಹ ಚೆನ್ನಾಗಿಲ್ಲ."

ಅಪ್ಪಣ್ಣಿ ಬಿಕ್ಕಿ ಬಿಕ್ಕಿ ಅತ್ತ.

ಊರಿನಲ್ಲಿ ಎಲ್ಲರೂ ಗುಟ್ಟಾಗಿ ಆ ಮರಣವನ್ನೇ ಕುರಿತು ಮಾತಾಡುತ್ತಿದ್ದರು. ಪೋಲೀಸಿನವರು ಬರುತ್ತಾರೆಂದೂ, ಶವವನ್ನು ಹೊರಕ್ಕೆ ತೆಗೆದುಕೊಂಡು ಹೋಗಿ ಕುಯ್ದು ಪರೀಕ್ಷೆಮಾಡುತ್ತಾರೆಂದೂ ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿದ್ದ. ಆದರೆ ಯಾಕೋ ಅದೇನೂ ನಡೆಯಲಿಲ್ಲ.

"ಅತ್ತ್ರಾಣ್ಣಿ ಸಾಹುಕಾರ ಲಂಚಕೊಟ್ಟು ಕೇಸು ಮಾಡದ ಹಾಗೆ ಮಾಡಿದ್ದು."

ಶತ್ರುಗಳ ಲೆಕ್ಕದಲ್ಲಿ, ಅಪ್ಪಣ್ಣಿ ಮತ್ತೂ ಒಂದು ಹೆಸರನ್ನು ಸೇರಿಸಿಕೊಂಡು ನೆನಪಿಟ್ಟುಕೊಂಡ. ಅತ್ತ್ರಾಣ್ಣಿ ಸಾಹುಕಾರ!

ಆಮೇಲೆ ತಿಳಿಯಿತು, ಆತ ತೀರಿಕೊಂಡಿದ್ದಾನೆ ಎಂದು. ಒಳ್ಳೆಯದಾಯ್ತು.

ವಿಷ ಕೊಟ್ಟು ತಂದೆಯನ್ನು ಕೊಂದದ್ದು. ಆಡಿನ ಮಾಂಸದಲ್ಲಿ ವಿಷ ಬೆರೆಸಿ.

ಪಾಷಾಣ ಪರೆಯರ[1] ಹತ್ತಿರ ಸಿಕ್ಕುತ್ತದೆ. ಪರೆಯರಿಗೆ ನಾವು ಹೆದರಿಕೊಳ್ಳಬೇಕು

---

1 ಒಂದು ಜಾತಿಯ ಜನರು.

ಅವರು ಮಂತ್ರವಾದ ಮಾಡಿ ಸಾಯಿಸಬಲ್ಲರು. ಔಷಧಿಯನ್ನೂ ಕೊಡುತ್ತಾರೆ; ಪಾಷಾಣವನ್ನೂ ಕೊಡುತ್ತಾರೆ.

ಮುತ್ತಜ್ಜಿ ಆಗಾಗ ಹೇಳುವುದುಂಟು:

"ದೊಡ್ಡ ಕುಟುಂಬಕ್ಕೆ ಸಂಬಂಧಪಟ್ಟ ಹುಡುಗ ನೀನು."

ತನಗೆ ತಾನೇ ಎಷ್ಟೋ ಸಲ ಅವನು ಅದನ್ನು ಹೇಳಿಕೊಳ್ಳುವುದುಂಟು. ಅಂಗಳ ದಲ್ಲೇ ಹತ್ತು ಸಾವಿರ ಕೊಳಗ ಧಾನ್ಯ ಇದ್ದರೆ ಮನೆ ಒಳಗೆಷ್ಟು ತುಂಬಿರಬಹುದು! ಅದಲ್ಲ ಬಹಳ ಹಿಂದೆ. ಮುತ್ತಜ್ಜಿಗೆ ಎರಡನೆಯ ಗಂಡ ಇದ್ದ ಕಾಲದಲ್ಲಿ ಮನೆ ಪಾಲಾ ವದ್ದು. ಪಾಲಾಗುವಾಗ ಅರವತ್ತನಾಲ್ಕು ಜನರಿದ್ದರು. ಅರವತ್ತನಾಲ್ಕು ಜನರಿದ್ದ ಮನೆ!

ಎರಡು ಚೌಕಟ್ಟಿನ ಮನೆಗಳು ಒಂದೇ ಮನೆಯಾಗಿದ್ದ ಕಾಲ ಅದು. ಅರ್ಧಕ್ಕಿಂತ ಹೆಚ್ಚು ಭಾಗ ಮುರಿದು ಹೋಗಿದ್ದೆ. ಈಗಲೂ ಭಗವತಿ ನೆಲಸಿರುವ ಚೌಕಟ್ಟಿನ ಮನೆ ಯಿದೆ. ಬತ್ತಾಯದ ಮನೆಯೂ ಇದೆ. ಮುತ್ತಜ್ಜಿ ಒಂದೋ ಎರಡೋ ತಿಂಗಳಿಗೊಂದು ಸಲ ಅಲ್ಲಿಗೆ ಹೋಗುವುದುಂಟು.

ಒಳ್ಳೆ ತೇಜಸ್ಸಿದ್ದ ಕುಟುಂಬದ ಮನೆ. ಈಗಲೂ ಅದರ ಹತ್ತಿರ ಹೋದರೆ ಎದೆ ಝಲ್ಲೆನ್ನುತ್ತದೆ......

ಅಮ್ಮ ಬೆಳಗ್ಗೆ ಅವನಿಗೆ ಗಂಜಿ ಮಾಡಿಟ್ಟು ನಂಬೂದಿರಿಗಳ ಮನೆಗೆ ಕೆಲಸಕ್ಕೆ ಹೋಗು ತ್ತಾಳೆ. ಅಮ್ಮ ಮೆಟ್ಟಿಲಿಳಿದು ಅಷ್ಟು ದೂರ ಹೋದಾಗ ಮುತ್ತಜ್ಜಿ ಹತ್ತಿರದಲ್ಲೆಲ್ಲಾ ದರೂ ಇದ್ದರೆ ತಪ್ಪದೆ ಹೇಳುವುದುಂಟು:

"ಏನು ಹಣೇಲಿ ಬರೀತು! ವಡಕ್ಕೇಪಾಟ್[1] ಕುಟುಂಬದಲ್ಲಿ ಹುಟ್ಟಿ ಬೆಳೆದ ಹೆಣ್ಣು. ಭತ್ತ ಕುಟ್ಟೋದಕ್ಕೆ ಹೋಗ್ತಿದೆ. ಹಣೇಲಿ ಒಳ್ಳೇದು ಬರೀಬೇಕು....... ಹಣೇಲಿ ಒಳ್ಳೇದು ಬರೀಬೇಕು!"

ವಡಕ್ಕೇಪಾಟ್ ಚೌಕಟ್ಟಿನಲ್ಲಿ ತಾಯಿ ಹುಟ್ಟಿ ಬೆಳೆದ ವಿಷಯವನ್ನು ಕೇಳುವುದಕ್ಕೆ ತೊಡಗಿ ಎಷ್ಟೋ ದಿನಗಳಾಗಿವೆ. ಅಮ್ಮ ಕೇಳಿಸಿಕೊಳ್ಳದಿದ್ದರೂ ಮುತ್ತಜ್ಜಿ ಹೇಳುವು ದುಂಟು. ಅದನ್ನು ಕೇಳುವಾಗಲೆಲ್ಲ ತಾಯಿ ಯಾರಿಗೂ ತಿಳಿಯದಂತೆ ಕಣ್ಣೀರೊರೆಸಿ ಕೊಳ್ಳುತ್ತಾಳೆ.

"ಕುಂಞ ಕಾಳಿಯಮ್ಮನ ಕಿರಿಯ ಮಗಳು ನೆಲದ ಮೇಲೆ ಕೂರಿಸಿದರೆ ಇರುವೆ ಕಚ್ಚುತ್ತವೆ. ತಲೆಯ ಮೇಲೆ ಕೂರಿಸಿಕೊಂಡರೆ ಹೇನು ಕಚ್ಚುತ್ತವೆ......ಹಾಗೆ ತೋಳಿ ನಲ್ಲಿ ಬೆಳೆಸಿದ್ದು ಅವಳನ್ನು. ಅವಳು ಮೈ ನೆರೆದಾಗ ನೂರು ಕೊಳಗ ಅಕ್ಕಿ ಬೇಯಿಸಿದ್ದರು."

ಹಾಗೆ ಬೆಳೆದವಳು ಅವನ ತಾಯಿ. ಆದರೆ ಈಗ—

---

1 ಮನೆಯ ಹೆಸರು.

ಅವನು ಬೆಳಗ್ಗೆ ಏಳುವಷ್ಟರಲ್ಲಿ ತಾಯಿ ಸ್ನಾನಮಾಡಿ ಗಂಜಿ ಕಾಯಿಸಿ ಮುಗಿಸಿರುತ್ತಾಳೆ. ಅವನಿಗೆ ಮಣೆ ಹಾಕಿ ತಟ್ಟೆಯಲ್ಲಿ ಗಂಜಿಯನ್ನೂ ಬಾಳೆ ತುಂಡಿನಲ್ಲಿ ಚಟ್ನಿಯನ್ನೂ ಇಟ್ಟು, ಮಧ್ಯಾಹ್ನಕ್ಕೆ ಬೇಕಾಗುವ ಗಂಜಿಯನ್ನು ನಿಲುವಿನಲ್ಲಿಟ್ಟು, ಸ್ಕೂಲಿಗೆ ಹೋಗುವಾಗ ತೊಟ್ಟುಕೊಳ್ಳುವ ಅಂಗಿ ಚಡ್ಡಿಯನ್ನು ಮಡಸಿಟ್ಟು ಅವಳು ಕೆಲಸಕ್ಕೆ ಹೋಗುವುದು.

ನಂಬೂದ್ರಿಗಳ ಮನೆಗೆ ಅವನನ್ನು ಜೊತೆಯಲ್ಲಿ ಕರೆದುಕೊಂಡು ಹೋಗಲು ತಾಯಿಗೆ ಇಷ್ಟವಿಲ್ಲ. ಅಂತು ಅವನು ಒಂದು ದಿನ ಹೋಗಿದ್ದುಂಟು; ಐದೋ ಎಂಟೋ ವಯಸ್ಸಿನಲ್ಲಿ. ಈಗಲೂ ಅಪ್ಪುಣ್ಣಿ ಅದನ್ನು ಕುರಿತು ಜ್ಞಾಪಿಸಿಕೊಳ್ಳುತ್ತಾನೆ. ದೊಡ್ಡ ಮನೆ. ಅಲ್ಲಿ ಭತ್ತ ಒಣಗಿಸುವುದೂ, ಕುಟ್ಟುವುದೂ ತಾಯಿಯ ಕೆಲಸ. ಕಿವಿಯಲ್ಲಿ ಹೊಳೆಯುತ್ತ ತೂಗಾಡುತ್ತಿದ್ದ ಬಳ್ಳಿಯಷ್ಟು ದೊಡ್ಡದಾದ ಆಭರಣವಿದ್ದ ಕುಂಞಾತ್ತೋಲು ಕರೆದು ಹೇಳುವುದು:

"ಪಾರೂ, ಆ ಚಾಪೇನ ಆಕಡೆ ಮಡಿಸಿಡು." ಎಂತಲೋ, ಇಲ್ಲದಿದ್ದರೆ, "ಆ ಒರಳು ಕಲ್ಲಿನಿಂದ ಸ್ವಲ್ಪ ಉಯ್ಯಿ[1] ತಂದು ಇಲ್ಲಿಡು" ಅಂತಲೋ ಆಗಿರುತ್ತಿತ್ತು.

ಮನೆಯ ಹಿಂದಿನ ಮೆಟ್ಟಲು ಇಳಿದರೆ ದಾರಿ ನೇರವಾಗಿ ನಂಬೂದ್ರಿಗಳ ಅಡುಗೆ ಮನೆಯ ಹತ್ತಿರಕ್ಕೆ ಹೋಗುತ್ತದೆ. ಆ ದಾರಿಯಾಗಿಯೇ ಅಮ್ಮ ಯಾವಾಗಲೂ ಹೋಗುವುದು.

ಅಮ್ಮನ ಜೊತೆಯಲ್ಲಿ ಹೋಗಿದ್ದ ದಿವಸ ಕುಂಞಾತ್ತೋಲು ಕೇಳಿದ್ದಳು:

"ಪಾರೂ ಹೈದನಾ?"

ಆ ಎರಡು ಶಬ್ದಗಳೂ ಅವನಿಗೆ ಹಿಡಿಸಲಿಲ್ಲ. ಅವನ ತಾಯಿಯ ಹೆಸರು 'ಪಾರೂ' ಎಂದಲ್ಲ. ಪಾರುಕುಟ್ಟಿ. ಅವನನ್ನು 'ಹೈದ' ಅಂದದ್ದು!

ಒರಳು ಕಲ್ಲಿನ ಪರಿಸರದಲ್ಲಿ ಅವನು ಆಡ್ತಾಡಿಕೊಂಡಿದ್ದ.. ಅಮ್ಮ ಅಕ್ಕಿ ಕೇರುತ್ತಿದ್ದಳು. ಪಡಸಾಲೆಯ ಹತ್ತಿರ ಮಂದಾರ ವೃಕ್ಷದ ಅಡಿಯಲ್ಲಿ ಅಡಿಕೆ ಹಾಳೆಯ ಕೌಪೀನ ಹಾಕಿಕೊಂಡಿದ್ದ, ಕಾಲಂದಿಗೆಗಳನ್ನು ತೊಟ್ಟಿದ್ದ, ಕುತ್ತಿಗೆಯಲ್ಲಿ ನೂಲಿನಲ್ಲಿ ಪೋಣಿಸಿದ ಪದಕವನ್ನು ತೂಗುಹಾಕಿಕೊಂಡಿದ್ದ, ತಲೆಗೂದಲನ್ನು ಉಂಡೆಯಾಗಿ ಗಂಟು ಹಾಕಿಕೊಂಡಿದ್ದ ಒಬ್ಬ ಹುಡುಗ ಆಡಿಕೊಂಡಿದ್ದ. ಅವನು ದೊಡ್ಡ ನಂಬೂದಿರಿಗಳ ಮಗ. ದೊಡ್ಡ ನಂಬೂದಿರಿ ಎನ್ನಿಸಿಕೊಂಡಿದ್ದಾತ ಮನೆಯ ಮುಂಬಾಗಿಲಿನ ಮೆಟ್ಟಲಿನ ಮೇಲೆ ಕಾಲು ಚಾಚಿಕೊಂಡು ಜಗಲಿಯ ಮೇಲೆ ತಾಂಬೂಲ ಜಗಿಯುತ್ತಾ, ಉಗಿಯುತ್ತಾ ಕುಳಿತಿದ್ದ. ಆ ಮನುಷ್ಯನಿಗಿಂತ ಕೆಳಗಡೆ ಇದ್ದ ಜನರನ್ನೂ ಅವನು ನೋಡಿದ. ಆತ

---

1 ಉಮಿ.

ಸುಮ್ಮನೆ ಕುಳಿತಿದ್ದಾಗಲೂ ಮಧ್ಯೆ ಮಧ್ಯೆ ಹಲ್ಲು ಬಿಡುತ್ತಿದ್ದ. ಮೊದಲು ತನ್ನನ್ನು ನೋಡಿ ನಕ್ಕಿದ್ದಿರಬೇಕು ಎಂದುಕೊಂಡ. ಆಮೇಲೆ ಆ ವಿಷಯ ತಿಳಿದದ್ದು.

ಮಧ್ಯಾಹ್ನದಲ್ಲಿ ನಂಬೂದಿರಿಗಳ ಊಟ ಮುಗಿಯಿತು. ದೊಡ್ಡ ಕುಂಞಾತ್ತೋಲು ಚಿಕ್ಕ ಕುಂಞಾತ್ತೋಲು. ಮಕ್ಕಳು, ಮರಿಗಳು ಎಲ್ಲರೂ ಊಟಮಾಡಿ ಆದ ಮೇಲೆ ಒಳಗಿನಿಂದಲೇ ಕುಂಞಾತ್ತೋಲು ಗಟ್ಟಿಯಾಗಿ ಕರೆದಳು:

"ಹೆಣ್ಣೇ"

ಅದು ಅವನ ತಾಯಿಯನ್ನೇ.

ಬಾಗಿಲಿನ ಹತ್ತಿರ ಒಂದರ ಮೇಲೊಂದು ಎರಡು ಎಂಜಲೆಲೆಗಳನ್ನಿಡಲಾಗಿತ್ತು. ಅಮ್ಮ ಅವನನ್ನು ಕೂಡಿಸಿ ಹಿಡಿದುಕೊಂಡು ಭತ್ತ ಕುಟ್ಟುವ ಹಜಾರದ ಪಕ್ಕದಲ್ಲಿ ತಂದಿಟ್ಟಳು. ಎರಡರಲ್ಲಿಯೂ ಎಂಜಲನ್ನ! ಚೀಪಿದ ಮಾವಿನ ಓಟೆಗಳೂ ಪಲ್ಯಗಳೂ ಇದ್ದವು.

ಅವನಿಗೆ ವಾಂತಿ ಬರುವಂತಾಯಿತು.

"ನನಗೆ ಬೇಡ."

"ಹಸಿವಾಗೋದಿಲ್ವಾ?"

"ನನಗೆ ಬೇಡ. ನನಗೆ ಬೇಡ."

ಅಳುವನ್ನು ತಡೆದುಕೊಂಡು ಅವನು ಹೇಳಿದ. ಆಗ ಅಮ್ಮ ಎಂಜಲೆಲೆಗಳನ್ನು ಕೆಳಗಿಟ್ಟು, ಬಗ್ಗಿ ಅವನನ್ನು ಅಪ್ಪಿಕೊಂಡು ಹೇಳಿದಳು. "ನಿನ್ನಮ್ಮ ಪಡಕೊಂಡು ಬಂದದ್ದು ಕಣಪ್ಪ ಇದು."

ಅವನ ನೆತ್ತಿಯೆಲ್ಲ ಬಿಸಿಯಾಗಿ ಬೆವರಿತು.

ಅದರ ನಂತರ ಅವನು ತಾಯಿಯ ಜೊತೆಯಲ್ಲಿ ಅಲ್ಲಿಗೆ ಹೋಗಿಲ್ಲ. ಸಾಯಂಕಾಲ ಹಿಂದಿರುಗಿ ಬರುವಾಗ ಮೊರದಲ್ಲಿ ಅಕ್ಕಿಯಿರುತ್ತದೆ. ಮೈಗೆಲ್ಲ ತೌಡು, ಧೂಳು ಅಂಟಿಕೊಂಡಿರುತ್ತದೆ. ಚೆನ್ನಾಗಿ ಕತ್ತಲಾದ ಮೇಲೆ ಬಾವಿಯ ಹತ್ತಿರ ಹೋಗಿ ತಾಯಿಯೂ ಅಪ್ಪಣ್ಣಿಯೂ ಸ್ನಾನ ಮಾಡುವುದು.

ನಂಬೂದ್ರಿಗಳ ಮನೆಗೆ ಮೇಲು ಭಾಗದಲ್ಲಿ ದೊಡ್ಡ ದೇವಾಲಯದ ಕೊಳವಿದೆ. ಬಡಗು ದಿಕ್ಕಿನಲ್ಲಿ ಕಲ್ಲು ಬಂಡೆಗಳ ಮಧ್ಯೆ ದ್ವಾರಗಳಿವೆ. ಆ ದ್ವಾರಗಳಲ್ಲಿಯೇ ಮೊಸಳೆಗಳು ಮೊಟ್ಟೆಯಿಟ್ಟು ಮರಿಗಳನ್ನು ಬೆಳೆಸುವುದು. ತೆಂಕು ಭಾಗದಲ್ಲಿ ಹೊಸದಾಗಿ ಸ್ನಾನ ಘಟ್ಟವನ್ನು ಕಟ್ಟಿಸಿದ್ದಾರೆ. ಮೆಟ್ಟಿಲುಗಳೂ ಹೊಸದಾಗಿ ಕಟ್ಟಿಸಿದುವು. ಅಲ್ಲಿಯೇ ಒಂದು ಕರಿಯ ಕಲ್ಲಿನಲ್ಲಿ "ಕೇಶವನ್ ನಂಬೂದ್ರಿಗಳ ಸೇವೆ" ಎಂದು ಕೆತ್ತಿಸಿದ್ದಾರೆ. ಕೊಳದಲ್ಲಿ ಸ್ನಾನ ಮಾಡುವುದಕ್ಕೆ ಹೋಗುವುದಾದರೆ ಅವನ ಕ್ಲಾಸಿನಲ್ಲಿ ಓದುವ ಹುಡುಗರು ಜೊತೆಗೆ ಸಿಕ್ಕುತ್ತಾರೆ. ಈಜಬಹುದು. ಮುಳುಗುವ ಆಟ ಆಡಬಹುದು.

ಆದರೆ ಅಮ್ಮನಿಗೆ ಕೊಳಕ್ಕೆ ಹೋಗಲು ಇಷ್ಟವಿಲ್ಲ. ಮನೆಯಿಂದ ಹೊರಟರೆ ನಂಬೂದಿರಿಗಳ ಮನೆ. ಅಲ್ಲಿಂದ ಹೊರಟರೆ ಮನೆ. ಅದು ಅಮ್ಮನ ನಿತ್ಯ ವಿಧಿ.

ರಾತ್ರಿ ಮಲಗಿದರೆ ಅಮ್ಮನಿಗೆ ಬೇಗ ನಿದ್ರೆ ಬರುತ್ತದೆ. ಆದರೂ ಅವನು ಸ್ವಲ್ಪ ಅಲುಗಾಡಿದರೆ ತಕ್ಷಣ ಎಚ್ಚರವಾಗಿ ಕೇಳುತ್ತಾಳೆ: "ಅಪ್ಪುಣ್ಣೀ" ಎಂದು.

ಚಿಕ್ಕ ಹುಡುಗನಾಗಿದ್ದ ಕಾಲದಲ್ಲಿ ತಾಯಿ ಅವನ ಸೊಂಟದ ಮೇಲೆ ತಾಳ ಹಾಕುತ್ತಾ ಹಾಡು ಹೇಳಿಕೊಟ್ಟಿದ್ದಾಳೆ. ಶ್ರೀಕೃಷ್ಣನ ವರ್ತನೆ. ಗೋಪಿಕಾಸ್ತ್ರೀಯರು ಗೋವುಗಳನ್ನು ಮೇಯಿಸುತ್ತಾ ಹೋಗುವ ಕಾಲಕ್ಕೆ ಸಂಬಂಧಿಸಿದ ಹಾಡು. ಶ್ರೀಕೃಷ್ಣ ಒಳ್ಳೆಯ ನೀವಾರದ ಅನ್ನವನ್ನೂ ಬೊಗರಿ ಕಾಯಿಯ ಸಾರನ್ನೂ ಊಟಮಾಡಿದ ಒಂದು ಹಾಡನ್ನೂ ಹೇಳಿದ್ದುಂಟು.

ನಿದ್ದೆ ಬರದೆ ಹೊರಳಾಡುತ್ತಿದ್ದಾಗ ಕತ್ತಲೆಯಲ್ಲಿ ಪಗಡೆ ದಾಳ ಉರುಳಿದ ಶಬ್ದ ಕೇಳಿ ಬರುತ್ತದೆ......ಎದೆಯುದ್ದ ನೀರಿನಲ್ಲಿ ಬಲಿಷ್ಠನಾದ ಒಬ್ಬ ಮನುಷ್ಯ ಭುಜದ ಮೇಲೆ ಒಂದು ಹೆಣ್ಣನ್ನು ಹೊತ್ತು ಕೊಂಡುಹೋಗುವ ದೃಶ್ಯ......ಪಗಡೆ ದಾಳ ಉರುಳುವ ಶಬ್ದ...... ಹಾಗೆಯೇ ನಿಧಾನವಾಗಿ ಅವನಿಗೆ ನಿದ್ದೆ ಬರುತ್ತದೆ.

ಮಣ್ಣಿನಲ್ಲಿ ನೆಟ್ಟಗೆ ನಿಂತ, ಭಾರವಾದ ಪಗಡೆ ದಾಳಗಳು......

ತಾಂಬೂಲ ಹಾಕಿಕೊಂಡ ತುಟಿಗಳು......

ಸತ್ತವರು ರಾತ್ರಿಯ ಹೊತ್ತಿನಲ್ಲಿ ಎದ್ದು ಬರುವುದುಂಟೆ?

ಸ್ವರ್ಗದಿಂದ......

* * * * *

ಪರೀಕ್ಷೆ ಕಳೆದು ಸ್ಕೂಲ್ ಬಾಗಿಲು ಮುಚ್ಚಿದ ಮೇಲೆ ಅಪ್ಪುಣ್ಣಿಗೆ ಕಾಲ ಕಳೆಯುವುದು ತುಂಬ ಕಷ್ಟವಾಯಿತು. ಇನ್ನು ನಲವತ್ತೈದು ದಿವಸಗಳು ಕಳೆಯಬೇಕು. ಅಲ್ಲಿಯ ವರೆಗೆ ಹಗಲು ರಾತ್ರಿ ಆಟವಾಡಿಕೊಂಡಿರುವುದೂ ಕಷ್ಟ.

ಅಮ್ಮ ಕೆಲಸಕ್ಕೆ ಹೋದ ಮೇಲೆ ಮನೆಯಲ್ಲಿ ಅವನೊಬ್ಬನೇ. ನಂಬೂದಿರಿಗಳ ಮನೆಗೆ ಅವನು ಹೋಗುವುದಿಲ್ಲ.

ನಲವತ್ತೈದು ದಿನಗಳು ಕಳೆಯಬೇಕು. ಒಂದು ತಗಡಿನ ಡಬ್ಬದಲ್ಲಿ ನಲವತ್ತೈದು ಕಲ್ಲುಗಳನ್ನು ಎಣಿಸಿಟ್ಟ. ಪ್ರತಿದಿನ ಬೆಳಗ್ಗೆ ಎದ್ದ ಕೂಡಲೇ ಮೊದಲು ಮಾಡುವ ಕೆಲಸವೆಂದರೆ ಅದರಿಂದ ಒಂದು ಕಲ್ಲು ತೆಗೆದುಹಾಕುವುದು.

ಕುಂಡಂಗಲ್‌ಕಾರರ ಮೆಟ್ಟಿಲಿನ ಹತ್ತಿರ ಇರುವ ಕೇಸರ ವೃಕ್ಷದ ಅಡಿಯಲ್ಲಿ ಅವನು ಹೋಗಿ ನಿಂತುಕೊಂಡ. ಕೇಶು ಎಲ್ಲಿಯಾದರೂ ಸಿಕ್ಕಿದರೆ ಅವನ ಜೊತೆಯಲ್ಲಿ ಓಲೆ ಚೆಂಡು ಮಾಡುತ್ತಾ ಕಾಲ ಕಳೆಯಬಹುದು ಎಂದು.

ಆದರೆ ಕೇಶು ಹೊರಗೆಲ್ಲಿಯೂ ಕಾಣಿಸಲಿಲ್ಲ. ಅವನಿಗೆ ಬಿಸಿಲು ತಾಗಿದರೆ ಉಬ್ಬಸ.

ಬಿಸಿಲಿನಲ್ಲಿ ಹೊರಗೆ ಹೋಗಬೇಡ ಎಂದು ಅವನ ತಾಯಿ ನಿರ್ಬಂಧಿಸಿದ್ದಾಳೆ. ಕಂಡ ಕಂಡ ಹುಡುಗರ ಜೊತೆಯಲ್ಲಿ ಹೋಗಕೂಡದು ಎನ್ನುವ ನಿರ್ಬಂಧವೂ ಇತ್ತು. ಅದು ತಿಳಿದೇ ಅಲ್ಲಿಗೆ ಹೋಗಿ ಕೇಶುವನ್ನು ಕರೆಯದೆ ಇರುವುದು.

ಉದುರಿ ಕೊಳೆಯುತ್ತಿರುವ ಕೇಸರ ಪುಷ್ಪಗಳನ್ನು ಆರಿಸಿ ತೆಗೆದುಕೊಂಡು ವಾಸನೆ ನೋಡಿ ನಾಲ್ಕಾಗಿ ಸೀಳಿ ಚೂರು ಮಾಡಿ ಎಸೆದು ಅಪ್ಪುಣ್ಣಿ ಮತ್ತೂ ಸ್ವಲ್ಪ ಹೊತ್ತು ಅಲ್ಲಿ ನಿಂತ.

ನಲವತ್ತೈದು ದಿನಗಳು ಕಳೆದರೆ ಸ್ಕೂಲ್ ಬಾಗಿಲು ತೆರೆಯುತ್ತದೆ. ಪಾಸಾಗುವ ನಂಬಿಕೆಯಿದೆ. ಸರ್ಟಿಫಿಕೇಟು ತೆಗೆದುಕೊಂಡು ತೃತ್ತಾಲ ಸ್ಕೂಲಿಗೆ ಹೋಗಬೇಕು. ದೊಡ್ಡ ಸ್ಕೂಲು.

ಸ್ವಲ್ಪ ದೂರದ ಸ್ಕೂಲು. ಒಂದು ಕ್ಯಾರಿಯರ್ ಇದ್ದಿದ್ದರೆ, ಊಟ ತೆಗೆದುಕೊಂಡು ಹೋಗಬಹುದಾಗಿತ್ತು.

ಆ ಪಾತ್ರೆ ಮಾರುವವನು ಬೀದಿಯಲ್ಲಿ ಸಾರುತ್ತಾ ಬಂದಾಗ ಅಮ್ಮ ಅವನನ್ನು ಕರೆದು ಬೆಲೆ ಕೇಳಿದಳು.

ಐದೂವರೆ ರೂಪಾಯಿ.

ಅಮ್ಮ 'ಬೇಡ' ಅಂದಳು.

ಯಾಕೆ ಕೊಂಡುಕೊಳ್ಳಲಿಲ್ಲ ಎಂದು ಕೇಳಲಿಲ್ಲ. ಐದೂವರೆ ರೂಪಾಯಿ ಇದ್ದರಲ್ಲವೆ?

ಆ ಸಮಯದಲ್ಲಿ ಆಮಿನುಮ್ಮನ ಚೀಟಿ ಹಣ ಸಿಕ್ಕಿದ್ದರೆ ಚೆನ್ನಾಗಿತ್ತು. ಒಂದೊಂದು ರೂಪಾಯಿಯ ಇಪ್ಪತ್ತು ಜನರಿರುವ ಚೀಟಿ. ಎಂಟೋ ಒಂಬತ್ತೋ ವಾರು ಮುಗಿದಿವೆ. ಅದು ಸಿಕ್ಕಿದಾಗ ಒಂದು ತೆಗೆದು ಕೊಳ್ಳೋಣ ಎಂದು ಅಮ್ಮ ಹೇಳುತ್ತಾಳೆ.

ಕಾಲುದಾರಿಯಲ್ಲಿ ಊರುಗೋಲಿನ ಶಬ್ದ ಕೇಳಿಸಿತು. ಯಾರಿರಬಹುದು ಎಂದು ಅನುಮಾನಿಸುತ್ತಾ ನೋಡಿದಾಗ ಕಂಡದ್ದು ಮುತ್ತಜ್ಜಿ. ಕೋಲನ್ನು ಊರುತ್ತಾ ಓಲಾಡಿಕೊಂಡು ಬರುತ್ತಿದ್ದಾಳೆ. ಗಳು ಊರಿ ದೋಣಿ ನಡೆಸಿದ ಹಾಗೆ ಮುತ್ತಜ್ಜಿ ಬರುತ್ತಿರುವುದು. ಕಳೆದ ಮೂರು ನಾಲ್ಕು ದಿವಸಗಳಿಂದ ಮುತ್ತಜ್ಜಿ ಕೊಟ್ಟಿಗೆಯಲ್ಲಿರಲಿಲ್ಲ.

"ಮುತ್ತಜ್ಜೀ……"

ದೋಣಿ ಓಲಾಡುವ ಹಾಗೆ ನಡೆದು ಬಂದು, ಕರೆದದ್ದು ಕೇಳಿಸದ ರೀತಿಯಲ್ಲಿ ಹತ್ತಿರಕ್ಕೆ ಬಂದು, ಥಟ್ಟನೆ ನಿಂತು, ಅವನ ತಲೆಯ ಮೇಲೆ ದೊಣ್ಣೆಯೆತ್ತಿ, ಮೆಲ್ಲಗೆ ಒಂದು ಏಟು ಹಾಕಿದಳು. ಒಂಟಿಯಾಗಿದ್ದ ಮುಂಭಾಗದ ಹಲ್ಲನ್ನು ಹೊರಗೆ ತೋರಿಸುತ್ತ ಗಟ್ಟಿಯಾಗಿ ನಗುತ್ತ ಕೇಳಿದಳು·

"ನಾನೇನು ದನದ ಕರು ಅಂತ ತಿಳಿದೆಯಾ?"

ಅದು ಮುತ್ತಜ್ಜಿಯ ಒಂದು ಹುಡುಗಾಟ.

"ಮೂರು ನಾಲ್ಕು ದಿನದಿಂದ ಒಳ್ಳೇ ಅದೃಷ್ಟ ಮುತ್ತಜ್ಜಿಗೆ" ಎಂದು ಅವಳ ಭುಜದಲ್ಲಿ ತೂಗಾಡುತ್ತಿದ್ದ ಚೀಲವನ್ನು ಮುಟ್ಟಿನೋಡಿ ಅಪ್ಪಣ್ಣ ಹೇಳಿದ.

"ಎಂಥ ಅದೃಷ್ಟ ನನ್ನದು ಅಪ್ಪು: ಕಣ್ಣು ಓಡುವಷ್ಟು ಕಾಲು ಓಡುವುದಿಲ್ಲ...... ಅದಿರಲಿ ನೀನ್ಯಾಕೆ ಈ ನಡು ಹಗಲ ಬಿಸಿಲಲ್ಲಿ ಇಲ್ಲಿ ಬಂದು ನಿಂತಿದ್ದಿ?"

ಮುತ್ತಜ್ಜಿಯ ಜೊತೆಯಲ್ಲಿ ಅವನು ಹೊರಟ. ಕೊಟ್ಟಿಗೆಯ ಬಾಗಿಲು ತೆರದು ಚೀಲವನ್ನು ಕೆಳಗಿರಿಸಿ ಕೋಲನ್ನು ಮೂಲೆಯಲ್ಲಿ ನಿಲ್ಲಿಸಿ, ಮುತ್ತಜ್ಜಿ ಕುಳಿತುಕೊಂಡು ಹೇಳಿದಳು.

"ಆಗೋದಿಲ್ಲ ಅಪ್ಪು......ಹಿಂದಿನ ಹಾಗೆ ಇನ್ನು ನನ್ನ ಕೈಯಲ್ಲಿ ಊರು ಸುತ್ತೋದಕ್ಕಾಗೋದಿಲ್ಲ."

"ಮುತ್ತಜ್ಜಿಗೆಷ್ಟು ವರ್ಷ?"

"ಅದೆಷ್ಟೋ ಆಯ್ತು ಮಗಾ. ಮುತ್ತಜ್ಜಿ ನಿನ್ನೆ ಮೊನ್ನೆಯವಳಲ್ಲ. ಕೊಳಂಬು[1] ಸಿಂಗಾಪುರನೆಲ್ಲ ಸುತ್ತಿ ನಡೆದಾಡಿದೋಳು ಮುತ್ತಜ್ಜಿ."

ಕೊಳಂಬು ಸಿಂಗಾಪುರ ಎಂದು ಕೂಡಿಸಿಯೇ ಮುತ್ತಜ್ಜಿ ಹೇಳುವುದು. ಒಂದು ಸಲ ಮುತ್ತಜ್ಜಿ ಕೊಲಂಬೋಗೆ ಹೋಗಿದ್ದಳು. ಅದನ್ನು ಮುತ್ತಜ್ಜಿ ಸಿಕ್ಕಿ ಸಿಕ್ಕಿದವರಿಗೆಲ್ಲ ವಿವರಿಸಿದ್ದಾಳೆ.

ಕುಡಲ್ಲೂರಿನಲ್ಲಿ ಹಡಗು ಹತ್ತಿದ ಹೆಂಗಸರು ಇಬ್ಬರು ಮಾತ್ರ. ಒಬ್ಬಳು ಕುನ್ನಿಲ್ ಪುರದಲ್ಲಿ ಹೊಸದಾಗಿ ಮಾಳಿಗೆ ಮನೆ ಕಟ್ಟಿಸಿಕೊಂಡು ವಾಸಮಾಡುತ್ತಿರುವ ಅಮ್ಮಾಳು ಅಮ್ಮ. ಅವಳ ಗಂಡ ಕೊಲಂಬೋನಲ್ಲಿ ನೌಕರಿಯಲ್ಲಿದ್ದರು. ಅಮ್ಮಾಳು ಅಮ್ಮನಿಗೆ ಸಹಾಯಕ್ಕಿರಲಿ ಎಂದು ಮುತ್ತಜ್ಜಿಯನ್ನು ಕರೆದುಕೊಂಡು ಹೋಗಿದ್ದರು. ಆಗ ಮುತ್ತಜ್ಜಿಗೆ ಇಷ್ಟು ಮುಪ್ಪಾಗಿರಲಿಲ್ಲ.

"ಎರಡು ವರ್ಷ ಕೊಳಂಬಿನಲ್ಲಿದ್ದದ್ದು. ತಿನ್ನೋದಕ್ಕೇನು ಆನಂದ! ದೋಸೆ ಮಾಡಿ ಬೇಕಾದಷ್ಟು ತಿಂದು ಉಳಿದದ್ದನ್ನು ಕಾಗೆಗೆ ಹಾಕಿದ್ದೆ. ಪಕ್ಕದ ಮನೆಯಲ್ಲಿ ಒಬ್ಬಳು ತಮಿಳಿನವಳಿದ್ದಳು—ಕಣ್ಣಮ್ಮ. ಅವಳಿಗೂ ಕೊಡ್ತಿದ್ದೆ."

ಆ ಕಣ್ಣಮ್ಮನನ್ನು ಕುರಿತು ಅಪ್ಪಣ್ಣ ಮುತ್ತಜ್ಜಿಯಿಂದ ತುಂಬ ಕೇಳಿದ್ದ. ಅವಳನ್ನು ಕ್ರಯಕ್ಕೆ ಕೊಂಡುಕೊಂಡಿದ್ದದ್ದು. ಅಷ್ಟೆ.

ಮುತ್ತಜ್ಜಿ ಹಡಗಿನಿಂದ ಇಳಿದಾಗ ವಾಂತಿಮಾಡಿಕೊಳ್ಳಲು ಪ್ರಾರಂಭಿಸಿದ್ದು. ಕಣ್ಣಮ್ಮನಿಗೆ ಮಲಯಾಳ ಹೇಳಿಕೊಟ್ಟದ್ದು. ಸಿಂಹಳಿತಿಯ ಜೊತೆಯಲ್ಲಿ ಜಗಳವಾಡಿದ್ದು

---

1 ಕೊಲಂಬೊ.

......ಇತ್ಯಾದಿ ಹೇಳುವುದಕ್ಕಾರಂಭಿಸಿದರೆ ಅಪ್ಪುಣ್ಣಿ ಎಲ್ಲವನ್ನೂ ಮೈಮರೆತು ಕೇಳುತ್ತಿದ್ದ.

"ಮುತ್ತಜ್ಜಿ ಎಲ್ಲಿಗೆ ಹೋಗಿದ್ದದ್ದು?"

ಅಪ್ಪುಣ್ಣಿ ಬಂದು ಹಗ್ಗದ ಮಂಚದ ಮೇಲೆ ಕುಳಿತುಕೊಂಡು ಕೇಳಿದ.

"ಎಲ್ಲೂ ಹೋಗಿರಲಿಲ್ಲ ಮಗಾ. ವಡಕ್ಕೇಪಾಟ್‌ಗೆ ಹೋಗಿ ಬಂದೆ. ಅಲ್ಲಿ ಮೊನ್ನೆ ಭುವನೇಶ್ವರಿ ಪೂಜೆ ಇತ್ತು. ನಿನ್ನೆ ವಾಳಾವಿಲ್ ಗುಡೀಲಿ ಕಳಂ ಪಾಟ್ಟ್[1] ಇತ್ತು.

ಒಂದು ದಿನ ಭುವನೇಶ್ವರಿ ಪೂಜೆ.

ಮಾರನೆಯ ದಿನ ದೇವಾಲಯದಲ್ಲಿ ಕಳಂಪಾಟ್ಟ್! ಅಲ್ಲಿಯ ಹುಡುಗರಿಗೆ ಎಷ್ಟು ಸಂತೋಷವಾಗುವುದಿಲ್ಲ! ಭಾಸ್ಕರ, ಕೃಷ್ಣಕುಟ್ಟಿ, ತಂಗಂ—ಅವರ ಹೆಸರು ಮಾತ್ರ ಅವನು ಕೇಳಿರುವುದು. ಅದೂ ಮುತ್ತಜ್ಜಿಯಿಂದ ಯಾರನ್ನೂ ನೋಡಿದ ಪರಿಚಯವಿಲ್ಲ. ದೊಡ್ಡ ಮಾವ, ಚಿಕ್ಕ ಮಾವ—ಇಬ್ಬರು ದೊಡ್ಡ ಅತ್ತೆಯರಿದ್ದಾರೆ. ಅಜ್ಜಿ ಇದ್ದಾರೆ. ಹುಡುಗರಲ್ಲಿ ಹಿರಿಯ ಮಕ್ಕಳು ಯಾರು? ಅವನಿಗೆ ತಿಳಿಯದು.

"ಭುವನೇಶ್ವರಿ ಪೂಜೆಗೆ ಏನೆಲ್ಲ ಇರುತ್ತೆ ಮುತ್ತಜ್ಜಿ?"

ಮುತ್ತಜ್ಜಿ ಒಂದು ಹಾಡಿನ ಹಾಗೆ ಹೇಳುವುದಕ್ಕೆ ತೊಡಗಿದಳು.

"ಅವಿಲು, ಅರಳು, ಸಕ್ಕರೆ, ತೆಂಗಿನಕಾಯಿ ಅಪ್ಪಕಜ್ಜಾಯ, ಎರೆಯಪ್ಪ."

ಅಷ್ಟೆಲ್ಲ ಇರುವುದನ್ನು ಕೇಳಿ ಅಪ್ಪುಣ್ಣಿಗೆ ಬಾಯಿಯಲ್ಲಿ ನೀರು ಬಂದಿತು.

"ಮತ್ತೆ ಕೋಳಿ ಮಾಂಸವೂ. ಮುತ್ತಜ್ಜಿ ಅಪ್ಪೂಗೊಂದು ಸಾಮಾನು ತಂದಿದ್ದಾಳೆ." ಎಂದು ಹೇಳಿ ಚೀಲವನ್ನು ಬಿಚ್ಚಿದಳು. ಎರಡು ಎರೆಯಪ್ಪ!

"ತುಂಬ ದೂರ ಉಂಟಾ ಮುತ್ತಜ್ಜೀ"

"ಕೊಳಂಬಿಗಾ?"

"ಅಲ್ಲ, ಅಲ್ಲಿಗೆ......ವಡಕ್ಕೇಪಾಟ್‌ಗೆ......"

ಮುತ್ತಜ್ಜಿ ದಾರಿಯನ್ನು ವಿವರಿಸಿದಳು.

ಸಲೀಸಾಗಿ ಹೋಗಬಹುದು. ನಂಬೂದಿರಿಗುಡ್ಡದ ಎಡದಾರಿಯಲ್ಲಿ ಹೋಗಿ ಎರಡು ಗುಡ್ಡ ದಾಟಿದರೆ, ಬಡಗು ಮನೆಯ ಮುಂಭಾಗಕ್ಕೇ ಹೋಗುತ್ತದೆ. ಮುತ್ತಜ್ಜಿ ಹೋಗುವುದು ಆ ದಾರಿಯಲ್ಲಲ್ಲ. ಗುಡ್ಡ ಹತ್ತಿ ಇಳಿಯಲು ಮುತ್ತಜ್ಜಿಗೆ ಸ್ವಲ್ಪ ಪ್ರಯಾಸ. ಗದ್ದೆ ಬಯಲಿನ ದಾರಿಯಲ್ಲಿ ಸ್ವಲ್ಪ ಹೆಚ್ಚು ದೂರ ನಡೆಯಬೇಕು. ಆಗ ಮನೆಯ ಮುಂಭಾಗಕ್ಕೆ ಹೋಗಿ ಸೇರುತ್ತಾಳೆ.

"ದೊಡ್ಡ ಮನೆಯಾ ಮುತ್ತಜ್ಜಿ?"

---

1 ಚೊಚ್ಚಲು ಬಸುರಿಯನ್ನು ದೇವಾಲಯಕ್ಕೆ ಕರೆದುಕೊಂಡು ಹೋಗಿ ಹರಕೆ ಒಪ್ಪಿಸುವುದು.

"ಚೌಕಟ್ಟಿನ ಮನೆ. ಪುರಾತನ ಕಾಲದಲ್ಲಿ ಕಟ್ಟಿದ ಮನೆ. ನಾನು ಸಣ್ಣೋಳಾಗಿದ್ದಾಗ ಆ ಮನೆಯಲ್ಲಿ ಎಷ್ಟೋನು ಐಶ್ವರ್ಯ. ತುಂಬಿ ತುಳುಕಿತ್ತು! ಮೂರು ಒಪ್ಪರುಗಳು. ಎರಡು ಚೌಕಟ್ಟಿನ ಮನೆಗಳೂ ಒಟ್ಟಿಗಿದ್ದುವು. ಎರಡು ಅಂಗಳ ಇದ್ದುವು. ಆ ಕಾಲವೆಲ್ಲ ಹೋಯ್ತು."

ಒಂದು ಸಲವಾದರೂ ಆ ಮನೆಯ ಮೆಟ್ಟಿಲು ತುಳಿಯಬಾರದು ಅಂತ ಇದೆಯೆ?

"ಮತ್ತೆ ಯಾವಾಗ ಹೋಗ್ತೀ ಮುತ್ತಜ್ಜೀ?"

"ಬರೋವಾರ ಒಂದುಸಲ ಹೋಗಬೇಕಲ್ಲ. ಪಾಂಬುತುಳ್ಳಲ್[1] ಆಡಿಸ್ತಾರೆ."

'ತುಳ್ಳಲ್' ಎಂದರೇನೋ ಎಂದು ತಿಳಿಯದು. ಓಟ್ಟನ್‌ತುಳ್ಳಲ್[2] ಇರಬಹುದೇ? ಅದೂ ಸ್ಕೂಲಿನಲ್ಲಿ ನೋಡಿದ್ದು.

"ಅಲ್ಲ ಕಣೋ ದಡ್ಡ! ಸರ್ಪ ನಾಟ್ಯ. ಪದಿನೇಳು ವರ್ಷ ಆಯಿತು ಸರ್ಪ ನಾಟ್ಯ ಆಡಿಸಿ. ಮೂರು ದಿನಗಳು ಬೇಕಾಗಬಹುದು. ಮೂರು ಸರ್ಪಗಳಲ್ಲವೆ ಇರೋದು! ಸುಮ್ಮನೇ ಅಲ್ಲ."

ಸರ್ಪ ನಾಟ್ಯ, ನಾಗಬನಗಳಿರುವ ಮನೆಗಳಲ್ಲಿ ಆ ಪದ್ಧತಿಯಿದೆ.

"ಕರೆಯುವುದಕ್ಕೆ ಮನೆಮನೆಗೂ ಆಳುಗಳು ಹೋಗಿದ್ದಾರೆ."

ಎಲ್ಲರೂ ಬರುತ್ತಾರೆ. ಮೊದಲೇ ಪಾಲಾಗಿ ಹೋದವರು; ನೆಂಟರಿಷ್ಟರು, ಊರಿನವರು—ಎಲ್ಲರೂ.

ಅವನ ತಾಯಿಯನ್ನು ಮಾತ್ರ ಕರೆಯುವುದಿಲ್ಲ.

ಅವನನ್ನು ಯಾರೂ ಕರೆದಿಲ್ಲ.

ಕರೆಯದೆ ಇರುವುದೇತಕ್ಕೆ? ಬೇರೆ ಮನೆಯವರಾಗಿದ್ದರೆ ಕರೆಯಬೇಕು. ಅದೇ ಮನೆಯವರಿಗೂ ಆಹ್ವಾನ ಬೇಕೆ? ಆದರೆ ಅಲ್ಲಿಗೆ ಹೋಗ ಬಾರದು ಎಂದು ಅವನ ತಾಯಿ ಹೇಳುವುದು.

"ಹೊಟ್ಟೆಗಿಲ್ಲದೆ ಸತ್ತರೂ, ನನ್ನ ಕಂದಾ, ನಾನು ಆ ಮನೆ ಮೆಟ್ಟಲು ತುಳಿಯೋದಿಲ್ಲ."

ಆದರೆ ಅಲ್ಲಿ ಸರ್ಪ ನಾಟ್ಯ. ಈಗ ಬಿಟ್ಟರೆ ಇನ್ನೊಂದು ಸಲ ಅದನ್ನು ನೋಡುವುದಕ್ಕೆ ಸಾಧ್ಯವಿದೆಯೋ ಇಲ್ಲವೋ ಎಂದು ತಿಳಿಯದು. ಸರ್ಪ ನಾಟ್ಯ ನಡೆಯುವುದೇ ಅಪೂರ್ವ.

ಅವನು ಅಲ್ಲಿಗೆ ಹೋದರೇನು?

"ಮುತ್ತಜ್ಜಿ ಜೊತೆಯಲ್ಲಿ ನಾನೂ ಅಲ್ಲಿಗೆ ಬರ್ತೀನಿ."

"ಏನು ಹೇಳ್ತೀಯಪ್ಪ; ನೀನಾ ಬರೋನು?"

---

1 ಸರ್ಪನಾಟ್ಯ. 2 ಹಾಡುತ್ತಾ ನರ್ತಿಸುವುದು.

ಮುತ್ತಜ್ಜಿ ಮಂಡಿಯ ಮೇಲೆ ಕೈಯಿಟ್ಟು ಬಾಗಿ ಮೇಲೆದ್ದಳು. ಸುಕ್ಕು ಗಟ್ಟಿದ ಕಣ್ಣು ರೆಪ್ಪೆಗಳಿಂದ ಅವನ ಮುಖದ ಕಡೆಗೆ ಆಶ್ಚರ್ಯದಿಂದ ನೋಡುತ್ತಾ ನಿಂತಳು.

ಒಂದು ಸಲ ಸಮೀಕ್ಷೆ ನಡೆಸಿದ ಬಳಿಕ ಹೇಳಿದಳು:

"ನಿನ್ನಮ್ಮ ಒಪ್ಪೋದಿಲ್ಲ ಅಪ್ಪೂ."

"ನಾನು ಅಮ್ಮನ ಹತ್ತಿರ ಹೇಳ್ತೀನಿ."

"ನೀನೇನು ಬರೋದು ಬೇಡ. ಸುಮ್ಮನೆ ಇಲ್ಲೇ ಇರು." ಮುತ್ತಜ್ಜಿ ವಾತ್ಸಲ್ಯ ಪೂರ್ವಕವಾಗಿ ಹೇಳಿದಳು.

"ನಾನು ಅಮ್ಮನನ್ನೇ ಕೇಳ್ತೀನಿ." ಅವನು ಕೊಟ್ಟಿಗೆಯ ಬಾಗಿಲು ದಾಟಿ ಹೊರಗೆ ಬಂದಿದ್ದ.

ಮುತ್ತಜ್ಜಿ ಕರೆದಳು.

"ಅಪ್ಪೂ, ಇಲ್ಲಿ ಬಾ."

ಅವನು ಹಿಂದಿರುಗಿ ನೋಡದೆ ಮನೆಯ ಕಡೆಗೆ ಓಡಿದ್ದ.

"ನನ್ನ ಮನೆಯಲ್ಲವೆ? ನಾನು ಹೋದರೇನಂತೆ?" ನಡೆಯುವಾಗ, ಸ್ನಾನ ಮಾಡುವಾಗ, ಊಟ ಮಾಡುವಾಗ, ಎಲ್ಲಿ ಕುಳಿತಿರಲಿ, ನಿಂತಿರಲಿ, ಅದೇ ಆಲೋಚನೆಯಲ್ಲಿರುತ್ತಿದ್ದ. ಆದರೆ ತಾಯಿಯನ್ನು ಕೇಳುವುದು ಹೇಗೆ?

ಕಣ್ಣು ರೆಪ್ಪೆ ಮುಚ್ಚಿ ಮಲಗಿದ್ದರೂ ನಿದ್ದೆ ಬರುವುದಿಲ್ಲ.

ಅತ್ತ ಇತ್ತ ಹೊರಳಾಡಿ ನೋಡಿದ.

ಅಮ್ಮನ ಪಕ್ಕಕ್ಕೆ ಸರಿದು ಬಂದ.

"ಅಮ್ಮ ಅಲ್ಲಿ ನಾಟ್ಯವಂತೆ."

"ಅಲ್ಲಿ. ನಮ್ಮ ಮನೆಯಲ್ಲಿ."

ತಾಯಿಯ ನಿದ್ದೆ, ಹೊರಟುಹೋದಂತೆ ತೋರಿತು.

"ಅಲ್ಲಿ ನಿನಗೇನು ಹಾಕಿರೋ ಹಾಳೆ. ಸುಮ್ಮನೇ ಮಲಗೋದಕ್ಕಾಗೋದಿಲ್ಲವಾ?"

ಅವನು ಮತ್ತೆ ಮಾತಾಡಲಿಲ್ಲ.......ಕಣ್ಣು ರೆಪ್ಪೆಯನ್ನು ಮುಚ್ಚಿಕೊಂಡು ಮಲಗಿದ.

ಬೆಳಗ್ಗೆ ಎದ್ದು ಮತ್ತೆ ಮುತ್ತಜ್ಜಿಯ ಹತ್ತಿರಕ್ಕೆ ಓಡಿದ.

"ಮುತ್ತಜ್ಜೀ, ನೀನು ಅಮ್ಮನ ಹತ್ತಿರ ಹೇಳಬೇಕು. ಅಮ್ಮನನ್ನು ಒಪ್ಪಿಸಬೇಕು."

ಮುತ್ತಜ್ಜಿ ಮತ್ತೂ ಉಪದೇಶಿಸಿದಳು.

"ಸುಮ್ಮನೆ ತೊಂದರೆ ಉಂಟು ಮಾಡಿಕೋಬೇಡ."

ಅವನಿಗೆ ಅಳು ಬರುವಂತಾದಾಗ, ಮುತ್ತಜ್ಜಿ ಅಮ್ಮನ ಹತ್ತಿರ ಮಾತಾಡುವುದಕ್ಕೆ ಒಪ್ಪಿದಳು.

ಮುತ್ತಜ್ಜಿ ಅಮ್ಮನ ಹತ್ತಿರ ಅದೇ ವಿಷಯ ಮಾತನಾಡುವುದಕ್ಕೆ ಬಂದಾಗ ಅವನು

ಏನು ತಿಳಿಯದವನಂತೆ ಹೊರಕ್ಕೆ ಹೋದ. ಹತ್ತಿರದಲ್ಲಿದ್ದ ಬಿದಿರು ಹಿಂಡಿಲಿನ ಮೇಲೆ ಒಂದು ಹಿಡಿ ಮರಳು ತೆಗೆದು ಎರಚಿದ. ಆ ಮರಳು, ಶಬ್ದ ಮಾಡುತ್ತ ಕೆಳಗೆ ಬೀಳು ವುದನ್ನು ಕೇಳಿ ಸಂತೋಷಪಟ್ಟ. ಆಮಿನುಮ್ಮನ ಕೌಂಪೌಂಡಿನ ಗಿಡಗಳಲ್ಲಿ ಅಡಗಿ ಕೊಂಡಿದ್ದ ಕೆಂಬೂತಕ್ಕೆ ಒಂದು ಕಲ್ಲು ತೆಗೆದು ಎಸೆದ.

ಇಷ್ಟು ಹೊತ್ತಿಗೆ ಮುತ್ತಜ್ಜಿ ಹೇಳಿ ಮುಗಿಸಿರಬಹುದು ಎಂದು ತೀರ್ಮಾನಿಸಿದ ಬಳಿಕ ಅವನು ಹಿಂದಿರುಗಿದ. ಆಗ ಮುತ್ತಜ್ಜಿ ಅಲ್ಲಿಂದ ಹೋಗಿ ಆಗಿತ್ತು. ಅಮ್ಮ ಒಳಗಿದ್ದಳು. ಮೆಲ್ಲ ಮೆಲ್ಲನೆ ಹೆಜ್ಜೆಯಿಡುತ್ತಾ ಒಳಕ್ಕೆ ಬಂದಾಗ, ಒಳಗೆ ಅಮ್ಮ ಅಡುಗೆ ಮನೆಯ ಬಾಗಿಲನ್ನು ಹಿಡಿದುಕೊಂಡು ನಿಂತಿದ್ದಳು. ಶಬ್ದವಿಲ್ಲದೆ ಹತ್ತಿರಕ್ಕೆ ಬಂದು ನೋಡಿದಾಗ ತಾಯಿಯ ಕೆನ್ನೆಯ ಮೇಲೆ ಕಣ್ಣೀರು ಉರುಳುತ್ತಿದ್ದುದು ಕಾಣಿಸಿತು.

ಕಣ್ಣೊರಸಿಕೊಂಡು, ಗಂಟಲು ಸರಿಮಾಡಿಕೊಂಡು ಅಮ್ಮ ಕರೆದಳು:

"ಅಪ್ಪುಣ್ಣೀ"

ಅವನು ಮೆಲ್ಲಮೆಲ್ಲನೆ ಹತ್ತಿರ ಬಂದ.

"ನನ್ನ ಕಂದ, ಅದೇ ಹಠ ಹಿಡೀಬ್ಯಾಡ."

ಆಗ ಸಿಟ್ಟು ಬರಲಿಲ್ಲ; ಸಂಕಟವುಂಟಾಯಿತು.

"ಅಂಥ ಪುಣ್ಯ ನಿನಗಿಲ್ಲ. ನಿನ್ನ ತಂದೆಯಾಗಲಿ ತಾಯಿಯಾಗಲಿ ಆಭಾಗ್ಯ ಪಡೆದು ತರಲಿಲ್ಲ."

ಅವನೂ ಕಣ್ಣೀರನ್ನೊರಸಿಕೊಂಡ.

"ನೀನ್ಯಾಕೆ ಅಲ್ಲಿಗೆ ಹೋಗಬೇಕು?"

ಆಗ ಅವನ ನಿರ್ಧಾರವೆಲ್ಲ ಕರಗಿ ಹೋಯಿತು. ಅವನು ಗಟ್ಟಿಯಾಗಿ ಅತ್ತ.

"ಅಳಬೇಡ ಅಪ್ಪುಣ್ಣೀ"

ಅಮ್ಮ ಬಾಗಿಲಿನ ಸಂದಿನಿಂದ ಹೊರಗೆ ನೋಡುತ್ತಾ ಎಷ್ಟೋ ಹೊತ್ತು ಸಮಾಧಾನ ಪಡಿಸುತ್ತಾ ನಿಂತಿದ್ದಳು.

ಅವನು ನಿರೀಕ್ಷಿಸದೇ ಇದ್ದದ್ದನ್ನು ಅವನ ತಾಯಿ ಹೇಳಿದಳು.

"ಅಪ್ಪುಣ್ಣೀ ಹೋಗಬೇಕಾಗಿದ್ದರೆ ಹೋಗು."

ಹೋಗುವುದಿಲ್ಲ ಎಂದು ಹೇಳಬೇಕು ಎನ್ನಿಸಿತು.

ತಾಯಿ ತನ್ನಷ್ಟಕ್ಕೆ ತಾನೇ ಮಾತಾಡಿಕೊಂಡಳು:

"ಅವನೂ ಒಬ್ಬ ಹುಡುಗನಲ್ಲವಾ? ಅವನಿಗೂ ಆಸೆ ಅನ್ನೋದು ಇರೋದಿಲ್ಲವಾ?"

ಅಪ್ಪುಣ್ಣಿ ಆಶ್ಚರ್ಯಗೊಂಡು ನಿಂತಿದ್ದ.

"ಯಾರ್‍ಯಾರೋ ಅಲ್ಲಿಗೆ ಹೋಗುವಾಗ ನೀನು ಯಾಕೆ ಅಲ್ಲಿಗೆ ಹೋಗಬಾರದು? ಹೋಗು"

ಆ ಧ್ವನಿ ಎಂದಿಗಿಂತ ಭಾರವಾಗಿತ್ತು.

ಕಣ್ಣನ್ನು ಒರಸಿಕೊಂಡು, ತಾಯಿಯ ತೋಳಿನಿಂದ ಬಿಡಿಸಿಕೊಂಡು ಅವನು ಮುತ್ತಜ್ಜಿಯ ಕೊಟ್ಟಿಗೆಗೆ ಓಡಿದ.

* * * * *

ಕೆಲಸ ಮುಗಿಸಿ ಪಾರುಕುಟ್ಟಿ ಮನೆಗೆ ಹೋಗುವುದಕ್ಕೆ ಅನುಮತಿಯನ್ನು ಕಾಯುತ್ತಾ ನಿಂತಿದ್ದಳು. ಆಗ ಕುಂಞಾತ್ತೋಲು ಸ್ವಲ್ಪ ಸೌದೆಯನ್ನು ತಂದು ಹೊರಕ್ಕೆ ಹಾಕಿದಳು. ಪಾರುಕುಟ್ಟಿ ಒರಳು ಕಲ್ಲಿನ ಹತ್ತಿರ ಮೂಲೆಗೆ ಒರಗಿಸಿ ನಿಲ್ಲಿಸಿದ್ದ ಕೊಡಲಿಯನ್ನು ತೆಗೆದು ಕೊಂಡು ಬಂದಳು. ಒಣಗಿದ ಸೌದೆ, ಆ ಒಣ ಸೌದೆಯ ತುಂಡನ್ನು ಸೀಳುತ್ತಿದ್ದಾಗ ಕುಂಞಾತ್ತೋಲು, ಪಾರುಕುಟ್ಟಿಯ ಯೋಗಕ್ಷೇಮವನ್ನು ವಿಚಾರಿಸುವುದಕ್ಕೆ ಬಂದದ್ದು.

"ಪಾರೂಗೆ ರಾತ್ರಿ ಹೊತ್ತಿನಲ್ಲಿ ಜೊತೆಗೆ ಯಾರೂ?"

'ದೇವರಿದ್ದಾನೆ' ಎಂದು ಹೇಳಬೇಕೆನ್ನಿಸಿತು. ಆದರೆ ಹೇಳಿದ್ದು

"ನಾನು ಮತ್ತು ಹುಡುಗ ಮಾತ್ರ"

"ಕೋಂದುಣ್ಣಿ ಕಡೆಯವರು ಯಾರೂ ಇಲ್ಲವಾ?"

"ಅವರೆಲ್ಲ ದೂರವಾಗಿ ಎಷ್ಟೋ ಕಾಲ ಆಯ್ತಲ್ಲ?"

"ಕೋಂದೂನ ದೊಡ್ಡಮ್ಮನಿಗೆ ಒಬ್ಬ ಮಗ ಇದ್ದನಲ್ಲ?"

"ಅವನೂ ಸಣ್ಣದರಲ್ಲೇ ಮನೆಬಿಟ್ಟು ಹೋದ."

"ನಿನ್ನ ಮನೆಯಿಂದಲಾ?"

ಒಣಗಿದ ಸೌದೆ. ಬಲವಾಗಿ ಒಂದು ಏಟು ಹಾಕಿದಳು.

ಕೊಡಲಿ ಏಟು ಸೌದೆಯಿಂದ ಜಾರಿ ನೆಲಕ್ಕೆ ಬಿತ್ತು. ಕುಂಞಾತ್ತೋಲು ಅದನ್ನು ನೋಡಿದಳು.

"ಅಯ್ಯಯ್ಯೋ ನೀನು ಕೊಡಲಿ ಬಾಯಿ ಹಾಳು ಮಾಡ್ತೀಯಲ್ಲ".

ಎಡದ ಕಾಲಿನಲ್ಲಿ ಸೌದೆಯನ್ನು ಬಲವಾಗಿ ಮೆಟ್ಟಿಕೊಂಡು ಸೌದೆ ಒಡೆಯಲು ನೋಡಿದಳು. ಸೌದೆ ಸುಲಭವಾಗಿ ಸೀಳುತ್ತಿತ್ತು. ಒಡೆಯುವುದಕ್ಕೆ ಇನ್ನೂ ನಾಲ್ಕು ತುಂಡುಗಳಿದ್ದುವು. ಅವನ್ನೂ ಮುಗಿಸಿ ಹೋಗಬೇಕು.

ಇದರ ಮಧ್ಯದಲ್ಲಿ ಒಂದು ಕೇಡು ಸಂಭವಿಸಿತು. ಕೊಡಲಿ ಕಾವಿನಿಂದ ಜಾರಿತು. ಹೆಬ್ಬೆರಳಿನ ತುದಿಗೆ ಬಲವಾದ ಏಟು ಬಿತ್ತು.

"ಅಯ್ಯಮ್ಮಾ—"

ಕುಳಿತುಕೊಂಡಳು, ನೋಡಿದರೆ ಕೆಂಪು ದಾಸವಾಳದ ಹೂವಿನ ಹಾಗೆ ಅಲ್ಲೆಲ್ಲ ರಕ್ತ. ಒಂದು ಸಲ ನೋಡಿದಳು ಅಷ್ಟೆ.

ಅಡಿಗೆ ಮನೆಯಿಂದ ಕುಂಞಾತ್ತೋಲಿನ ಶಬ್ದ:

"ಕಾಲಿಗೆ ಏಟು ಬಿತ್ತಾ. ಕತ್ತಲೆ ಆಗೋ ಹೊತ್ತಿನಲ್ಲಿ ಎಂಥಾದ್ದಾಯ್ತು ಪಾರೂ...

"ಉಹ್ಞು.........ಉಹ್ಞು.........ಏನೂ ಇಲ್ಲ."

ಮೆಲ್ಲ ಮೆಲ್ಲಗೆ ಹೆಜ್ಜೆಯಿರಿಸುತ್ತ ಒರಳು ಕಲ್ಲಿನ ಪಡಸಾಲೆಯ ಹತ್ತಿರ ಹೋಗಿ ಕುಳಿತುಕೊಂಡಳು. ಆಕೆಗೆ ತೀರ ನಿಶ್ಶಕ್ತಿಯಾದ ಹಾಗೆ ತೋರಿತು. ದೃಷ್ಟಿಯೆಲ್ಲ ಹಳದಿಯಾದ ಹಾಗೆ.

"ಏನಾಯ್ತು?"

ಒಂದು ಒರಟು ಧ್ವನಿ ಕೇಳಿಸಿತು. ಪಾರುಕುಟ್ಟಿಗೆ ಕತ್ತೆತ್ತಿ ನೋಡಲಾಗಲಿಲ್ಲ. ಅವನು ಕಾಲಿಗೆ ತಣ್ಣೀರು ತಟ್ಟಿದ. ಕಣ್ಣು ತೆರೆದು ನೋಡಿದಾಗ ತನ್ನ ಎರಡು ಕಾಲುಗಳೂ ಕಪ್ಪನೆಯ ಒರಟು ಕೈಗಳಲ್ಲಿದ್ದುವು. ಬಟ್ಟೆಯ ಚೂರನ್ನು ಬಲವಾಗಿ ಸುತ್ತಿ ಕಟ್ಟಿದ ಮೇಲೆ ಆತ ಹೇಳಿದ:

"ಚಿಂತೆಯಿಲ್ಲ. ಅಪಾಯವೇನೂ ಆಗಲಿಲ್ಲ."

ಬಾಗಿಲಿನಿಂದ ಆಚೆಗೆ ಹೋಗಿ ಕುಂಞಾತ್ತೋಲು ಹೇಳಿದಳು:

"ಸರಿಯಾಗಿ ನೋಡಿ ಕೆಲಸ ಮಾಡದೆ ಹೋದರೆ ಯಾರೇನು ಮಾಡೋದಕ್ಕಾಗುತ್ತೆ?"

"ಅವರು ಹೇಳೋದನ್ನು ಕೇಳಿದರೆ ಬೇಕು ಅಂತ ಕಾಲಿನ ಮೇಲೆ ಕೊಡಲಿ ಹಾಕಿಕೊಂಡದ್ದು ಅನ್ನೋಹಾಗಿದೆ."

ಶಂಕರನ್ ನಾಯರ್ ತನ್ನಷ್ಟಕ್ಕೆ ತಾನೇ ಹೇಳಿಕೊಂಡ.

"ಹ್ಞುಂ, ಇದು ಯಾವುದನ್ನೂ ಮಾಡದೇ ಇರುವವರು ಮಾಡುವಾಗ ಹಾಗೇ ಆಗಬಹುದು."

ಜಾರಿಬಿದ್ದಿದ್ದ ಕೊಡಲಿಯನ್ನು ಕೈಗೆತ್ತಿಕೊಂಡು ಗಟ್ಟಿಯಾದ ಕಲ್ಲಿನಿಂದ ಕಾವನ್ನು ಕುಟ್ಟಿ ಸರಿ ಮಾಡಿ ಜಗಲಿಯ ಮೇಲಿಟ್ಟು ಆತ ಏನೂ ಆಗಿಲ್ಲವೋ ಎಂಬಂತೆ ಪಡಸಾಲೆಯ ಕಡೆಗೆ ನಡೆದ.

ಪಾರುಕುಟ್ಟಿ ಎದ್ದು ನಿಂತಳು. ಬಟ್ಟೆ ಸುತ್ತಿದ್ದ ಕಾಲು ಬೆರಳನ್ನು ನೆಲದ ಮೇಲಿಟ್ಟಾಗ ತುಂಬ ನೋಯುತ್ತಿತ್ತು. ನೊಂದರೂ ಚಿಂತೆಯಿಲ್ಲ. ಮೊದಲು ತುಂಬ— ಹೆದರಿಕೊಂಡಿದ್ದಳು. ಹೊರಗೆ ಹರಡಿಕೊಂಡು ಬಿದ್ದಿದ್ದ ಸೌದೆಯ ತುಂಡುಗಳನ್ನು ಒಂದೊಂದಾಗಿ ಎತ್ತಿ ತೋಳಿನಲ್ಲಿಟ್ಟುಕೊಂಡು ಬಂದು ಅಡಿಗೆ ಮನೆಯ ಬಾಗಿಲಿನ ಹತ್ತಿರ ಇಟ್ಟಳು. ಸೌದೆ ಸೀಳುಗಳನ್ನು ತಂದು ಒರಳು ಕಲ್ಲಿನ ಹಜಾರದಲ್ಲಿ ಇರಿಸಿದಳು.

ಹೊರಗೆ ಜಗಲಿಯ ಮೇಲಿದ್ದ ಅರೆಯುವ ಕಲ್ಲನ್ನು ಹಿಡಿದುಕೊಂಡು ಸ್ವಲ್ಪ ಹೊತ್ತು ನಿಂತಳು. ಅವಳ ಮನಸ್ಸಿನಲ್ಲಾದ ಗಾಬರಿ ಇನ್ನೂ ಬಿಟ್ಟು ಹೋಗಿರಲಿಲ್ಲ. ಬೆರಳಿಗಲ್ಲದೆ ಸ್ವಲ್ಪ ಮೇಲೆ ಏಟು ಬಿದ್ದಿದ್ದರೋ? ಕಾಲು ಹೋಗಿದ್ದ ಹಾಗೆಯೇ.

ಕೆಲಸ ಮಾಡಲಾಗದೆ ಬಿದ್ದುಕೊಂಡಿರಬೇಕಾಗಿದ್ದ ಸ್ಥಿತಿಯನ್ನು ಪಾರುಕುಟ್ಟಿಗೆ ಊಹಿಸಲೂ ಸಾಧ್ಯವಿರಲಿಲ್ಲ. ಅಪ್ಪುಣ್ಣಿ ತನ್ನ ಕಾಲ ಮೇಲೆ ತಾನು ನಿಂತುಕೊಳ್ಳುವ ಹಾಗಾಗುವ ವರೆಗೆ ಅಂಥಾದ್ದೇನೂ ಆಗದಿರಲಿ ಎಂದು ಅವಳು ದಿನನಿತ್ಯ ಪ್ರಾರ್ಥಿಸುವುದು.

"ಕುಂಞಾತ್ತೋಲೂ"

ಕರೆದದ್ದು ಕುಂಞಾತ್ತೋಲಿಗೆ ಕೇಳಿಸಿದಂತೆ ತೋರಲಿಲ್ಲ.

ಸ್ನಾನಘಟ್ಟದ ಮೇಲೆ, ಅಡಕೆ ಮರಗಳ ಮಧ್ಯೆ ಹೂಬಿಟ್ಟ ಕರವೀರ ಮರಗಳಂತೆ ಪಶ್ಚಿಮ ದಿಕ್ಕಿನಲ್ಲಿ ಒಂದುಗೆರೆ ಕಾಣಿಸುತ್ತಿತ್ತು.

ದೂರದ ಎತ್ತರದ ಜಮೀನಿನಲ್ಲಿ ಮರಗಳ ಸಮೂಹದ ಕಡೆಗೆ ನೋಡಿದಾಗ, ಕತ್ತಲೆ ವ್ಯಾಪಿಸುತ್ತಿದೆ ಎನ್ನಿಸಿತು. ನಂಬೂದಿರಿ ಮನೆಗಳ ಹಿತ್ತಿಲಿನಲ್ಲಿ ಹಗಲೂ ರಾತ್ರಿಯಿದ್ದಂತೆ. ಮಧ್ಯಾಹ್ನದ ಸೂರ್ಯನ ಬಿಸಿಲು ಕೂಡ ಒಳಗೆ ಬರದಂತೆ ಅಡಕೆಯ ಮರಗಳು, ಬಾಳೆ ಮರಗಳು ಒತ್ತೊತ್ತಾಗಿ ಬೆಳೆದು ನಿಂತಿವೆ.

"ಕುಂಞಾತ್ತೋಲೂ......"

"ನಿಲ್ಲು......ನಿಲ್ಲು......ಬಂದೆ"

ನಂಬೂದಿರಿಗಳ ಮನೆಯ ಬಡಗು ಭಾಗದಲ್ಲಿ ಇದೇ ರೀತಿ ಕಾಯ್ದು ಕಾಯ್ದು ಸಾಕಾಗುವುದು ತನ್ನ ಹಣೆಯಲ್ಲಿ ಬರೆದಿದೆ ಎನ್ನಿಸಿತು.

ತನ್ನ ತೌರು ಮನೆಯಲ್ಲಿದ್ದ ಕಾಲದಲ್ಲಿ, ಸಾಯಂಕಾಲದಲ್ಲಿ, ಕೈಕಾಲು ತೊಳೆದುಕೊಂಡು ಬಂದು ದೀಪ ಹಚ್ಚಿಡಬೇಕು. ನಾಗಮಂಟಪದಲ್ಲಿ, ಪಡಸಾಲೆಯಲ್ಲಿ ನಡುಮನೆಯ ನಾಲ್ಕು ಕಡೆಗಳಲ್ಲಿ, ಅಂಗಳದ ನಡುಕಲ್ಲಿನ ಮೇಲೆ. ದೀಪ ಹಚ್ಚಿಡಬೇಕು. ತುಪ್ಪದ ಬತ್ತಿ ಹಚ್ಚಿ ಸಣ್ಣ ದೀಪಗಳನ್ನು ಮಹಡಿಯ ಹತ್ತಿರ, ಪಡಸಾಲೆಯ ಮೆಟ್ಟಿಲಿನಿಂದ, ಒಳಗಡೆಗೆ ಇಡಬೇಕು, ಅಲ್ಲಿಗೆ ಅವಳ ಕೆಲಸ ಮುಗಿಯಿತು.

ಸಾಯಂಕಾಲದಲ್ಲಿ ಹುಡುಗರೆಲ್ಲ ಕುಳಿತು ಭಜನೆ ಮಾಡುವುದೂ, ನಡು ಮನೆಯ ಪಡಸಾಲೆಯಲ್ಲಿ ಕಂಬವನ್ನು ಒರಗಿಕೊಂಡು ಪಶ್ಚಿಮ ದಿಕ್ಕಿನ ಆಕಾಶವನ್ನು ನೋಡುತ್ತ, ತಲೆಗೂದಲನ್ನು ಬಿಡಿಸುತ್ತಾ ತಾನು ಕುಳಿತುಕೊಳ್ಳುತ್ತಿದ್ದದ್ದು.

ಆ ಕಾಲ ತುಂಬ, ತುಂಬ ಹಿಂದಕ್ಕಾಯ್ತು. ಗತಿಸಿ ಹೋದ ಆ ದಿನಗಳನ್ನು ಕುರಿತು ನೆನಪು ಮಾಡಿಕೊಳ್ಳಬಾರದು ಎಂದು ಅವಳು ನಿರ್ಧರಿಸಿದ್ದಾಳೆ.

"ಪಾರೂ"

ಕುಂಞಾತ್ತೋಲು ಕರೆದಳು.

ಬಾಗಿಲಿನ ಮೆಟ್ಟಿಲಿನಲ್ಲಿ, ದುಂಡು ಮೊರದಲ್ಲಿ ಐದು ಪಾವು ಅಕ್ಕಿ ಇಟ್ಟಿತ್ತು. ಒರಳು ಕಲ್ಲಿನ ಪಡಸಾಲೆಯಿಂದ ಚಿಕ್ಕ ಓಲೆ ಚೀಲವನ್ನು ತಂದು ಅದಕ್ಕೆ ಅಕ್ಕಿಯನ್ನು ಸುರಿದುಕೊಂಡು, ಮುಚ್ಚಿದ್ದ ಅಡಿಗೆ ಮನೆಯ ಬಾಗಿಲಿನ ಕಡೆಗೆ ನೋಡಿ,

"ನಾನಿನ್ನು ಹೋಗ್ತೀನಿ"—ಎಂದಳು.

"ಹ್ಞೂಂ"

ಅವಳು ಹೊರಟಳು. ಹಿಂದುಗಡೆ ಶಂಕರನ್ ನಾಯರ್ ಇದ್ದಾನೆ ಎನ್ನುವ ವಿಷಯ ನೆನಪಾದಾಗ ಅವಳಿಗೆ ಸ್ವಲ್ಪ ಸಮಾಧಾನವಾದ ಹಾಗಾಯಿತು. ಅವನು ಹೋಗುವುದೂ ಅದೇ ದಾರಿಯಲ್ಲಿ. ಸ್ವಲ್ಪ ದೂರವೇ ಇದ್ದರೂ ಕತ್ತಲೆ ಹೊತ್ತಿನಲ್ಲಿ ಒಂಟಿಯಾಗಿ ಬರಬೇಕಾಗಿ ಬರಲಿಲ್ಲವಲ್ಲ! ಅವಳು ಮುಂದೆ. ಸ್ವಲ್ಪ ಹಿಂದೆ ಆತ. ಆದರೆ ಇಬ್ಬರೂ ಏನನ್ನೂ ಮಾತನಾಡಲಿಲ್ಲ.

ಶಂಕರನ್ ನಾಯರು ಎದುರಿನಲ್ಲಿ ತಲೆಯೆತ್ತಿ ನಿಂತು ಮಾತನಾಡಿದವಳಲ್ಲ. ತೌರು ಮನೆಯಲ್ಲಿದ್ದಾಗಿನಿಂದಲೂ ಶಂಕರನ್ ನಾಯರ್ ಗೊತ್ತು. ಗದ್ದೆಗೆ ಬಾವಿಯಿಂದ ನೀರೆತ್ತುವುದು ಆತನ ಕೆಲಸ. ಆ ಬಾವಿಯಿಂದ ಹೊಲೆಯರೂ ಬಿಲ್ಲವರೂ ನೀರು ಸೇದುವಂತಿಲ್ಲ. ಕಪ್ಪು ಬಣ್ಣದ, ಒರಟು ದೇಹದ ಒಬ್ಬ ವ್ಯಕ್ತಿ. ಅದೇ ರೀತಿ ಧ್ವನಿಯೂ ಒರಟು. ಆಗ ಹೇಗಿದ್ದನೋ ಈಗಲೂ ಹಾಗೆಯೇ ಇದ್ದಾನೆ. ವಯಸ್ಸು ಆತನ ಶರೀರದ ಮೇಲೆ ಯಾವ ಪರಿಣಾಮವನ್ನೂ ಮಾಡಿಲ್ಲವೆಂದು ತೋರುತ್ತದೆ. ಎಷ್ಟೋ ಕಾಲದ ವರೆಗೆ, ಆ ದೊಡ್ಡ ಮನೆಯ ಕೆಲಸದ ಕಾರ್ಯದರ್ಶಿಯಾಗಿದ್ದ. ಅಲ್ಲಿಂದ ಬಿಟ್ಟಮೇಲೆ ನಂಬೂದಿರಿಗಳ ಮನೆಗೆ ಬಂದದ್ದು. ಆತನಿಗೆ 'ಮನೆಯವರು' ಅನ್ನಿಸಿಕೊಂಡವರು ಯಾರೂ ಇಲ್ಲ.

"ಅಪ್ಪುಣ್ಣಿ ಓದೋದಕ್ಕೆ ಹೋಗ್ತಿಲ್ಲವಾ?" ಶಂಕರನ್ ನಾಯರ್ ಕೇಳಿದ.

"ಹೋಗ್ತಿದ್ದಾನೆ."

ಅವಳು ತನ್ನ ಮನೆಯ ಕಡೆಗೆ ತಿರುಗಬೇಕಾಗಿದ್ದ ಸ್ಥಳಕ್ಕೆ ಬಂದಾಗ ಅವನು ಮತ್ತೆ ಕೇಳಿದ: "ಯಾವ ಕ್ಲಾಸಿನಲ್ಲಿ?"

"ಎಂಟರಲ್ಲಿ......ಅವನಿಗಾಗಿ......"

ಅವಳಿಗೆ ಏನನ್ನೋ ಹೇಳಿಕೊಳ್ಳಬೇಕೆನ್ನಿಸಿತು.

"ಏನು?"

"ಅವನು ನಾಳೆ ಸರ್ಪನಾಟ್ಯ ನೋಡೋದಕ್ಕೆ ಹೋಗೋ ಮನೆ......ಅದು ನಮ್ಮ ಕುಟುಂಬದ ಮನೆಯೇ ಆಗಿರಬಹುದು......ಹೇಳಿದರೆ ಕೇಳೋದಿಲ್ಲ. ಏನು ಮಾಡ್ಲಿ?"

"ಹ್ಞೂಂ"

"ಏನೇನು ಆಗ್ತದೋ ದೇವರೇ ಬಲ್ಲ. ಹುಡುಗ ಅಳ್ತಾನೆ. ಮತ್ತಿನ್ನೇನು ಮಾಡ್ಲಿ? ಇವನ್ನೆಲ್ಲ ಕೇಳೋದಕ್ಕಾಗಲೀ ಹೇಳಿಕೊಳ್ಳೋದಕ್ಕಾಗಲೀ ನನಗೆ ಯಾರಿದ್ದಾರೆ?..."

ಆತನ ಹತ್ತಿರ ಅಷ್ಟೆಲ್ಲ ಹೇಳಿಕೊಳ್ಳಬೇಕು ಎಂದು ಕೊಂಡಿರಲಿಲ್ಲ. ಅಪ್ಪುಣ್ಣಿಯ ವಿಚಾರ ಬಂದಾಗ ಅವಳು ಹೇಳಿಕೊಂಡು ಬಿಟ್ಟಳು.

"ಹೋಗೋವರಲ್ಲಿ ತಪ್ಪೇನೂ ಇಲ್ಲ. ಅವನೂ ಆ ಮನೆಯ ಹಕ್ಕುದಾರ ತಾನೇ...

ಕಾಲಿಗೆ ಎರಡು ದಿವಸ ನೀರು ಬೀಳಬಾರದು" ಎಂದು ಹೇಳಿ ಅವನು ಹೊರಟ. ಆ ಕಪ್ಪನೆಯ ದೇಹದ ನೆಳಲು ಕತ್ತಲೆಯಲ್ಲಿ ಒಂದಾಗಿ ಬೆರೆಯಿತು.

ಪಾರುಕುಟ್ಟಿ ಇನ್ನೇನು ಮನೆಯ ಮೆಟ್ಟಿಲು ಹತ್ತಬೇಕು–ಅಷ್ಟರಲ್ಲಿ ಕುಂಡುಂಗಾಲಿಯ ಮೆಟ್ಟಲಿನ ಕಡೆಯಿಂದ ಬರುತ್ತಿದ್ದ ಹೊರಗಿನ ಕೆಲಸದ ಚೀರು ಕೇಳಿದಳು:

"ಪಾರುಕುಟ್ಟಿ ಅಮ್ಮ ಅಲ್ವಾ?"

"ಹೌದು. ಅದ್ಯಾರು ಚೀರೂನಾ?"

"ಆದ್ಯಾರು, ಅಮ್ಮನ ಹತ್ರ ಮಾತಾಡ್ತಿದ್ದೋರು"

ಬಂತು ಕೇಡು ! ಇವಳಿಗೇನಾಗಬೇಕು ಅದನ್ನ ಕಟ್ಟಿಕೊಂಡು !

"ಅದು—ಶಂಕರನ್ ನಾಯರು"

ಮೆಟ್ಟಿಲು ಹತ್ತಿ ಬಂದ ಮೇಲೆ ಪಾರುಕುಟ್ಟಿ ಆಲೋಚಿಸಿದಳು. ಇನ್ನು ಚೀರೂಗೆ ಹೇಳಿಕೊಂಡು ತಿರುಗುವುದಕ್ಕೆ ಒಂದು ವಿಷಯ ಸಿಕ್ಕಿತು. ಹಾಳಾದವಳು !

ಸಣ್ಣ ಸಣ್ಣ ಅಪವಾದಗಳಿಂದ ಹಿಡಿದು, ದೊಡ್ಡ ದೊಡ್ಡ ಕೇಸುಗಳ ವರೆಗೆ ಇದ್ದದ್ದು ಇಲ್ಲದ್ದು ಎಲ್ಲವನ್ನೂ ಎಲ್ಲಾ ಮನೆಗಳಿಗೂ ಮುಟ್ಟಿಸುವ ಚಾಳಿಯ ಹೆಂಗಸು. ಈ ಊರಿನಲ್ಲಿರುವವರಿಬ್ಬರು. ಒಬ್ಬಳು ಚೀರು, ಮತ್ತೊಬ್ಬಳು ಅಮ್ಮಾಳು. ಅಮ್ಮಾಳು ಮುಂದೆ ಚೀರು ಸೋತು ಹೋಗಲೇಬೇಕು.

ಅಪ್ಪುಣ್ಣಿ ಚಿಮಿಣಿ ದೀಪದ ಮುಂದೆ. ಅಂಗಡಿಯಿಂದ ನೀರುಳ್ಳಿ ಮೆಣಸಿನಕಾಯಿ ಕಟ್ಟಿಸಿಕೊಂಡು ಬಂದಿದ್ದ ವಾರ ಪತ್ರಿಕೆಯ ಪುಟವನ್ನು ತುಂಬ ಉತ್ಸಾಹದಿಂದ ಓದುತ್ತ ಕುಳಿತಿದ್ದಾನೆ. ಇತ್ತೀಚೆಗೆ, ನಾಲ್ಕೈದು ದಿನಗಳಿಂದ, ಅವನು ಬಹಳ ಉತ್ಸಾಹದಿಂದ ಇದ್ದಾನೆ—ಸರ್ಪ ನಾಟ್ಯ ನೋಡಲು ಹೋಗುವುದಕ್ಕೆ ಅಡ್ಡಿಯಿಲ್ಲ–ಅಂದಾಗಿನಿಂದ.

ಊಟ ಆದ ಮೇಲೆ ಬಲವಾಗಿ ಗಾಳಿ ಬೀಸತೊಡಗಿತು. ಮಳೆ ಹನಿಗಳೂ ಬೀಳ ತೊಡಗಿದುವು. ಮಳೆ ಬಿದ್ದರೆ ಚಿಂತೆಯಿಲ್ಲ. ಆದರೆ ಗಾಳಿ. ತೋಟದ ಬಾಳೆ ಗಿಡಗಳನ್ನೆಲ್ಲ ಮುರಿದು ಹಾಕುವಂತೆ ಬೀಸುತ್ತಿದೆ—ಎನ್ನಿಸಿತು. ಸೂರು ಕಟ್ಟಿಗೆ ಕಟ್ಟಿದ್ದ ಓಲೆಗರಿ ತಡಿಕೆ ಗಾಳಿಗೆ ತೂಗಾಡುತ್ತ, ಗೋಡೆಗೆ ಬಡಿದು ಶಬ್ದ ಮಾಡುತ್ತಿತ್ತು.

ಅಂದು ಮಲಗಿದಾಗ ಎಂದಿನಂತೆ ಬೇಗ ನಿದ್ದೆ ಬರಲಿಲ್ಲ. ಏಟು ತಾಗಿದ ಹೆಪ್ಪೆರಳು ಚುಳ್ ಚುಳ್' ಎಂದು ನೋಯುತ್ತಿತ್ತು.

ಹೊರಗೆ ತುಂತುರು ಮಳೆ ಸ್ವಲ್ಪ ಸ್ವಲ್ಪವಾಗಿ ಹೆಚ್ಚುತ್ತಾ ಇತ್ತು. ಭಾರವಾದ ಹನಿ ಗಳು ಓಲೆಯ ತಡಿಕೆಯ ಮೇಲೆ ಬಿದ್ದು ಶಬ್ದ ಮಾಡುತ್ತಿದ್ದುವು. ಮಳೆ ಬೀಳುವ ಶಬ್ದ ವನ್ನು ಕೇಳುತ್ತಾ ಪಾರುಕುಟ್ಟಿ ಮಲಗಿದ್ದಳು.

ಅಪ್ಪುಣ್ಣಿಗೆ ನಿದ್ದೆ ಬಂದಿತ್ತು. ಎರಡು ಕೈಗಳನ್ನೂ ಎದೆಯ ಮೇಲಿಟ್ಟುಕೊಂಡು, ಕತ್ತನ್ನು ಪಕ್ಕಕ್ಕೆ ತಿರುಗಿಸಿಕೊಂಡು ಮಲಗಿದ್ದ ಅವನನ್ನು ಒಂದು ಸಲ ನೋಡಿದಳು.

ಕೈಗೆ ತಾಗದ ಹಾಗೆ ಕೈ ಹಣತೆಯನ್ನು ದೂರದಲ್ಲಿರಿಸಿ ಆರಿಸಿವಳು.

......ಅಪ್ಪುಣ್ಣಿಗೆ ಮೂರು ವರ್ಷ ಆಗಿದ್ದಾಗ ತೀರಿಕೊಂಡದ್ದು......

ಸಾಯಂಕಾಲ ಬೆಂಡೆಗೂ ಬದನಿಗೂ ಪಾತಿ ಮಾಡಿ ನೀರು ಹುಯ್ದು ಲುಂಗಿ ಬದಲಾಯಿಸಿಕೊಂಡು. ಏನೇನೋ ತಮಾಷೆ ಮಾಡಿ, ಜೋರಾಗಿ ನಕ್ಕು ಹೋದದ್ದು... ಮತ್ತೆ ಹಿಂದಿರುಗಿ ಬಂದದ್ದು......

ಮೊತ್ತ ಮೊದಲಾಗಿ ಆ ಮನೆಗೆ ಬಂದಾಗ ಅಪ್ಪುಣ್ಣಿಯು ಏಳು ತಿಂಗಳ ಗರ್ಭಿಣಿ. ಆಗ ಛಾವಣಿಯ ಮೇಲೆ ಹೊಸರಿಗೆ ಮಾತ್ರ ಹುಲ್ಲು ಹೊದಿಸಿದ್ದದ್ದು. ಮೀನ ಮಾಸ ಅದು. ಮೇಷ ಮಾಸ ಬರುವಷ್ಟರಲ್ಲಿ ತಡಿಕೆ ಕಟ್ಟಿ ತೂಗು ಹಾಕಬೇಕು—ಎಂದು ಹೇಳಿದ್ದದ್ದು. ರಾತ್ರಿಯಲ್ಲಿ ಇದ್ದಕ್ಕಿದ್ದ ಹಾಗೆ ಅಡ್ಡ ಮಳೆ ಬಂತು. ಮೀನ ಮಾಸದಲ್ಲಿ ಅಂಥ ಮಳೆ ಎಂದೂ ಬಂದಿರಲಿಲ್ಲ. ಮಳೆ ರಭಸವಾಗಿ ಬೀಳುತ್ತಿತ್ತು. ಮಳೆ ನೀರು ಮಾಡಿನ ಸಂದು ಗಳಲ್ಲೆಲ್ಲ ಸೋರ ತೊಡಗಿತು. ಚಾಪೆ ಒದ್ದೆಯಾಯಿತು. ಮನೆಯೊಳಗೆಲ್ಲ ನೀರು.

ಒಳಗೆ ನೀರು ಬೀಳದೆ ಇದ್ದ ಒಂದು ಮೂಲೆಯಲ್ಲಿ ಹಣತೆ ಹಚ್ಚಿಟ್ಟು ಅವರು ಹತ್ತಿರ ಹತ್ತಿರ ಕುಳಿತಿದ್ದರು. ಆಕೆಯ ಮುಖಕ್ಕೆದುರಾಗಿ ಕುಳಿತು ಅವರು ಆಕೆಯ ಕಣ್ಣುಗಳನ್ನೇ ದಿಟ್ಟಿಸಿ ನೋಡುತ್ತಿದ್ದರು.

"ಪಾರೂಟ್ಟೀ" ಒಬ್ಬರೇ ಒಬ್ಬರು ಹಾಗೆ ಕರೆಯುತ್ತಿದ್ದದ್ದು—"ಏನು ಯೋಚನೆ ಮಾಡ್ತಿದ್ದಿ?"

"ಏನೂ ಇಲ್ಲ."

"ಕಷ್ಟಕ್ಕೊಳಗಾದೆ ಅನ್ನಿಸುತ್ತಾ?"

ಯಾಕೆ ಎಂದು ಪ್ರಶ್ನಿಸುವ ರೀತಿಯಲ್ಲಿ ಅವಳು ತಲೆಯೆತ್ತಿ ನೋಡಿದಳು.

"ಪಾರೂಟ್ಟೀ ಇದನ್ನೆಲ್ಲ ಅನುಭವಿಸಿದವಳಲ್ಲ ನನಗೆ ಗೊತ್ತು."

"ನನ್ನ ತಲೇಲಿ ಅದೊಂದು ಯೋಚನೆಯೂ ಇಲ್ಲ." ವಾಸ್ತವವಾಗಿ ಅವಳು ಜೀವನದ ಕಷ್ಟ ಕಾರ್ಪಣ್ಯಗಳನ್ನು ಕಾಣಲು ತೊಡಗಿ ತುಂಬ ದಿನಗಳಾಗಿರಲಿಲ್ಲ.

ಊರಿನ ಜನ ಅವಳನ್ನು ಕುರಿತು ಆಡಿಕೊಳ್ಳುತ್ತಿದ್ದುದು ಕಿವಿಗೆ ಬಿದ್ದಿತ್ತು......

ಮನೆಯವರು ಸೂತಕ ತೆಗೆದರು. ಸೂತಕ ಸ್ನಾನ ಮಾಡುವುದು ಸತ್ತಾಗ. ಒಬ್ಬ ಮಗಳು ಸತ್ತಳು ಒಬ್ಬ ಮೊಮ್ಮಗಳು ಸತ್ತಳು—ಅಕ್ಕಂದಿರೂ ಸೂತಕಸ್ನಾನ ಮಾಡಿರ ಬೇಕು! ಅಲ್ಲಿಗೆ ಒಬ್ಬಳು ತಂಗಿಯೂ ಸತ್ತ ಹಾಗಾಯ್ತು.

ಆ ಕೈ ಹಿಡಿಯುವುದಕ್ಕೆ ಮನಸ್ಸು ಮಾಡಿದ್ದು ತನ್ನ ಹದಿನೇಳನೆಯ ವಯಸ್ಸಿನಲ್ಲಿ. ಅದನ್ನು ಶ್ರೀಮಾರ್ಗಸಿನಿದ್ದನ್ನು ಜ್ಞಾಪಿಸಿಕೊಂಡಾಗ ಈಗಲೂ ಆಶ್ಚರ್ಯವುಂಟಾಗುತ್ತದೆ.

ಅರುವತ್ತು ನಾಲ್ಕು ಮಂದಿ ಜೀವಿಸಿದ ಸ್ಥಳವೆಂದು ತಾಯಿ ಹೇಳುವ ಹಳೆಯ ಚೌಕಟ್ಟಿನ ಬಡಗು ಮನೆ ಕೋಣೆಯಲ್ಲಿ ಅವಳು ಜನಿಸಿದ್ದು. ಆ ಮನೆಯಲ್ಲೇ ಬೆಳೆದಳು.

ಬತ್ತಾಯದ ಮನೆಯ ಕೆಳಗಿನ ಕೋಣೆಯಲ್ಲಿ ಉಳಿದ ಮಕ್ಕಳೊಂದಿಗೆ ಕೂರಿಸಿಕೊಂಡು ಉಪಾಧ್ಯಾಯರು ಅಕ್ಷರಾಭ್ಯಾಸ ಮಾಡಿಸಿದ್ದರು. ಮೇಲು ಬಯಲಿನ ಹುಳಿ ಮಾವಿನ ಮರದ ಹತ್ತಿರ ನಿಂತರೆ ಕಾಣಿಸುತ್ತಿದ್ದಷ್ಟು ಸ್ಥಳವೇ ಅವಳು ನೋಡಿದ್ದ ಪ್ರಪಂಚ. ಅದರಿಂದಾಚೆಗೆ ನೋಡಿಲ್ಲ.

ಬೇಸಗೆ ಬಂದರೆ ಕೊಳದ ನೀರೆಲ್ಲ ಕೆಸರಾಗುತ್ತಿತ್ತು. ಆಗ ಹೊಳೆಗೆ ಹೋಗಿ ಸ್ನಾನ ಮಾಡುವುದಕ್ಕೆ ಮನೆಯವರ ಸಮ್ಮತಿಯಿರುತ್ತಿತ್ತು. ಒಂಟಿಯಾಗಿ ಹೋಗುವಂತಿಲ್ಲ. ದೊಡ್ಡಕ್ಕನೋ ಚಿಕ್ಕಕ್ಕನೋ ಜೊತೆಯಲ್ಲಿರುತ್ತಿದ್ದರು. ಇಲ್ಲದಿದ್ದರೆ ಬಡಗು ಮನೆಯ ಕುಂಞಿಕುಟ್ಟಿ. ಅವಳಿಗಿಂತ ನಾಲ್ಕು ತಿಂಗಳು ಮಾತ್ರ ದೊಡ್ಡವಳು.

ಶಬ್ದ ಮಾಡದೆ ಮೆಟ್ಟಿಲುಗಳನ್ನಿಳಿಯಬೇಕು. ಮೆಟ್ಟಿಲಿಳಿದು ಮೂರು ಗದ್ದೆಗಳನ್ನು ದಾಟಿದರೆ ರಸ್ತೆ. ರಸ್ತೆ ಇರುವುದೂ ಹೊಳೆಯ ಪಕ್ಕದಲ್ಲೇ. ಸ್ನಾನ ಘಟ್ಟದ ಮಾರ್ಗದಲ್ಲಿಯೇ ಹರಕೆ ಒಪ್ಪಿಸುವ ಜಾಗ. ಅಲ್ಲಿ ಹೊಳೆಗೆ ಇಳಿಯಲು ಮೆಟ್ಟಿಲುಗಳಿವೆ. ಬಡಗು ಮನೆಯ ಹೆಣ್ಣು ಮಕ್ಕಳು ಸ್ನಾನ ಮಾಡುವುದಕ್ಕೆ ಬರತೊಡಗಿದಾಗ ಆ ಕಡವಿನಿಂದ ಇತರ ಜನರು ದೂರ ಸರಿಯುತ್ತಿದ್ದರು. ದೊಡ್ಡ ಮಾವನ ಪ್ರಭಾವ ಹಾಗಿತ್ತು. ಆ ಪ್ರಭಾವ ಅವರು ತೀರಿಕೊಂಡ ಮೇಲೂ ಉಳಿದಿತ್ತು.

ಸ್ನಾನ ಮುಗಿಸಿ ಬರುವಾಗ ಮನೆಯ ಪಡಸಾಲೆಯ ಮೂಲಕವೇ ಒಳಕ್ಕೆ ಬರಬೇಕು. ಕೆಲವು ಸಲ ಮಾವ ಪಡಸಾಲೆಯಲ್ಲಿ ಅತ್ತಿತ್ತ ಅಡ್ಡಾಡುತ್ತಿದ್ದರು. ಪಾದಗಳನ್ನು ಮಾತ್ರ ನೋಡುತ್ತ ಮೆಲ್ಲಗೆ ಒಳಕ್ಕೆ ಹೋಗಬೇಕು."

"ನೆಲಕ್ಕೆ ಕೂಡ ಗೊತ್ತಾಗದ ರೀತಿಯಲ್ಲಿ ನಡೆಯಬೇಕು" ಎಂದು ಅಮ್ಮ ಹೇಳುತ್ತಿದ್ದದ್ದು.

ಸ್ನಾನಕ್ಕೆ ಹೋಗಿದ್ದ ಒಂದು ದಿನ ಮಧ್ಯಾಹ್ನವಿರಬೇಕು. ಮೊತ್ತಮೊದಲಾಗಿ ಕಂಡದ್ದು. ಹರಕೆ ಒಪ್ಪಿಸುವ ಜಾಗದ ಹತ್ತಿರ, ಕಲ್ಲು ಕಟ್ಟೆಯ ಮೇಲೆ, ಪೇಟದ ಅಂಚು ಮೇಲೆದ್ದು ನಿಲ್ಲುವಂತೆ ಟವಲ್‌ಅನ್ನು ತಲೆಗೆ ಕಟ್ಟಿಕೊಂಡು ಒಬ್ಬ ಮನುಷ್ಯ ಕುಳಿತಿದ್ದ. ಕೆಳಗೆ ಇಬ್ಬರು ನಿಂತುಕೊಂಡು ಮಾತನಾಡುತ್ತಿದ್ದರು. ಹೆಚ್ಚು ತಲೆ ಎತ್ತದೆ ಒಂದು ಸಲ ಆ ಕಡೆಗೆ ನೋಡಿದಳು. ವೀಳ್ಯ ಹಾಕಿ ಕೆಂಪಾಗಿದ್ದ ತುಟಿಗಳು. ಕಿವಿಯಲ್ಲಿ ಕೆಂಪು ಹರಳಿನ ಕಡಕುಗಳು. ದೊಡ್ಡಕ್ಕನ ಕೋಣೆಯಲ್ಲಿ ತೂಗು ಹಾಕಿದ್ದ ರಾಜನ ಚಿತ್ರ ನೆನಪಾಗಿತ್ತು. ಏನೋ ಮಾತನಾಡುತ್ತ ಆತ ನಕ್ಕಾಗ ಆ ನಗುವಿನ ಅಲೆಗಳು ನದೀತೀರದಲ್ಲಿ ಪ್ರತಿಧ್ವನಿಸುತ್ತಿವೆಯೋ ಎನ್ನಿಸಿತು. ಕುಂಞಿಕುಟ್ಟಿಯೂ ಅವಳೂ ಕಲ್ಲು ಕಟ್ಟೆಯ ಹತ್ತಿರಕ್ಕೆ ಬಂದಾಗ ಅವರ ಸಂಭಾಷಣೆ ನಿಂತಿತು. ಆ ಕಣ್ಣುಗಳು ತನ್ನ ದೇಹದ ಮೇಲೆಲ್ಲ ಸಂಚರಿಸುತ್ತಿವೆಯೋ ಎನ್ನಿಸಿತು. ಬೇಗ ಅಲ್ಲಿಂದ ಹೊರಟು ಹೋಗಿ ಬಿಡಬೇಕು ಎನ್ನಿಸಿತಾದರೂ ಕಾಲುಗಳು ಮುಂದೆ ಹೋದರಲ್ಲವೆ? ಹೊಳೆ ಕಡವಿನ ಮೆಟ್ಟಿಲಿಳಿಯುವ ಮೊದಲು

ಕುಂಞಾಕುಟ್ಟಿಗೆ ತಿಳಿಯದಂತೆ ಒಂದು ಸಲ ತಿರುಗಿ ನೋಡಿದಾಗ ಆತ ಕೆಳಗಿಳಿದು ನಿಂತಿದ್ದಾನೆ ! ಎತ್ತರವಾದ ತೆಂಗಿನ ಮರದ ಹಾಗೆ—ನಿಮಿರಿ ನಿಂತಿದ್ದ ಆ ಉದ್ದನೆಯ ಮನುಷ್ಯನ ಕಣ್ಣುಗಳು ತನ್ನನ್ನೇ ಹಿಂಬಾಲಿಸುತ್ತಿವೆ ಎನ್ನಿಸಿತು.

ಸ್ನಾನ ಮಾಡುತ್ತಿದ್ದಾಗ ಕುತೂಹಲವನ್ನು ತಡೆಯಲಾರದೆ ಸುಮ್ಮನೆ ಕೇಳಿದಳು:

"ಅದ್ಯಾರು ಕುಂಞಾಕುಟ್ಟಿ?"

"ಯಾರು?"

"ಆ ಕಲ್ಲು ಕಟ್ಟೆ ಹತ್ತಿರ?"

"ಅವರು ಕೋಂದುಣ್ಣಿ ನಾಯರಲ್ಲವಾ? ಪಗಡೆ ಆಟಗಾರ ಕೋಂದುಣ್ಣಿ ನಾಯರು"

ಸ್ನಾನ ಮಾಡುವುದಕ್ಕೆ ಬರುವ ಅನೇಕ ದಿವಸಗಳಲ್ಲಿಯೂ ಅವಳು ಆ ಕಲ್ಲು ಕಟ್ಟೆಯ ಮೇಲೆ ಆ ರಾಜನನ್ನು ಕಂಡಿದ್ದಳು.

ಒಂದು ದಿನ ಒಂಟಿಯಾಗಿಯೇ ಹೊಳೆಗೆ ಹೊರಟಿದ್ದಳು. ಅದನ್ನು ಕಂಡು ಅಮ್ಮ ಹೇಳಿದರು:

"ಒಬ್ಬಳೇ ಹೊರಟೆಯಲ್ಲ. ಹೊಳೆಗೆ ಹೋಗಬೇಡ. ಕೊಳದಲ್ಲೇ ಸ್ನಾನ ಮಾಡಿಬಾ."

"ಅಲ್ಲಿ ಬಟ್ಟೆಯೆಲ್ಲ ಕೆಸರಾಗ್ತತೆ ಕಣಮ್ಮ" ಎಂದು ಅಮ್ಮನನ್ನು ಸಮಾಧಾನಪಡಿಸಿ ಹೊರಟಳು.

ಬಯಲನ್ನು ದಾಟಿ ಕಲ್ಲು ಕಟ್ಟೆಯ ಹತ್ತಿರ ಬಂದಾಗ ಕತ್ತು ತನ್ನಷ್ಟಕ್ಕೆ ತಾನೇ ಬಾಗಿತ್ತು. ಕಾಲುಗಳು ನಡುಗುತ್ತಿವೆಯೋ ಅನ್ನಿಸುತ್ತಿತ್ತು. ರಸ್ತೆಗೆ ಬರುವವರೆಗೆ ನೆಲವನ್ನೇ ನೋಡಿಕೊಂಡು ಬರುತ್ತಿದ್ದವಳು ಒಂದು ಸಲ ಕತ್ತೆತ್ತಿ ನೋಡಿದಳು. ಕಲ್ಲು ಕಟ್ಟೆಯ ಮೇಲೆ ಯಾರೂ ಇಲ್ಲ, ಬೇಗ ಬೇಗ ಹೆಜ್ಜೆ ಹಾಕಿ ಹರಕೆ ಒಪ್ಪಿಸುವ ಜಾಗದ ಹತ್ತಿರಕ್ಕೆ ಬಂದಾಗ ಫಟ್ಟನೆ ಕಣ್ಣುಗಳು ಆಲದ ಬೇರಿನ ಮೇಲೆ ಕುಳಿತಿದ್ದ ಆತನ ಮುಖವನ್ನು ಕಂಡುವು. ಬೇಗ ಬೇಗ ಹೆಜ್ಜೆಯಿರಿಸಿದಳು.

"ಒಂಟಿಯಾಗಿ ಹೊರಟದ್ದು?"

—ತನ್ನನ್ನೇ ಕೇಳಿದ್ದು. ಉತ್ತರಿಸಿದ ನೆನಪು. ತಾನು ಹೇಳಿದ್ದು ಕೇಳಿಸಿತೋ ಇಲ್ಲವೋ ತಿಳಿಯದು.

ಮೂರನೆಯ ದಿನವೂ ನೋಡಿದಳು. ಆಗ ಆತ ಕರೆದದ್ದು. "ಪಾರೂಟ್ಟೀ" ಎಂದು.

ನಾಚಿಕೆಯಿಂದ ಅವಳ ಮುಖ ಕೆಂಪಾಯಿತು. ಹೃದಯದ ಬಡಿತ ಹೆಚ್ಚಾಯಿತು. ಬೇಗ ಬೇಗ ಕೆಳಗಿಳಿಯುತ್ತಿದ್ದಾಗ ಆತ ನಗುತ್ತಾ ಹೇಳಿದ:

"ನಾನೂ ಈ ಊರಿನವನೇ. ನನ್ನ ಹೆಸರು ಕೋಂದುಣ್ಣಿ."

ಆತ ತನ್ನನ್ನು ತಾನೇ ಪರಿಚಯ ಮಾಡಿಕೊಂಡದ್ದನ್ನು ಕೇಳಿದಾಗ ಅವಳಿಗೆ ಒಳಗೊಳಗೆ ನಗು ಬರುವಂತಾಯಿತು. ಅಲ್ಲದೆ ಅವನಲ್ಲಿ ಸಲಿಗೆಯುಂಟಾಯಿತು.

ಅವಳು ಒಂದು ನಿಮಿಷ ಸಿಂತಳು.

"ಗೊತ್ತು."

"ಗೊತ್ತಾ? ಹಾಗಿದ್ದರೆ ಗೊತ್ತಿಲ್ಲದವಳ ಹಾಗೆ ಯಾಕೆ ಹೋಗ್ತೀಯೋ"

"ಪಂಚಾಯಿತಿ ದಾರಿಯಲ್ಲಲ್ಲವಲ್ಲ"

ಹಾಗೆ ಆ ಪರಿಚಯ ಪ್ರಾರಂಭವಾದದ್ದು. ಮುತ್ತಜ್ಜಿ ತೀರಿಕೊಂಡಾಗ ಸಮಾಧಿ ಮಾಡುವುದಕ್ಕೂ, ಹದಿನಾರನೆಯ ದಿನ ಕ್ರಮಿಸುವುದಕ್ಕೂ ಬಂದಿದ್ದ ಊರಿನ ಜನರ ಪೈಕಿ ಕೋಂದುಣ್ಣಿ ನಾಯರೂ ಒಬ್ಬಾತ. ಮಹಡಿಯ ಮೇಲೆ ಕಂಬಿಗಳ ಮೂಲಕ ನೋಡಿದಾಗ ಕೈಯಾಲೆಯ ಹತ್ತಿರ ನಿಂತು ಆತ ಕೆಲಸ ಮಾಡಿಸುವುದೂ ಮಾಡುವುದೂ ಕಾಣಿಸುತ್ತಿತ್ತು.

ಕೊಡಿ ಗುಡ್ಡದ ಬನದಲ್ಲಿ ಹರಕೆ ಒಪ್ಪಿಸುವ ಬಲಿ ಭೂಮಿಯ ಹತ್ತಿರ, ತಳಿಗೆ ಒಪ್ಪಿಸುವ ಕಡೆ ಆತ ಇದ್ದಾನೆ. ವಾಳಾವಿಲ್ ದೇವಸ್ಥಾನದಿಂದ ತಳಿಗೆ ತೆಗೆದುಕೊಂಡು ಬಂದು ಇಡಬೇಕಾದದ್ದು, ಬಲಿಭೂಮಿ ಅಲ್ಲಿಂದ ಸ್ವಲ್ಪ ದೂರದಲ್ಲಿದೆ. ಊರಿಗೆ ಸಿಡುಬು ಹರಡಿದ ಕಾಲದಲ್ಲಿ ಹರಕೆ ಮಾಡಿಕೊಂಡ ನಂತರ ಮೊದಲು ನಡೆಯುತ್ತಿದ್ದ ಪೂಜೆ ಅದು. ಎಲ್ಲಾ ನಾಯರ್ ಮನೆಗಳಿಂದಲೂ ತಳಿಗೆ ಬರಬೇಕು. ಕಳದ ತಳಿಗೆ ಮುಂದೆ. ಅದಕ್ಕೆ ಸ್ವಲ್ಪ ಹತ್ತಿರದಲ್ಲಿ ದೊಡ್ಡ ಮನೆಯದು. ವಡಕ್ಕೇಪಾಟ್ ಮನೆಯದು ಮೂರನೆಯದು.

ಆ ವರ್ಷ ಗಲಭೆ ಉಂಟಾಗಬಹುದೆಂದು ಜನರೆಲ್ಲರೂ ಊಹಿಸಿದ್ದರು. ಮುತ್ತಾಳಿ ಗುಡ್ಡದಿಂದ ಶಿವರಾತ್ರಿಯ ಸಮಯದಲ್ಲಿ ದುರ್ಗೆಯ ಮೆರವಣಿಗೆಯನ್ನು ಮಸೀದಿಯ ಮುಂಭಾಗದ ರೋಡಿನಲ್ಲಿ ವಾದ್ಯಗಳ ಸಮೇತ ನಡೆಸಿಕೊಂಡು ಬರುತ್ತಿದ್ದಾಗ ಮಾಪಿಳ್ಳೆಗಳು ಬಂದು ತಡೆಗಟ್ಟಿದರು. ಹೊಡೆದಾಟ ನಡೆಯಿತು. ಅನೇಕರಿಗೆ ನೋವಾಗಿತ್ತು.

"ಮಾಪಿಳ್ಳೆಗಳು ತೊಂದರೆ ಮಾಡ್ತಾರೋ ಏನೋ." ಎಂದು ಹಿರಿಯರು ಹೇಳಿದರು. ಎಲ್ಲ ನಾಯರ್ ಕುಟುಂಬದ ಮನೆಗಳಿಂದಲೂ ಯೌವನಕ್ಕೆ ಕಾಲಿರಿಸಿದ ಹೆಣ್ಣು ಮಕ್ಕಳು ತಳಿಗೆ ತೆಗೆದುಕೊಂಡು ಹೊರಡುತ್ತಾರೆ. ತಳಿಗೆ ಹಿಡಿದುಕೊಂಡು ಹೋಗುವಾಗ ಮಧ್ಯೆ ಗಲಾಟೆಯಾದರೆ—

ಊರಿನ ಯುವಕರು ಬಲಿ ಉತ್ಸವ ನಡೆಸುತ್ತಿದ್ದವರು. ಅವರ ಮುಖಂಡ ಕೋಂದುಣ್ಣಿ ನಾಯರ್ ಆತನಿಗೆ ಸಂಶಯ ಬಂದ ಮನೆಗಳಿಗೆಲ್ಲ ನುಗ್ಗಿ ಬಂದ.

"ಕೋಂದುಣ್ಣಿಗೆ ಆಯುಸ್ಸಿರುವ ವರೆಗೆ ಯಾವ ತೊಂದರೆಯೂ ಆಗಲಾರದು. ಯಾರೂ ಭಯಪಡಬೇಕಾಗಿಲ್ಲ." ಎಂದು ಧೈರ್ಯ ನೀಡಿದ.

ಹಗಲಿಡೀ ಮದ್ದು ಗುಂಡು ಸುಟ್ಟದ್ದಾಯಿತು. ಬಲಿಭೂಮಿಯಿಂದ ಪಂಚವಾದ್ಯ ಮುಗಿದ ಮೇಲೆ ವಾಳಾವಿಲ್ ದೇವಸ್ಥಾನಕ್ಕೆ ಜನರೆಲ್ಲರೂ ಹೊರಟರು. ತಳಿಗೆ ಹಿಡಿದವರು ಎರಡು ಸಾಲಿನಲ್ಲಿ ಹೊರಟರು. ಹೆಣ್ಣು ಮಕ್ಕಳ ಪಕ್ಕದಲ್ಲಿ ಗಂಡಸರೆಲ್ಲ ಒಂದು

ರೀತಿಯ ರಕ್ಷಾ ಕವಚದಂತೆ ನಡೆದು ಬರುತ್ತಿದ್ದರು. ಆದರೂ ತಳಿಗೆ ಹಿಡಿದವರಿಗೆ ಮಾತ್ರ ಭಯವಿದ್ದೇ ಇತ್ತು.

ನಿಜವಾಗಿಯೂ ತಳಿಗೆ ಹಿಡಿಯುವುದಕ್ಕೆ ಪಾರುಕುಟ್ಟಿಗೆ ಇಷ್ಟವಿರಲಿಲ್ಲ. ಆದರೆ ಅದೊಂದು ಹರಕೆಯಲ್ಲವೆ? ಭಗವತಿಯ ವಿಷಯದಲ್ಲಿ ಉಪೇಕ್ಷೆ ತೋರಿಸಬಾರದು. ಭಗವತಿ ಪರಮೇಶ್ವರಿ. ಆ ತಾಯಿ ನಮ್ಮ ಮನೆಯ ಅಟ್ಟದಲ್ಲಿ ವಾಸವಾಗಿದ್ದಾಳೆ— ಎಂದು ತಾಯಿ ಹೇಳಿದ್ದಳು.

ಬೆಳ್ಳಪಾಡ ತಳಿಗೆಯನ್ನು ಹೊರಿಸಿದ. ಅದನ್ನು ಹೊತ್ತುಕೊಳ್ಳತೊಡಗಿದಾಗ ಅವಳು ಒಂದು ಸಲ ಹಿಂದಿರುಗಿ ನೋಡಿದಳು. ಕೋಂಮಣ್ಣಿ ನಾಯರ ಮುಖದಿಂದ "ನಾನಿಲ್ಲಿದ್ದೇನೆ" ಎನ್ನುವ ಭಾವನೆಯನ್ನು ಆ ಕಣ್ಣುಗಳು ಸೂಚಿಸಿದ್ದುವು. ನೂಕು ನುಗ್ಗಲು ಹೆಚ್ಚಾದಾಗ ಸ್ವಲ್ಪ ಹತ್ತಿರ ಹತ್ತಿರ ಬಂದದ್ದೂ ಇರಬೇಕು. ಗಂಟಲಿನಲ್ಲಿ ಉಸಿರು ಸಿಕ್ಕಿಕೊಂಡಿತೋ ಎನ್ನುವಂತೆ ತೋರಿತ್ತು. ಬಲಿಭೂಮಿಯನ್ನು ತಲಪಿದ್ದು ತಿಳಿಯಲೇ ಇಲ್ಲ.

ನೋಡುವುದಕ್ಕೂ ಮಾತನಾಡುವುದಕ್ಕೂ ಸಂದರ್ಭಗಳು ದೊರೆತುವು. ತಾವಾಗಿ ಉಂಟಾದ ಸಂದರ್ಭಗಳೋ? ಉಂಟುಮಾಡಿಕೊಂಡ ಸಂದರ್ಭಗಳು ಎಂದರೂ ಸರಿ. ಆತ ಹತ್ತಿರದ ಗೆಳೆಯರಾದರು. ಮಧ್ಯೆ ಮಧ್ಯೆ ಮನೆಗೆ ಬರುತ್ತಿದ್ದರು. ಅದು ದೊಡ್ಡಮ್ಮ ನಿಗೆ ಹಿಡಿಸಲಿಲ್ಲ. ಆ ರೀತಿಯಲ್ಲಿ ತೊಂದರೆಗಳು ಪ್ರಾರಂಭವಾದದ್ದು.

ಇದ್ದಕ್ಕಿದ್ದ ಹಾಗೆ ಮದುವೆ ನಿಶ್ಚಯವಾದ ಸುದ್ದಿ ತಿಳಿಯಿತು. ಮಾಣಿಯೂರಿನ ಗಂಡು.

ಆತನೂ ಬೇರೆ ಮೂರು ಜನರೂ ಒಂದು ದಿನ ಮನೆಗೆ ಬಂದರು. ದೊಡ್ಡ ಮಾವನ ಜೊತೆಯಲ್ಲಿ ಮಾತುಕತೆ ನಡೆಯಿತು. ತೆಂಕು ಮನೆಯಲ್ಲಿ ಊಟಕ್ಕೆ ಎಲೆ ಹಾಕಿದ್ದರು. ಊರಿನ ಇಬ್ಬರು ಮೂವರು ಹಿರಿಯರೂ ಬಂದಿದ್ದರು. ಅವರು ಊಟಕ್ಕೆ ಕುಳಿತಿದ್ದ ಹೊತ್ತಿನಲ್ಲಿ ಮಧ್ಯೆ ತನ್ನನ್ನು ಕೈಹಿಡಿಯಲಿರುವ ವ್ಯಕ್ತಿಯನ್ನು ಚಿಕ್ಕಕ್ಕ ತೋರಿಸಿ ಕೊಟ್ಟಳು.

ಆತನಿಗೆ ತನ್ನನ್ನು ತೋರಿಸಲು ಗಿಂಡಿಯಲ್ಲಿ ನೀರನ್ನು ತೆಗೆದುಕೊಂಡು ಹೋಗಿ ಪಡಸಾಲೆಯಲ್ಲಿಡುವಂತೆ ಏರ್ಪಾಡು ಮಾಡಿದ್ದ ಮೊದಲೇ ಆತನನ್ನು ಅವಳು ನೋಡಿ ದಳು.

ವಯಸ್ಸಾಗಿತ್ತು. ತುಟಿಗಳಲ್ಲೂ ಅಂಗೈಗಳಲ್ಲೂ ಬಿಳಿ ಬಣ್ಣ ಎದ್ದು ಕಾಣಿಸುತ್ತಿತ್ತು. ತೊನ್ನು, ಚೀನಾಗಡ್ಡೆ ಕೆತ್ತಿಟ್ಟ ಹಾಗೆ, ಒಂದು ಸಲ ನೋಡಿದಳು, ಅಷ್ಟೆ.

ಆರಾತ್ರಿ ಇಡೀ ಅತ್ತದ್ದಾಯಿತು. ಯಾರ ಹತ್ತಿರವೂ ಹೇಳಲಿಲ್ಲ. ಹೇಳುವಂತೆಯೂ ಇಲ್ಲ. ತಾಯಿಗೆ ವಿಷಯವೆಲ್ಲ ಗೊತ್ತಿತ್ತು. ಆದರೆ—

"ಕುಂಞಿಕೃಷ್ಣ ನಾಯರ್ ತೀರ್ಮಾನಿಸಿದ ಮೇಲೆ ನಾವೇನು ಮಾಡೋಹಾಗಿದೆ?"

ಕಾಡು ಮೇಡು ಕೊಳ್ಳಗಳುಳ್ಳ ಭೂಮಿ ಬೇಕಾದಷ್ಟಿದೆ. ಸ್ವಂತ ಆಸ್ತಿ ಎಷ್ಟೋ ಇದೆ. ಮೊದಲನೆಯ ಹೆಂಡತಿ ತೀರಿಕೊಂಡಿದ್ದಳು. ಎರಡನೆಯವಳನ್ನು ಕೈಬಿಟ್ಟಿದ್ದ. ಆದರೂ ಒಳ್ಳೆಯವನು. ಎರಡನೆಯವಳ ಮಕ್ಕಳಿಗೆ ಖರ್ಚಿಗೆ ಬೇಕಾಗುವ ಹಣ ಕೊಡುತ್ತಿದ್ದಾನೆ– ಆಗ ಮಾತಾಡುತ್ತಿದ್ದ ವಿಷಯ ಅದಾಗಿತ್ತು.

ಒಂದು ಸಲ ಕಾಣಬೇಕೆಂದು ಕಾದಿದ್ದಳು, ಕೊನೆಯದಾಗಿ ಮದುವೆಯ ಹಿಂದಿನ ದಿನ ಮುತ್ತಜ್ಜಿಯ ಅಕ್ಕನಿಗೆ ತಾಂಬೂಲ ಕೊಟ್ಟು, ಆಶೀರ್ವಾದ ಪಡೆದು ಹಿಂದಿರುಗಿ ಬರುತ್ತಿರುವಾಗ ಕಂಡದ್ದು. ಜೊತೆಯಲ್ಲಿ ವಳ್ಳಿಯ ಮಗಳು ಕುಟ್ಟಿ ಹೆಣ್ಣೂ ಇದ್ದಳು.

ಕಾಲು ದಾರಿಯಲ್ಲಿ ಕಾಚಿಯ ಗೊನೆಯನ್ನು ಬಗ್ಗಿಸಿ ಹಿಡಿದುಕೊಂಡು, ಎಣ್ಣೆಯ ಮೇಲೆ ಕಾಲಿಟ್ಟುಕೊಂಡು ನಿಂತಿದ್ದರು. ತಾಂಬೂಲ ಸವಿದ ತುಟಿಗಳು......ಆಗಲೂ ನಿರ್ಭಯತೆಯ ಒಂದು ನಗು ಇತ್ತು. ಅವರನ್ನು ಕಂಡಾಗ ತನ್ನ ಸಂಶಯವೆಲ್ಲ ಕಳೆದು ಹೋಗಿ, ಗಟ್ಟಿಯಾಗಿ ಅಳು ಬಂದಿತು.

"ಪಾರೂಟ್ಟೀ"

"..............."

"ಯಾಕೆ ಪಾರೂಟ್ಟೀ"

ಮಾತನಾಡಲು ಶಬ್ದಗಳೇ ಇಲ್ಲದಾಗಿದ್ದುವು. ಯಾವುದೂ ಸ್ಪಷ್ಟವಾಗಿ ಹೊಳೆಯುತ್ತಿರಲಿಲ್ಲ. ಏನೇನೋ ಹೇಳಿದರು. ಕೇಳಿಸಿಕೊಂಡಳು. ಮತ್ತೊಂದು ನಿಮಿಷ ಆಲೋಚಿಸುವುದಕ್ಕೆ ಅವಳ ಮನಸ್ಸಿಗೆ ಸಾಧ್ಯವಾಗಲಿಲ್ಲ.

"ಪಾರೂಟ್ಟಿಗೆ ನನ್ನ ಮೇಲೆ ವಿಶ್ವಾಸ ಉಂಟಾ?"

ಉತ್ತರ ಕೊಡಲಾಗಲಿಲ್ಲ. ಹೃದಯ ತುಂಬ ಬಂದಿತ್ತು.

"ನನಗೆ ಚೌಕಟ್ಟಿನ ಮನೆಯೂ ಭತ್ತದ ಬತ್ತಾಯವೂ ಇಲ್ಲ. ಆದರೂ ನಾನೊಬ್ಬ ಗಂಡಸು. ಧೈರ್ಯವಿದ್ದರೆ ಹೊರಟು ಬಾ. ಈ ತೋಳಿನಲ್ಲಿ ಬಲ ಇರೋವರೆಗೆ ನಾ ನಿನ್ನ ಸಾಕಬಲ್ಲೆ."

ಆ ಶರೀರಕ್ಕಿಂತಲೂ ಶಕ್ತಿಪೂರ್ಣವಾಗಿದ್ದುವು ಅವರ ಮಾತುಗಳು. ಕಣ್ಣುಮುಚ್ಚಿಕೊಂಡು ಮೆಲ್ಲನೆ ತನ್ನ ಮನದಿಂಗಿತವನ್ನು ವ್ಯಕ್ತಪಡಿಸಿದಳು:

"ಬರುತ್ತೇನೆ"

ಸರಿ. ಬದುಕಿದ್ದಷ್ಟು ದಿನ ಕಾಪಾಡಿದರು, ಸರಿಯಾದ ಮಾರ್ಗದಲ್ಲಿಯೇ. ಮದುವೆಯಾದ ಮೇಲೆ......! ಅದೊಂದು ಮದುವೆಯಾಗಿತ್ತೇ? ಆತ ಮನುಷ್ಯನಾಗಿ ಬದಲಾಯಿಸಿಬಿಟ್ಟ, ಎಂದು ಜನರು ಮಾತನಾಡಿಕೊಳ್ಳುತ್ತಿದ್ದರು. ಮದುವೆಯ ನಂತರ, ಪಗಡೆದಾಳಗಳನ್ನು ಕೈಯಲ್ಲಿ ಹಿಡಿಯಲಿಲ್ಲ. ಕುಡಿದು ಮೈಮೇಲೆ ಜ್ಞಾನವಿಲ್ಲದ

ತಿರುಗಾಡಲಿಲ್ಲ......ಪಗಲೂ ರಾತ್ರಿಯೂ ಜಮೀನಿನಲ್ಲಿ ಒಂದೇ ಸಮನೆ ಘುಡಿಯುತ್ತಿದ್ದರು.

ಹೊರಗೆ ಮಳೆ ನಿಂತಿತ್ತು. ಗಾಳಿ ಸುಯ್ಯೆಂದು ಬೀಸುತ್ತಲೇ ಇತ್ತು. ಇನ್ನೂ ಮಳೆ ಬೀಳಬಹುದು ಎನ್ನಿಸಿತ್ತು. ಕಿಟಕಿಯಲ್ಲಿ ತೂಗು ಹಾಕಿದ್ದ ತಟ್ಟಿಯ ಸಂದಿನಿಂದ ಶಬ್ದವಿಲ್ಲದ ಮಿಂಚನ್ನು ಕಾಣಬಹುದಾಗಿತ್ತು. ಗಾಳಿಯಲ್ಲಿ ಶೈತ್ಯವಿತ್ತು. ತಲೆಯ ಮೇಲಿಂದ ಜಾರಿ ಹೋಗಿದ್ದ ಟವಲನ್ನು ಅಪ್ಪಣ್ಣಿಯ ತಲೆಗೆ ಹೊದಿಸಿ, ಪಾರುಕುಟ್ಟಿ ಅವನ ಶರೀರಕ್ಕೊತ್ತಿದಂತೆ ಮಲಗಿದಳು.

# 2

ಮಧ್ಯಾಹ್ನದ ವೇಳೆಗೆ ಮನೆಯ ತುಂಬ ಜನರು ಬಂದು ಸೇರಿದರು. ತೆಂಕು ಮನೆಯ ಬಡಗು ಮನೆಯ ತುಂಬ ಸ್ತ್ರೀಯರು, ಅಳುವ ಸಣ್ಣ ಪುಟ್ಟ ಮಕ್ಕಳು. ಅವರೆಲ್ಲ ಕುಟುಂಬಕ್ಕೆ ಸಂಬಂಧಿಸಿದವರೋ, ನೆಂಟರಿಷ್ಟರೋ ಆಗಿದ್ದರು. ಪಡಸಾಲೆಯ ತುಂಬ ಬೆಳೆದ ಹುಡುಗರು. ಹೊರಗೆ ಚಪ್ಪರದ ತುಂಬ ಗಂಡಸರು. ಚಪ್ಪರಕ್ಕೆ ಸ್ವಲ್ಪ ಹತ್ತಿರದಲ್ಲಿ ಪುಳ್ಳುವರು[1] ಕುಳಿತುಕೊಳ್ಳುವುದಕ್ಕೆ ತೆಂಗಿನ ತಟ್ಟಿಯನ್ನು ಕಟ್ಟಿ ಸ್ಥಳ ಮಾಡಿಕೊಟ್ಟಿದ್ದರು. ಅವರಿಗೆ ಬೇಕು ಬೇಕಾದಾಗ ಎಲೆ ಅಡಿಕೆಯನ್ನೂ ನೀರನ್ನೂ ತಂದು ಕೊಡುವುದು ಮಾಳುವಿನ ಜವಾಬ್ದಾರಿಯಾಗಿತ್ತು. ಕುಟುಂಬದ ಅಳಿಯನ ಮಗಳು ಮಾಳು. ಆ ಕೆಲಸ ಅವಳಿಗೆ ತುಂಬ ಇಷ್ಟವಾಯಿತು. ಪುಳ್ಳುವರ ಮುಖಂಡ ರಾಮನ್. ಅವನ ಹೆಂಡತಿಗೂ ಹಾಡುವುದಕ್ಕೆ ಬರುತ್ತದೆ.

ಮನೆಯ ನಾಲ್ಕು ಕಡೆಗಳಲ್ಲಿಯೂ ಜನರು ತುಂಬಿದ್ದರಿಂದ ಚಪ್ಪರದಲ್ಲೂ, ನಡು ಮನೆಯಲ್ಲೂ ಓಡಾಡಿಕೊಂಡಿರಲು ಮಾಳುವಿಗೆ ಸಮಯವೇ ಸಿಕ್ಕದ ಹಾಗಾಯಿತು. ಅಳುತ್ತಿರುವ ಮಗುವನ್ನು ಮಾಳುವಿನ ಕೈಯಲ್ಲಿ ಕೊಟ್ಟು ಅಲ್ಲಿದ್ದ ಹೆಂಗಸರ ಪೈಕಿ ಯಾರಾದರೂ ಹೇಳುತ್ತಿದ್ದರು:

"ಲೇ, ಇದನ್ನ ಹೊರಕ್ಕೆ ಕರಕೊಂಡು ಹೋಗಿ ಸ್ವಲ್ಪ ಸಮಾಧಾನ ಮಾಡು."

ಮೊದಲನೆಯ ಸಲ ಮಗುವನ್ನು ಕೈಗೆತ್ತಿಕೊಂಡು ಅಳುವನ್ನು ನಿಲ್ಲಿಸುವುದರಲ್ಲಿಯೂ ಒಂದು ಬಗೆಯ ಆನಂದವುಂಟಾಗಿತ್ತು. ಆದರೆ ಅದು ಅಷ್ಟಕ್ಕೇ ಮುಗಿಯುತ್ತಿರಲಿಲ್ಲ. ಹೊಸಬರು ಬರುವುದೂ ಮಕ್ಕಳು ಅಳುವುದೂ ಹೆಚ್ಚುತ್ತಲೇ ಇತ್ತು. 'ಆಗುವುದಿಲ್ಲ' ಎಂದು ಹೇಳುವುದಕ್ಕೆ ಸಾಧ್ಯವೆ?

ಅವಳು ತಂದೆಯ ಜೊತೆಯಲ್ಲಿ ಮನೆಯಿಂದ ಹೊರಟಾಗ ಹೇಳಿ ಕಳುಹಿಸಿದ್ದರು:

"ಕರೆದರೆ, ಹೇಳಿದರೆ—ಕೇಳಬೇಕು; ತಾಳ್ಮೆಯಿಂದ ಇರಬೇಕು ತಿಳಿಯಿತಾ?"

ಎಲ್ಲರೂ ಬೇಕಾದವರೇ. ಹೆಚ್ಚಿನವರು ಮಾಳುಗೆ ಗೊತ್ತಿಲ್ಲ. ಕೇಳಿಯೋ ತಿಳಿಯ ಬೇಕಾಗಿತ್ತು.

"ಅದೇ ಅವಳು ಕುಳಿಯಿಲ್ ತೊಡಿಯ ಪಾಪ್ಪಿ ಚಿಕ್ಕಮ್ಮನ ತಂಗಿಯಲ್ಲವೆ?"

"ಅದು, ಅಮ್ಮುಕುಟ್ಟಿ ಅಕ್ಕನ ಗಂಡನ ಮನೆಯಿಂದ ಅಲ್ಲವೆ?" ಇತ್ಯಾದಿ.

---

1 ಕೆಳವರ್ಗದ ಒಂದು ಜಾತಿ.

'ತುಳ್ಳಲ್'[1] ಎಂದಿಗೆ ಬಂದೀತು ಎಂದು ಮಾಳುವೂ ಕುತೂಹಲದಿಂದ ಕಾಯುತ್ತಿದ್ದಳು. 'ತುಳ್ಳಲ್' ಎಂದು ಹೇಳುವುದನ್ನು ಮಾತ್ರ ಕೇಳಿದ್ದಾಳೆ.

ಕೆಳಭಾಗದಲ್ಲೂ ಮೇಲುಭಾಗದಲ್ಲೂ ಎರಡು ನಾಗಬನಗಳಿವೆ. ಎರಡರಲ್ಲೂ ಒಟ್ಟು ಮೂರು ಸರ್ಪಗಳಿವೆ. ಮಾಳು ಅವುಗಳ ಹೆಸರುಗಳನ್ನು ಮಾತ್ರ ಕೇಳಿದ್ದಾಳೆ. ಕರಿನಾಗ, ಮಣಿನಾಗ, ಅಂಜನ ಮಣಿನಾಗ.

ಕರಿನಾಗ ದುಷ್ಟ ಸರ್ಪ; ಕೆಳವರ್ಗ. ಅಯ್ಯಪ್ಪನೂ ಚಾತಪ್ಪನೂ ಇದ್ದ ಹಾಗೆ ಎಂದುಕೊಂಡಳು ಮಾಳು. ಆದ್ದರಿಂದಲೇ ಶಿವರಾತ್ರಿಯಲ್ಲಿ ಹಾಲು ಹಣ್ಣು ಅರ್ಪಿಸುವಾಗ ಮೊದಲು ಕರಿನಾಗನಿಗೆ ಅರ್ಪಿಸುವುದು. ಮೇಲಿನ ಬನಕ್ಕೆ ಮೊದಲು ಅರ್ಪಿಸಿದರೆ ದುರಾಶೆಯ ಕರಿನಾಗ ಅಲ್ಲಿಗೆ ಬಂದು ಅಶುದ್ಧ ಮಾಡುತ್ತದಲ್ಲ, ಅದಕ್ಕೆ.

ಮಾಳು ಆ ಸರ್ಪಗಳನ್ನು ಕಂಡದ್ದಿಲ್ಲ. ನಾಗಬನದಲ್ಲಿ ಚಿತ್ರಕೂಟದ ಕೆಳಗೆ ಅವುಗಳ ಮಾಳಿಗೆ. ಒಂದೊಂದರಲ್ಲೂ ಮಕ್ಕಳೂ ಮೊಮ್ಮಕ್ಕಳೂ ಸೇವಕರೂ ಸೇರಿದಂತೆ ಎಷ್ಟೋ ಹಾವುಗಳಿರಬೇಕು. ಅವುಗಳಲ್ಲಿ ಒಂದನ್ನು ಹೊರಗೆ ಮೆಟ್ಟಿಲಿನ ಹತ್ತಿರ ಕೆಲವು ದಿನಗಳ ಹಿಂದೆ ಕಂಡದ್ದು. ಸಾಯಂಕಾಲದಲ್ಲಿ ತಂಗಕ್ಕ ದೀಪ ಹಚ್ಚಿಡುವುದಕ್ಕೆ ಪಡಸಾಲೆಗೆ ಹೋದಾಗ ಕೂಗಿ ಹೇಳಿದ್ದು :

"ಅಮ್ಮ, ಹಾವು—ಚಿಕ್ಕಮ್ಮ, ಹಾವು"

ತಂಗಕ್ಕ ದೀಪ ಹಚ್ಚಿಡದೆ ಒಳಕ್ಕೆ ಓಡಿದಳು.

"ಸಾಯಂಕಾಲದಲ್ಲಿ ಅದೇನು ನಿಮ್ಮ ಗಲಾಟೆ" ಎಂದು ಹುಡುಗರನ್ನು ಬಯ್ಯುತ್ತ ಅಣ್ಣಿನಮ್ಮ ಬಂದರು. ತಂಗಕ್ಕನ ತಾಯಿಯನ್ನು 'ಅಣ್ಣಿನಮ್ಮ' ಎಂದೇ ಕರೆಯುವುದು. ತಂಗಕ್ಕ ಪಡಸಾಲೆಗೆ ಮತ್ತೆ ಬಂದಳು.

"ಅಮ್ಮ ಅಲ್ಲಿ ಹಾವಿದೆ".

ಅಣಿನಮ್ಮ ತೆಂಕು ಭಾಗಕ್ಕೆ ಓಡಿ ಗಟ್ಟಿಯಾಗಿ ಕರೆದರು:

"ಕುಟ್ಟಾ, ಮೀನಾಕ್ಷೀ, ಭಾಸ್ಕರಾ, ಹಾವು ! ಪಡಸಾಲೆಯಲ್ಲಿ ಹಾವಿದೆ."

ಅಣ್ಣಿನಮ್ಮನ ನಂತರ ಅವಳ ತಂದೆ ಹೆಸರು ಹಿಡಿದೇ ಕರೆಯುವುದು.

ತಂದೆ ಬಂದರು. ಭಾಸ್ಕರನೂ ಕೃಷ್ಣನ್‌ಕುಟ್ಟಿಯೂ ಬಂದರು. ಒಳಗಿನಿಂದ ಅಜ್ಜಿಯೂ ಮೆಲ್ಲಗೆ ಎದ್ದು ಬಂದರು.

"ಎಲ್ಲಿ? ಎಲ್ಲಿ?"

ನೋಡಿದರೆ ಹಾವಿಲ್ಲ. ಹೊರಗೆ ಮೆಟ್ಟಿಲಿನ ಕೆಳಗೆ, ತೆಂಗಿನ ಸಿಪ್ಪೆಗಳನ್ನು ರಾಶಿ ಹಾಕಿದ್ದ ಕಡೆಯಲ್ಲೂ ಹಾವಿಲ್ಲ.

---

1 ಸರ್ಪನಾಟ್ಯ.

ಅಜ್ಜಿ ಎಲ್ಲರನ್ನೂ ಉದ್ದೇಶಿಸಿ ಹೇಳಿದರು :

"ಇಲ್ಲಿ ಕೇಳಿ. ಹಿಡಿಯೋದು ಬಡಿಯೋದು ಬೇಡಿ. ಅವರ ಪತ್ತಿರ ಹುಡುಗಾಟ ಆಡಬಾರದು."

"ಬನದ ಸರ್ಪವಾಗಿರಬೇಕು......"

ದೊಡ್ಡ ಮಾವ ಸ್ವಲ್ಪ ಹೊತ್ತು ಕಳೆದ ಮೇಲೆ ಬಂದರು. ಅವರು ಬಂದದ್ದನ್ನು ನೋಡಿ ಎಲ್ಲರೂ ಒಳಕ್ಕೆ ಹೋದರು. ಮಾಳುವಿನ ತಂದೆ ಕೆಳಗಿನ ಪಡಸಾಲೆಗೆ ಬಂದು ನಿಂತುಕೊಂಡರು. ಅಜ್ಜಿ, ಹಾವನ್ನು ಕಂಡ ವಿಷಯವನ್ನು ತಿಳಿಸುವುದಕ್ಕಾಗಿ ಕಾದು ನಿಂತಿದ್ದರು. ನಡೆದ ಸಮಾಚಾರವನ್ನು ಕೇಳಿದಾಗ ದೊಡ್ಡ ಮಾವ ಕೇಳಿದರು:

"ಹಾಲನ್ನೂ ಅಕ್ಕಿ . ಹಿಟ್ಟನ್ನೂ ಕೊಟ್ಟಿತ್ತಲ್ಲ. ಮತ್ತೆ ಯಾಕೆ ಹೀಗೆ ಕಾಣಿಸಿಕೊಂಡಿತು?"

ಸ್ವಲ್ಪ ಹೊತ್ತು ಹೊರಗೆ ಅತ್ತ ಇತ್ತ ನಡೆದಾಡುತ್ತಿದ್ದರು. ಆ ಮೇಲೆ ಗಟ್ಟಿಯಾಗಿ ಹೇಳಿದರು:

"ಒಂದು ಮುಟ್ಟಿಲ್ಲ, ತಟ್ಟಿಲ್ಲ; ಮುಟ್ಟು ತಟ್ಟು ಆದಾಗ ನಾಗಬನಕ್ಕೆ ಹೋಗಿರಬೇಕು ಹಾಳಾದವರು."

ಎಂದು ಹೇಳುತ್ತಾ ಮಾಳುವಿನ ತಂದೆಯನ್ನು ಕರೆದರು:

"ಯಾರೋ ಅಲ್ಲಿ ಕುಟ್ಟಾ, ನಾಳೆ ಜಮೀನಿಗೆ ಹೋಗೋ ದಾರೀಲಿ ಆ ಪೂಜಾರಿ ಪತ್ತಿರ ಹೇಳು, ಪುಣ್ಯಾರ್ಚನೆ ಮಾಡಲಿ."

ಹಾವನ್ನು ಮತ್ತೆ ಎಷ್ಟೋ ಕಡೆ ಕಂಡದ್ದುಂಟು. ದನಗಳ ಕೊಟ್ಟಿಗೆಯ ಹಿಂದೆ, ಮೆಟ್ಟಿಲಿನಿಂದ ಸ್ವಲ್ಪ ದೂರದಲ್ಲಿ, ಪಲಸಿನ ಮರದ ಕೆಳಗೆ—

ಅಪ್ಪುಕುಟ್ಟನ್ ಪಣಿಕ್ಕರ್ ಬಂದು ಪಂಚಾಂಗ ನೋಡಿದರು.

"ನಾಗಗಳು ದಾಹಗೊಂಡು ಹರಿದಾಡುತ್ತಿವೆ. ಹಾಲು ಅಕ್ಕಿ ಹುಡಿಯಿಂದ ಅವುಗಳ ಬಾಯಾರಿಕೆ ಹೋಗುವುದಿಲ್ಲ. ಸರ್ಪನಾಟ್ಯವನ್ನೇ ಏರ್ಪಡಿಸಬೇಕು." ಎಂದು ಹೇಳಿದರು.

ಆದ್ದರಿಂದ ಪುಳ್ಳುವನ್ ರಾಮನ್ ಬಂದು ಸರ್ಪನಾಟ್ಯದ ದಿನವನ್ನು ನಿಶ್ಚಯಿಸಿದ್ದು.

ಹೊರಗೆ ಮಕ್ಕಳ ಗುಂಪಿನಲ್ಲಿ ಹೋಗಿ ಕುಳಿತುಕೊಂಡರೆ ಚಪ್ಪರದೊಳಗೆ ನಡೆಯುವುದನ್ನೆಲ್ಲ ಮಾಳು ನೋಡಬಹುದಾಗಿತ್ತು. ಆದರೆ ಮಧ್ಯೆ ಮಧ್ಯೆ ತಂಗಕ್ಕ ಕರೆಯುತ್ತಿದ್ದಳು. ಬಂದಿದ್ದವರಲ್ಲೂ ಕೆಲವರು ಕರೆಯುತ್ತಿದ್ದರು.

ಈ ದಿನ ಅಮ್ಮಿಣ್ಣಿ ಅಕ್ಕನೂ ತಂಗಕ್ಕನೂ ಸರ್ಪನಾಟ್ಯವಾಡುವುದು. ದೊಡ್ಡ ಮಾವನ ಕಿರಿಯ ಮಗಳು ಅಮ್ಮಿಣ್ಣಿ ಅಕ್ಕ, ಚಿಕ್ಕಮ್ಮನೂ ಮಗಳೂ ನಿನ್ನೆ ಬಂದದ್ದು.

ಹೊರಗಡೆ, ಎದೆಯ ವರೆಗೆ ಪಂಚೆ ಸುತ್ತಿಕೊಂಡು ಮರದ ಪಾದರಕ್ಷೆಗಳನ್ನು ಹಾಕಿಕೊಂಡು ಎದೆಯ ಮೇಲಿನ ನರೆತ ರೋಮಗಳ ಮಧ್ಯೆ ಬೆರಳಾಡಿಸುತ್ತ ಚಪ್ಪರದಲ್ಲೂ

ಹೊರಗೂ ನಿಂತಿದ್ದ ಜನರ ಹತ್ತಿರ ದೊಡ್ಡ ಮಾವ ಹಿಂದಿನ ಕಾಲವನ್ನು ಕುರಿತು ಮಾತಾಡು ತ್ತಿದ್ದರು:

"ಅಚ್ಚು ಮಾವ ಈ ಬತ್ತಾಯದ ಪಜಾರದಲ್ಲಿ ಕುಳಿತರೆ ಸಾಕು–ಈ ಊರಿನ ಕಾಗೆ ಸಹ ಕೂಗುತ್ತಿರಲಿಲ್ಲ......"

ಕೆಲವು ಮಂದಿ ವಯಸ್ಸಾದವರು ಗೌರವದಿಂದ ಕುಳಿತು ಕೇಳಿಸಿಕೊಳ್ಳುತ್ತಿದ್ದರು.

"ಯಜಮಾನರೇ, ನನಗೆ ನೆನಪಿದೆ. ಹುಲಿ! ಹುಲಿಯಂಥಾ ಮನುಷ್ಯ ಆಗಿದ್ದರು ಅಲ್ಲವಾ?"

ಕಳತ್ತಿಕ್ಕಪ್ಮ್ಮಳ್[1] ಹೇಳಿದ.

ಹೊಸ ಪಂಚೆ ಉಟ್ಟು, ಹಣೆಗೆ ಗಂಧದ ಬೊಟ್ಟಿಟ್ಟು, ಕಿವಿಯಲ್ಲಿ ತುಳಸಿ ಹೂ ಮುಡಿದುಕೊಂಡು, ಯಾರನ್ನೂ ಮುಟ್ಟಿಸಿಕೊಳ್ಳದೆ ನಿಂತುಕೊಂಡಿದ್ದ ಬಡಗುಕೋಣೆ ನಾರಾಯಣನ್ ನಾಯರ್. ಆತನೇ ಸರ್ಪನಾಟ್ಯದ ಪೂಜಾರಿ.

ಊರಿನ ವಯಸ್ಸಾದ ಯಾರಾದರೂ ಮನೆಗೆ ಬಂದಾಗ ದೊಡ್ಡ ಮಾವ ಅದನ್ನೇ ಮಾತನಾಡುತ್ತಿದ್ದದ್ದು. ಆ ಮಾತೆಲ್ಲವೂ ಕಳೆದು ಹೋದ ಕಾಲವನ್ನು ಕುರಿತಾಗಿರು ತ್ತಿತ್ತು.

ಎರಡು ಚೌಕಟ್ಟಿನ ಮನೆಗಳೂ ಮೂರು ಕೈಯಾಲೆಗಳೂ, ಅರವತ್ತನಾಲ್ಕು ಜನರೂ ಹುಲಿಯಂಥ ಅಚ್ಚು ಮಾವನೂ ಇದ್ದಂಥ ಕಾಲದ ಕಥೆ—ಕುಟುಂಬದ ಮನೆ ಭಾಗವಾದ ಕಾಲದ ಕಥೆ.

"ಈವತ್ತು ಊರಿನಲ್ಲಿ ಎಲ್ಲರಿಗೂ ಹಣಕಾಸು ಆಯ್ತು. ಇದಕ್ಕಿಂತ ಹೆಚ್ಚು ಅನು ಕೂಲಕ್ಕೆ ಬಂದವರು ಈಗ ನಾಯರ್ ಸಮುದಾಯದಲ್ಲಿದ್ದಾರೆ. ಆದರೆ ಈ ಮನೆತನಕ್ಕೆ ಸಮನಾಗಿ ನಿಲ್ಲಬಹುದಾದ ಮನೆತನ ಬೇರೆ ಯಾವುದಿದೆ?"

ಒಬ್ಬ ಮುದುಕ ತಲೆ ಅಲ್ಲಾಡಿಸುತ್ತ ಹೇಳಿದ:

"ನಿಜ. ಅದೆಲ್ಲ ನಿನ್ನೆ ಬಿದ್ದ ಮಳೆಗೆ ಹುಟ್ಟಿದ ಚೊಗಟೆ ಗಿಡಗಳು."

"ನನ್ನ ಕಣದಿಂದ ಭತ್ತ ಕದ್ದುಕೊಂಡು ಹೋದದ್ದನ್ನು ಕೆಲಸದ ಹೊಲೆಯರು ಕೂಡ ನೋಡಿದ್ದಾರೆ. ಅವನೇ ಈಗ ದೊಡ್ಡ ಮಹಡಿ ಮನೆ ಕಟ್ಟಿಸಿಕೊಂಡು ವಾಸ ಮಾಡ್ತಿರು ವವನು. ಥೂ!"

ಮುದುಕ ಮತ್ತೂ ತಲೆ ಅಲ್ಲಾಡಿಸಿದ.

"ಸಾಧಾರಣ ಮನೆತನದಂತಲ್ಲ ಇದು. ಈ ಮನೆಯಲ್ಲಿ ನಿಷ್ಠೆಯುಳ್ಳ ಭಗವತಿ ಇದ್ದಾಳೆ."

---

1 ಸರ್ಪನಾಟ್ಯದ ಪೂಜಾರಿ.

"ಅವಳೇ ಐಶ್ವರ್ಯ! ಅನ್ನ ಕೊಟ್ಟ ತಾಯಿ". ಮಾಳು ಕಂಬಿಗಳ ಹಿಂದಿನಿಂದ ಸರಿದುಮೆಲ್ಲನೆ ಬಡಗು ಪಾರ್ಶ್ವಕ್ಕೆ ಹೋದಳು.

ತಂಗಕ್ಕನೂ ಅಮ್ಮಿಣ್ಣಿ ಅಕ್ಕನೂ ಮಿಂದು ಶುಚಿಯಾಗಿದ್ದಾರೆ. ತಂಗಕ್ಕನಿಗೆ ತಾನೊಬ್ಬಳು ದೊಡ್ಡವಳೆಂಬ ಭಾವನೆಯಿದೆ. ಇನ್ನು ಈವತ್ತಿನ ವಿಷಯ ಹೇಳುವುದೇ ಬೇಡ. ಅಮ್ಮಿಣ್ಣಿ ಅಕ್ಕ ಮಿಂದು ಹಣೆಗೆ ಗಂಧದ ಬೊಟ್ಟು, ಕುಂಕುಮದ ಬೊಟ್ಟುಗಳನ್ನಿಟ್ಟುಕೊಂಡು ಕುಳಿತಿದ್ದರೆ ನೋಡುವುದಕ್ಕೇ ಒಂದು ಚೆಂದ. ಅಸೂಯೆಯಿಂದ ಅಮ್ಮಿಣ್ಣಿ ಅಕ್ಕನನ್ನು ಅವಳು ನೋಡುತ್ತಿದ್ದಳು. ಎಳೆ ಬಾಳೆ ಸುಳಿಯ ಬಣ್ಣ. ಕತ್ತಿನಲ್ಲಿ ನೀಲಿಯ ನರಗಳು ಸ್ಪಷ್ಟವಾಗಿ ಕಾಣುತ್ತಿವೆ. ಎಡದ ಭುಜದ ಮೇಲೆ ಮುಂದೆ ಇಳಿ ಬಿಟ್ಟ ಜಡೆ ನೆಲದ ಮೇಲೆ ಕರಿಯ ನಾಗರ ಹಾವಿನಂತೆ ಇಳಿಬಿದ್ದಿದೆ.

ದೊಡ್ಡ ಮಾವನ ಮಕ್ಕಳಲ್ಲಿ ಕಲ್ಯಾಣಿ ಅಕ್ಕ ಮಾತ್ರ ಬಂದಿಲ್ಲ. ಅವಳು ಹೆತ್ತಿದ್ದಾಳೆ. ಅವರ ಹಿರಿಯ ಮಗ ಬಾಲನ್ ತಾಯಿಯ ಜೊತೆಯಲ್ಲಿ ಬಂದಿದ್ದಾನೆ.

ದೊಡ್ಡಮ್ಮನ ಮನೆಗೆ ನಾಲ್ಕು ಮೈಲಿ ನಡೆಯಬೇಕು. ಹೊಳೆ ದಾಟಿ ಮತ್ತೆ ಒಂದು ಹಳ್ಳ ದಾಟಿದರೆ ಆಯ್ತು. ಅಜ್ಜಿಯ ವಾಸ ಸ್ವಂತ ತರವಾಡು1 ಮನೆಯಲ್ಲಲ್ಲ. ತೆಂಗಿನ ತೋಟವೂ ಹೆಂಚು ಹೊದಿಸಿದ ಮನೆಯೂ ಇದೆ. ಕಳೆದ ವರ್ಷ ಅಮ್ಮಿಣಿ ಅಕ್ಕ ಮೈ ನೆರೆದಾಗ ದೊಡ್ಡಮ್ಮನ ಜೊತೆಯಲ್ಲಿ ತಾನೂ ಹೋಗಿದ್ದಳು.

ಅವರ ಕತ್ತಿನಲ್ಲಿ ಹೊಳೆಯುವ ಆಭರಣ ನೋಡುವುದಕ್ಕೆ ತುಂಬ ಚೆನ್ನಾಗಿತ್ತು.

ಮಾಳುವಿನ ಕತ್ತಿನಲ್ಲಿ ನೂಲಿನಲ್ಲಿ ಪೋಣಿಸಿದ ಒಂದು ಚೌಕಾಕಾರದ ಪದಕ ಇದೆ, ಅದು ತಾಯಿಯ ಕತ್ತಿನಲ್ಲಿದ್ದದ್ದು. ತಾಯಿ ತೀರಿಕೊಂಡಾಗ ಸಮಾಧಿ ಮಾಡುವುದಕ್ಕೆ ತೆಗೆದುಕೊಂಡು ಹೋಗುವುದಕ್ಕೆ ಸ್ವಲ್ಪ ಹೊತ್ತಿಗೆ ಮೊದಲು ಯಾರೋ ಆ ದಾರವನ್ನು ತೆಗೆದದ್ದು. ಆ ಮೇಲೆ ಅದು ಅವಳ ಕುತ್ತಿಗೆಗೆ ಬಂತು.

ಸ್ವಲ್ಪ ಹೊತ್ತಾದ ಬಳಿಕ ಅಮ್ಮಿಣಿ ಅಕ್ಕ ಅವಳನ್ನು ಕಂಡದ್ದು.

"ಯಾವಾಗ ಬಂದೆ ಮಾಳು?"

ಅದಕ್ಕೆ ತಂಗಕ್ಕ ಉತ್ತರ ಹೇಳಿದ್ದು.

"ಇವಳು ಕಳೆದ ವರ್ಷಕ್ಕೆ ಹಿಂದಿನಿಂದಲೂ ಇಲ್ಲೇ ಇದ್ದಾಳಲ್ಲ."

ಒಂದು ವರ್ಷ ಆಯ್ತು ಅವಳು ಇಲ್ಲಿಗೆ ಬಂದು. ಮನೆಯಲ್ಲಿ ತಾಯಿ ತೀರಿಕೊಂಡ ಅವಳ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಚಿಕ್ಕಮ್ಮನೂ ಅವಳ ಮಕ್ಕಳೂ ಅಲ್ಲಿರುವುದು. ಮನೆಯೂ ಅವರದು. ಅವಳ ತಾಯಿಗೆ ಏನೂ ಇರಲಿಲ್ಲ. ತಂದೆಗೆ ಏನನ್ನೂ ಕೊಡುವ ಶಕ್ತಿಯೂ ಇರಲಿಲ್ಲ. ಅಜ್ಜಿ ಅವಳನ್ನು ಅಲ್ಲಿಗೆ ಬಂದು ಇರುವಂತೆ ಹೇಳಿದ್ದರಿಂದ ಬಂದಿದ್ದಳು, ಅಷ್ಟೆ.

---

1 ಕುಟುಂಬದ ಮನೆ.

"ಮಾಳು ಇಲ್ಲೇ ಬಂದಿರಲಿ. ಇಲ್ಲಿ ಮೀನಾಕ್ಷಿಗೂ ಸಣ್ಣ ಪುಟ್ಟ ಕೆಲಸಕ್ಕೆ ಸಹಾಯ ವಾದ ಹಾಗೆ ಆಯ್ತು". ಎಂದ.

ಹೊರಗೆ ಊಟಕ್ಕೆ ಎಲೆ ಹಾಕುವ ಗಡಿಬಿಡಿ ಪ್ರಾರಂಭವಾಯಿತು. ಮೊದಲು ಹೆಂಗಸರಿಗೂ ಮಕ್ಕಳಿಗೂ. ಹೊರಗೆ ಹುಡುಗರು ಮಕ್ಕಳಿಗೂ ತೆಂಕು. ಬಡಗು ಪಾರ್ಶ್ವ ಗಳಲ್ಲಿ ಹೆಂಗಸರಿಗೂ. ಎಲೆ ಹಾಕಿದರು. ದೊಡ್ಡ ಮಾವ ಕರೆದು ಹೇಳಿದರು:

"ಲೋ ಕುಟ್ಟಾ, ಒಳಗೆ ಒಂದು ಮಗು ಕೂಡ ಊಟ ಮಾಡದೆ ಉಳಿಯಬಾರದು. ಹಾಡು ಸಮಯಕ್ಕೆ ಮೊದಲೇ ಪ್ರಾರಂಭವಾಗಬೇಕು. ಗೊತ್ತಾಯ್ತಾ"

ಮಕ್ಕಳ ಸಾಲಿನಲ್ಲಿ ಕುಳಿತುಕೊಳ್ಳುವುದಕ್ಕೆ ಅವಳಿಗೆ ಸ್ವಲ್ಪ ಕಸಿವಿಸಿಯುಂಟಾಯಿತು. ಹೆಂಗಸರ ಜೊತೆಯಲ್ಲಿ ಕುಳಿತುಕೊಳ್ಳಬೇಕು ಎಂದು ಅವಳ ಆಸೆ. ಬೇಗ ಊಟ ಮುಗಿಸಿ ದರೆ ಒಳ್ಳೆಯ ಸ್ಥಳ ಹಿಡಿದುಕೊಂಡು ಕುಳಿತುಕೊಳ್ಳಬಹುದು. ಒರಗು ಜಗುಲಿಯ ಕೆಳಗೆ ಒಂದು ಎಲೆ ಇತ್ತು. ಅದರ ಹಿಂದೆ ಹೋಗಿ ಕುಳಿತುಕೊಂಡಳು. ಎರಡು ಸಾಲಿನಲ್ಲಿ ಹತ್ತಿಪ್ಪತ್ತು ಹುಡುಗರು ಕುಳಿತಿದ್ದರು.

ಚಪ್ಪರದ ಮುಂದೆ ಕಂಬದ ಹತ್ತಿರ ಕುಳಿತರೆ ಸಾಕು. ಸರಿಯಾಗಿ ಕೆಳಗೆ ಮಂಡಲ ವನ್ನು ನೋಡಬಹುದು.

ಬೇಗ ಬೇಗ ಊಟ ಮಾಡಿ ಎರಡನೆಯ ಸಲ ಪಾಯಸ ತರುವಷ್ಟರಲ್ಲೇ ಅವಳು ಎದ್ದು ಕೈತೊಳೆದುಕೊಂಡು ಮೂಡು ದಿಕ್ಕಿನ ಅಂಗಳಕ್ಕೆ ಹೋದಳು. ಅಲ್ಲಿ ಕತ್ತರಿಸಿ ಎಸೆದ ಬಾಳೆ ಎಲೆ ತುಂಡುಗಳ ರಾಶಿ ಹಾಕಿತ್ತು. ಅದರ ಸಮೀಪದಲ್ಲಿ ಗೋಡೆ ಒರಗಿ ಕೊಂಡು ಕೆಂಪು ಟ್ರೌಸರ್ ಕೊಳೆಯಾದ ಹಸಿರು ಷರಟು ಹಾಕಿದ್ದ ಒಬ್ಬ ಹುಡುಗ ಕುಳಿತಿದ್ದ.

ಮಾಳು ಸ್ವಲ್ಪ ಸಂಶಯಪಟ್ಟುಕೊಂಡು ನಿಂತಳು. ಮತ್ತೆ ಹತ್ತಿರಕ್ಕೆ ಹೋಗಿ ಕೇಳಿ ದಳು.

"ಏನೋ ನಿನಗೆ ಊಟ ಆಗಿಲ್ಲವಾ?"

ಅವನು ಮುಖವೆತ್ತಿ ಆಶ್ಚರ್ಯದಿಂದ ಅವಳನ್ನು ನೋಡಿದ.

"ಇಲ್ಲ."

"ಹುಡುಗರದೆಲ್ಲ ಊಟ ಆಯ್ತಲ್ಲ?"

"ಆಗಲಿ"

ತುಸು ಗಂಭೀರವಾಗಿಯೇ ಉತ್ತರಿಸಿದ.

ಮಾಳುಗೆ ಸ್ವಲ್ಪ ನಾಚಿಕೆಯಾದಂತಾಯಿತು.

"ಊಟ ಮಾಡೋದಿಲ್ಲವಾ?"

"ನಾನು ಅನ್ನಕ್ಕಾಗಿ ಬಂದದ್ದಲ್ಲ."

ಅವನ ತಾತ್ಸಾರವೂ ಗಾಂಭೀರ್ಯವೂ ಅವಳನ್ನು ಅಲ್ಲಿಂದ ಕಾಲ್ಕಿತೆಗೆಯುವಂತೆ ಮಾಡಿದುವು.

ಅವನು ತಲೆ ತಗ್ಗಿಸಿಕೊಂಡು ನೆಲ ನೋಡುತ್ತ ಕುಳಿತಿದ್ದಾಗ ಅವಳು ಮೆಲ್ಲಗೆ ಕೇಳಿದಳು.

"ನೀನೆಲ್ಲಿಂದ ಬಂದೆ?"

ಆಗ ಅವನು ಕೇಳಿಸಿಕೊಳ್ಳದವನಂತೆ ಹತ್ತಿರದಲ್ಲಿ ಪಾಚಿಗಟ್ಟಿ ಒಂದಿಗೆ ಹಸಿರು ಬಣ್ಣಕ್ಕೆ ತಿರುಗಿದ್ದ ಗೋಡೆಯ ಕಡೆಗೆ ನೋಡುತ್ತ ಕುಳಿತಿದ್ದ.

"ನಿನ್ನ ಹೆಸರೇನು?"

"ಅಪ್ಪಣ್ಣ."

"ನೀನೆಲ್ಲಿಂದ ಬಂದೆ?"

ಅವನ ಮುಖ ಕೆಂಪೇರಿತು. ಸಿಟ್ಟಿನಿಂದ ಅವಳನ್ನೊಮ್ಮೆ ದುರುಗುಟ್ಟಿಕೊಂಡು ನೋಡಿದ.

"ನಾನು ಇಲ್ಲಿಯವನೇ. ನಿನಗೆ ಯಾಕೆ ಅದು?"

ಆ ಚುಚ್ಚು ನುಡಿಯನ್ನಾಡಿದ್ದು ಅವಳ ಮೇಲಿನ ದ್ವೇಷದಿಂದಲ್ಲ. ಈ ಮನೆಯ ಹುಡುಗನೇ ಎಂದು ಹೇಳಿದ್ದು ಮಾಳುವನ್ನು ತಮಾಷೆ ಮಾಡುವುದಕ್ಕಾಗಿ ಹೇಳಿದ್ದಾಗಿರ ಬೇಕು ಎಂದುಕೊಂಡು ಮಾಳು ಕೇಳಿದಳು:

"ಇಲ್ಲಿಯ ಹುಡುಗರನ್ನೆಲ್ಲ ನಾನು ನೋಡಿದ್ದೀನಲ್ಲ?" ಎಂದು ಹೇಳಿ, ಮತ್ತೆಯೂ ಏನನ್ನೋ ಹೇಳಬೇಕು ಎನ್ನುವಷ್ಟರಲ್ಲಿ ಮಾಳು ಅವನ ಕಡೆಗೊಮ್ಮೆ ನೋಡಿದಳು. ಅವನ ಕಣ್ಣುಗಳು ತೇವಗೊಂಡಿದ್ದುವು.

"ನಾನು ಕೋಂದುಣ್ಣಿ ನಾಯರ ಮಗ. ನಾನೂ ನನ್ನ ತಾಯಿಯೂ ಈ ಮನೆ ಯುವರೇ !"

ಆಗ ಅವಳ ಪ್ರಶ್ನೆ ಥಟ್ಟನೆ ನಿಂತಿತು. ತಂಗಕ್ಕ ಗುಟ್ಟಾಗಿ ಹೇಳುವ ಕಥೆ ನೆನಪಾ ಯಿತು. ಅವಳು ಇದುವರೆಗೆ ನೋಡಿಲ್ಲದ ಅತ್ತೆಯನ್ನು ಅಪಹರಿಸಿಕೊಂಡು ಹೋದ ವಿಷಯ. ಇವನೇನಾ ಅಪ್ಪಣ್ಣ ಅಣ್ಣ ಎಂದುಕೊಂಡಳು.

ಕೆಲಸದವರು ಎಂಜಲೆಲೆಗಳನ್ನು ಮುಂದುಗಡೆಗೆ ತೆಗೆದುಕೊಂಡು ಹೋಗಿ ಬಾಳೆಗುಂಡಿ ಗಳಲ್ಲಿ ಹಾಕುತ್ತಿದ್ದರು. ಅಲ್ಲಿ ಹೊಲೆಯರ ಮಕ್ಕಳು ಎಂಜಲನ್ನಕ್ಕಾಗಿ ನೂಕಾಡುತ್ತಿದ್ದರು.

ಮಾಳುವೂ ನೆಲದ ಮೇಲೆ ಕುಳಿತಳು.

"ಯಾಕೆ ಅಳ್ತೀಯಾ?"

ಅವನೇನೂ ಮಾತನಾಡಲಿಲ್ಲ.

"ಒಬ್ಬನೇ ಹೋಗ್ತೀಯಾ?"

"ಕೊಟ್ಟಿಗೆ ಮುತ್ತಜ್ಜಿ ಇದ್ದಾಳೆ."

"ನಾನು ಮುತ್ತಜ್ಜಿನ ನೋಡಿದೆ. ಎಲೆ ಅಡಿಕೆ ನಾನೇ ಕೊಟ್ಟೆ. ಆಗ ಅವಳು ಏನೂ ಹೇಳಲಿಲ್ಲವಲ್ಲ?"

ಆ ಮೇಲೆ ಮುತ್ತಜ್ಜಿಯನ್ನು ಕುರಿತು ಅವಳೊಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದಳು.

"ಎಲೆ ಅಡಿಕೆ, ಮಜ್ಜಿಗೆ ಹುಳಿ ಜೊತೆ ಬಿಟ್ಟರೆ ಮುದುಕಿಗೆ ಇನ್ನು ಯಾವುದೂ ಇಲ್ಲ."

ಆಗ ಅವನ ಮುಖದಲ್ಲಿ ಒಂದು ಸಣ್ಣ ನಗು ಕಾಣಿಸಿತು.

"ನಾವು ಬೇರೆ ಹುಡುಗರು ಬರೋದಕ್ಕೆ ಮೊದಲು ಒಳ್ಳೆ ಸ್ಥಳ ಹಿಡಿದುಕೊಳ್ಳೋಣ ಬಾ."

ಅವನಿಗೆ ಅದು ಸರಿ ಎನ್ನಿಸಿತು.

"ಎಡ ಭಾಗದ ಕಂಬದ ಹತ್ತಿರ ಕುಳಿತರೆ ಒಳ್ಳೆಯದು."

ಅವಳು ಮುಂದೆ ಹೋದಳು.

ಅಪ್ಪಣ್ಣ ಅವಳನ್ನು ಹಿಂಬಾಲಿಸಿದ.

* * * * *

ಹೊರಗಿನ ಅಂಗಳದಿಂದ ಥಟ್ಟನೆ ಘಂಟೆಗಳನ್ನು ಬಾರಿಸುತ್ತಿದ್ದದ್ದು ಕೇಳಿ ಬಂದಿತು. ಮಾಳು ಉತ್ಸಾಹದಿಂದ ಅವನನ್ನು ನೋಡುತ್ತ ಹೇಳಿದಳು:

"ಈಗ ಶುರುವಾಗುತ್ತೆ."

ಚಪ್ಪರವನ್ನು ನಾಲ್ಕು ಸುತ್ತೂ ತೆಂಗಿನ ಎಳೆಯ ಗರಿಗಳನ್ನೂ ಮಾವಿನ ಎಲೆಯ ತೋರಣಗಳನ್ನೂ ಕಟ್ಟಿ ಅಲಂಕರಿಸಿದ್ದಾರೆ. -

ಮಂಡಲ ಬರೆದಾಗಿತ್ತು. ಅಕ್ಕಿಯ ಹಿಟ್ಟು, ಅರಸಿನದ ಪುಡಿ, ಸುಣ್ಣ ಮತ್ತು ಅರಸಿನವನ್ನು ಬೆರಸಿದ ಕೆಂಪು ಪುಡಿಗಳನ್ನು ಉಪಯೋಗಿಸಿ ಮಂಡಲವನ್ನು ಬರೆದಿದ್ದರು. ಹೆಣೆದುಕೊಂಡು ಬಿದ್ದಿರುವ. ಹೆಡೆ ಬಿಚ್ಚಿದ ಎರಡು ಉಗ್ರ ಸರ್ಪಗಳ ಚಿತ್ರ.

ದೊಡ್ಡ ಚಪ್ಪರದ ನಡುವೆ ಬಾಳೆ ಮರದ ತುಂಡುಗಳಿಂದ ಮತ್ತೊಂದು ಸಣ್ಣ ಚಪ್ಪರವನ್ನು ನಿರ್ಮಿಸಿದ್ದಾರೆ. ಅದರ ಮೇಲೊಂದು ಕೆಂಪು ಬಟ್ಟೆಯನ್ನು ಕಟ್ಟಿದ್ದಾರೆ. ಆ ಚಪ್ಪರದಷ್ಟು ಅಗಲಕ್ಕೂ ನೆಲದ ಮೇಲೆ ಮಂಡಲ ಬರೆದಿದ್ದಾರೆ.

ಪುಳ್ಳುವನ್ ರಾಮು, ತೂತು ಕರಟದಲ್ಲಿ ಆ ಪುಡಿಗಳನ್ನು ಒಂದೊಂದಾಗಿ ತುಂಬಿ ಕೊಂಡು. ಉಯು[1] ಮುಸಿ ಹರಡಿದ ನೆಲದ ಮೇಲೆ ನಾನಾ ರೀತಿಯಲ್ಲಿ ಮಂಡಲ ಬರೆದಿದ್ದನ್ನು ಮಾಳು ವಿವರಿಸಿದಳು.

---

1 ಉಯ್ಯು.

"ನಾಲ್ಕು ಬಾಳೆಯ ಕಂಬದ ಹತ್ತಿರವೂ ದೀಪ ಹಚ್ಚಿಡಿ."

—ಪುಳ್ಳುವನ್ ರಾಮು ಅಂಗಳದ ಬಾಗಿಲಿನಿಂದ ಕೂಗಿ ಹೇಳಿದ.

ಹೊರಗೆಲ್ಲ ಸಂಜೆಯ ಸೂರ್ಯನ ಕಿರಣ ಮರೆಯಾಗಿ ಕತ್ತಲು ಆವರಿಸುತ್ತಿತ್ತು.

ಬಾಳೆಯ ಕಂಬಗಳ ಪಕ್ಕದಲ್ಲಿ ನಾಲ್ಕು ಮೂಲೆಗಳಲ್ಲಿಯೂ ನಾಲ್ಕು ತೂಗು ದೀಪಗಳನ್ನು ಹೊತ್ತಿಸಿ ತೂಗು ಹಾಕಿದರು. ದೊಡ್ಡ ಚಪ್ಪರದಲ್ಲಿ ಏಳು ಬತ್ತಿಗಳು ಉರಿಯುತ್ತಿದ್ದ ಮೂರು ದೊಡ್ಡ ದೀಪದ ಕಂಬಗಳು ಉರಿಯುತ್ತಿದ್ದುವು.

"ಪೂಜೆ ಸಾಮಾನ್ನೆಲ್ಲ ತಂದಿಡಿ" ರಾಮನ್ ಮತ್ತೆ ಕೂಗಿ ಹೇಳಿದ.

ಮೊನೆ ಬಾಳೆ ಎಲೆಗಳಲ್ಲಿ ಅವಲಕ್ಕಿ. ಅರಳು. ಅಕ್ಕಿ. ತುಳಸಿ ಹೂ ತುಂಬಿಕೊಂಡು ಬಂದು, ಅಲ್ಲಿ ತಂದಿಟ್ಟರು.

"ಕಳತ್ತಿಲ್ ಕಮ್ಮರೇ"

"ಓಯ್"

ಹೊಸ ಕಚ್ಚೆ ಪಂಚೆ ಉಟ್ಟಿದ್ದ ಒಬ್ಬ ಮನುಷ್ಯ ಚಪ್ಪರದೊಳಕ್ಕೆ ಬಂದ. ಮಾಳು ಅಪ್ಪಣ್ಣಿಗೆ ಅವನನ್ನು ತೋರಿಸಿ ಹೇಳಿದಳು:

"ಅವನೇ ಕಳತ್ತಿಲ್ ಕಮ್ಮಾಳ್. ಪೂಜೆ ಮಾಡೋನು."

ಕೈಕಾಲು ಮುಖ ತೊಳಕೊಂಡು ಬಂದು. ನಾಗದೇವರ ಧ್ಯಾನ ಮಾಡಿ, ಬಲಗಾಲಿಟ್ಟು. ಬಾಳೆ ಚಪ್ಪರ ಬಳಸಿಗೊಂಡು ಬಂದು, ಪೀಠದ ಹತ್ರ. ಪೂರ್ವಕ್ಕೆ ತಿರುಗಿ, ಕೂತುಕೋಬೇಕು."

—ಪುಳ್ಳುವನ್ ರಾಮನ್ ಹಾಡಿನ ಹಾಗೆ ಹೇಳುತ್ತಾನೆ. ಪೂಜಾರಿ ಅದನ್ನನುಸರಿಸುತ್ತಾನೆ.

"ಬಾಳೆ ಕಂಬದ ಹತ್ತಿರ ಅಕ್ಕಿ ತೆಂಗಿನ ಕಾಯಿ ಇಡಬೇಕು."

ರಾಮನ್ ಹೇಳಿದಂತೆ ಕೇಳುತ್ತಾ ಪೂಜೆಗೆ ತೊಡಗಿದ. ಪೂಜೆ ಮಾಡಿ. ನಮಸ್ಕರಿಸಿ, ಗಿಂಡಿಯ ಬಾಯಿಯನ್ನು ಗಟ್ಟಿಯಾಗಿ ಮುಚ್ಚಿ ಹಿಡಿದುಕೊಂಡು. ಅದರ ಕೊಂಬಿನಿಂದ ಬೀಳುವ ನೀರನ್ನು ಪ್ರದಕ್ಷಿಣೆ ಮಾಡುತ್ತ ಚಪ್ಪರದ ಸುತ್ತ ಹಾಕಿದ.

ಪೂಜಾರಿ ಚಪ್ಪರದಿಂದ ಒಂದು ಕಡೆಗೆ ಸರಿದು ನಿಂತುಕೊಂಡ ಮೇಲೆ ವಾದ್ಯಗಳು ಒಟ್ಟಿಗೆ ಮೊಳಗಿದುವು. ಮಳೆಗಾಲ ಪ್ರಾರಂಭದ ಅರ್ಧ ರಾತ್ರಿಯಲ್ಲಿ ಅನಿರೀಕ್ಷಿತವಾಗಿ ಅಡ್ಡ ಮಳೆಯ ಹಾಗೆ ಘಯುಗೊಳಿಸಿತು ಆ ಧ್ವನಿ.

ಚಪ್ಪರದ ಇನ್ನೊಂದು ತುದಿಯಲ್ಲಿ ಪುಳ್ಳುವರೂ ಅವರ ಹೆಂಗಸರು ಮಕ್ಕಳೂ ಕುಳಿತುಕೊಂಡಿದ್ದರು. ಮೂರು ದೊಡ್ಡ ಘಟಗಳು, ಮೂರು ಸಣ್ಣ ಘಟಗಳು; ಎರಡು ವೀಣೆಗಳು. ದೊಡ್ಡ ಘಟಗಳು ಶಬ್ದ ಮಾಡುವಾಗ ಸಣ್ಣ ಘಟಗಳ ಮತ್ತು ವೀಣೆಗಳ

ಶಬ್ದ ಆ ಶಬ್ದದಲ್ಲಿ ಬೆರೆತು ಹೋಗುತ್ತಿತ್ತು. ರಾವಣನ ಹೆಂಡತಿಯೆಂದು ಮಾಳು ತೋರಿಸಿದಾಕೆಯೇ ಹಾಡು ಹೇಳುತ್ತಿದ್ದದ್ದು.

"ಶ್ರೀ ಮಹಾದೇವನ......

"ಶ್ರೀ ಪೃಥ್ವಿಪ ಘಟೆಯಿಂದ......

ಅಪ್ಪಣ್ಣಿಗೆ ಆ ಹಾಡಿನಲ್ಲಿ ಅಷ್ಟೊಂದು ಸ್ವಾರಸ್ಯವಿದ್ದಂತೆ ತೋರಲಿಲ್ಲ. ಅಲ್ಲಿಗೆ ಬಂದಿದ್ದ ಜನರನ್ನೆಲ್ಲ ಒಂದು ಕಡೆಯಿಂದ ನೋಡುತ್ತಿದ್ದ. ಅವನು ಕುಳಿತ್ತಿದ್ದ ದಿಣ್ಣೆಯ ಕೆಳಗೆ ಚಾಪೆಯ ಮೇಲೆ ಅನೇಕ ಜನರು ಕುಳಿತಿದ್ದರು. ಬತ್ತಾಯದ ಮನೆಯ ಗೋಡೆಯನ್ನು ಒರಗಿಕೊಂಡು ನಾಲ್ಕೈದು ಮಂದಿ ಯುವಕರು ನಿಂತಿದ್ದರು. ಅವರ ಹಿಂದೆ ಚಾಪೆಯ ಮೇಲೆ ತುಂಬ ಹೆಂಗಸರು ಕುಳಿತಿದ್ದರು. ಪಡಸಾಲೆಯಲ್ಲೂ ಹೆಂಗಸರು.

ಅಂಗಳದಲ್ಲಿ ಬೆಳ್ಳನೆಯ. ದಪ್ಪನೆಯ. ಉದ್ದನೆಯ ಒಬ್ಬಾತ ಮರದ ಪಾದರಕ್ಷೆಗಳನ್ನು ಹಾಕಿಕೊಂಡು ಸಟ್ಟಗೆ ನಡೆದಾಡುತ್ತಿದ್ದ. ಹತ್ತಿರದಲ್ಲಿ ಎಲ್ಲಿಯಾದರೂ ಪೆಟ್ಟಿಗೆ ಶಬ್ದ ಕೇಳಿ ಬರುತ್ತಿದ್ದರೆ ಒಂದು ಸಲ ದಿಟ್ಟಿಸಿ ನೋಡುತ್ತಿದ್ದ. ಭಯಪಡಿಸುವ ಯಾವುದೋ ಒಂದು ಬಗೆಯ ಕೆಂಪು ಆ ಮುಖದಲ್ಲಿತ್ತು.

ಅಪ್ಪಣ್ಣ ಮೆಲ್ಲಗೆ ಮಾಳು ಹತ್ತಿರ ಕೇಳಿದ:

"ಅಲ್ಲಿ ತಿರುಗಾಡ್ತಿರೋದು ಯಾರು?"

ಅವಳು ಪಿಸುದನಿಯಲ್ಲಿ ಹೇಳಿದಳು:

"ದೊಡ್ಡ ಮಾವ"

ದೊಡ್ಡ ಮಾವ! ಅದನ್ನು ಕೇಳಿ ಅಪ್ಪಣ್ಣಿಯ ಕರುಳು ಹಿಂಡಿದಂತಾಯಿತು. ಆ ಕೆಂಪು ಮುಖದ ಕಡೆಗೆ ಎರಡನೆಯ ಸಲ ನೋಡಲು ಅವನಿಗೆ ಧೈರ್ಯವಿರಲಿಲ್ಲ. ಇವರೇ ದೊಡ್ಡ ಮಾವ!

ಇವರೇ ನಾ......

ಬಡಗು ಭಾಗದ ಬಾಳೆಯ ಕಂಬದ ಹತ್ತಿರ ಇದ್ದ ದೊಡ್ಡ ದೀಪದ ಕಂಬದ ಬತ್ತಿಯನ್ನು ಒಬ್ಬಾತ ಬಾಳೆ ಪಟ್ಟೆಯ ಚೂರಿನಿಂದ ಮುಂದಕ್ಕೆ ನೂಕುತ್ತಿದ್ದ. ಕಪ್ಪನೆಯ, ಮುಂದಕ್ಕೆ ಬಾಗಿದ್ದ ತೆಳ್ಳನೆಯ ವ್ಯಕ್ತಿ.

"ಅವರು ನಮ್ಮ ತಂದೆ."

ಅದನ್ನು ಕಟ್ಟಿಕೊಂಡು ತನಗೇನಾಗಬೇಕು? ಅವನು ಅದನ್ನು ಕಿವಿಗೊಟ್ಟು ಕೇಳಿಸಿಕೊಳ್ಳಲಿಲ್ಲ.

"ಅಪ್ಪಣ್ಣಯ್ಯಣ್ಣ ಕುಟ್ಟಿ ಮಾವ ಅಂತ ಕರೆಯೋದು ಅಲ್ಲ?"

ದೊಡ್ಡ ಮಾವ.

ಕುಟ್ಟಿ ಮಾವ.

ಇವರಲ್ಲದೆ ಇನ್ನೂ ಜನರಿದ್ದಾರೆ. ಹುಡುಗರ ಗುಂಪಿನಲ್ಲಿ ಭಾಸ್ಕರ, ಕೃಷ್ಣನ್ ಕುಟ್ಟಿ ಮುಂತಾದವರು. ಸ್ತ್ರೀಯರ ಸಮೂಹದಲ್ಲಿ ದೊಡ್ಡಮ್ಮನೂ ಇದ್ದಾರೆ. ಮತ್ತೆ—

ಅವಳಿಗೆ ಗೊತ್ತಿದೆ. ಅವಳ ಹತ್ತಿರ ಕೇಳಿದರೆ ಸಾಕು; ತಿಳಿಯುತ್ತದೆ. ಅಜ್ಜಿ, ಅತ್ತೆ, ಮಕ್ಕಳು. ಅಮ್ಮನಿಗೆ ಒಬ್ಬಳು ಅಕ್ಕನೂ ಇದ್ದಾರೆ. ಅವರ ಹೆಸರೇನಿರಬಹುದು?

ಒಂದನ್ನೂ ಕೇಳಬಾರದು. ಇಲ್ಲಿಗೆ ಬರುವ ಮೊದಲು ಇದನ್ನೆಲ್ಲ ಆಲೋಚಿಸಿಕೊಂಡು ಬರಲಿಲ್ಲ. ಬಂದ ಕೂಡಲೇ ಇಲ್ಲಿಯ ಹುಡುಗರ ಜೊತೆಯಲ್ಲಿ ಸೇರಿಕೊಂಡು ಇಲ್ಲೆಲ್ಲ ಓಡಾಡಬಹುದು. ಮನೆಯೊಳಗೆ, ಮಹಡಿಯ ಮೇಲೆ, ಬತ್ತಾಯದ ಮನೆಯಲ್ಲಿ, ಚಪ್ಪರದೊಳಗೆ, ಮನೆಯ ಮುಂಭಾಗದಲ್ಲಿ ಎಲ್ಲ ಕಡೆಯಲ್ಲೂ ಓಡಾಡಬಹುದು ಎಂದು ಭಾವಿಸಿದ್ದ. ಬರುವಾಗ ಮನಸ್ಸು ತುಂಬ ಉತ್ಸಾಹದಲ್ಲಿತ್ತು.

ಅಂಗಳದ ಕಡೆಯಿಂದ ಬಂದದ್ದಲ್ಲ. ಗುಡ್ಡ ಇಳಿದು ಕಾಲುದಾರಿಗೆ ಬಂದಾಗ ಅವನು ನಿಂತುಕೊಂಡ. ಮುತ್ತಜ್ಜಿ ಇನ್ನೂ ತುಂಬ ದೂರದಲ್ಲಿ ಬರುತ್ತಿದ್ದಳು. ಅದೇ ಅಲ್ಲಿ ಕಾಣುವುದೇ ಕುಟುಂಬದ ಮನೆ.

ಮನೆಯ ಅಂಗಳದ ಹತ್ತಿರಕ್ಕೆ ಬಂದಾಗ ಮುತ್ತಜ್ಜಿ ಹೇಳಿದಳು:

"ಕೆಳಗಿನ ಪಡಸಾಲೆಗೆ ಹೋಗಿ ಹುಡುಗರ ಜೊತೆಯಲ್ಲಿ ಕೂತುಕೊ:"

ದಿಗ್ಭ್ರಾಂತನಾಗಿ ನಿಂತುಕೊಂಡ. ದೊಡ್ಡ ಅಂಗಣಗಳು. ನೆಲ್ಲು ಹುಲ್ಲು ಗುಡ್ಡೆಗಳು, ಏಳೋ ಎಂಟೋ ದನಕರುಗಳನ್ನು ಕಟ್ಟಿ ಹಾಕುತ್ತಿದ್ದ ಕೊಟ್ಟಿಗೆ.

ಹಿಂದಿರುಗಿ ನೋಡಿದಾಗ ಮುತ್ತಜ್ಜಿ ಚೌಕಟ್ಟಿನ ಮನೆಯ ಒಂದಿನ ಬಡಗು ಭಾಗಕ್ಕೆ ಹೋಗಿ ಆಗಿತ್ತು. ಅವನು ಒಬ್ಬನೇ ಆಗಿ ಉಳಿದ.

ಅನೇಕರು ಪಡಸಾಲೆಯಲ್ಲೂ ಹೊರಗೂ ಇದ್ದರು. ಯಾರೂ ಅವನನ್ನು ಗಮನಿಸುವಂತೆ ಕಾಣಲಿಲ್ಲ. ಮೂಡು ಭಾಗದ ಪಡಸಾಲೆಯಲ್ಲಿ ಒಂದು ಕಡೆ ಕುಳಿತುಕೊಂಡ. ಅಲ್ಲಿ ಯಾರೂ ಇಲ್ಲ. ಒಳಗಿನಿಂದ ಹೆಂಗಸರ ಗದ್ದಲವೂ ಮಕ್ಕಳು ಅಳುವುದೂ ಕೇಳಿಸುತ್ತಿತ್ತು. ಅಂಗಳದಲ್ಲಿ ಕೆಲವು ಹುಡುಗರನ್ನು ನೋಡಿದ ಗೊತ್ತಿದ್ದವರು ಯಾರಾದರೂ ಇದ್ದಾರೆಯೇ ಎಂದು. ಯಾರೂ ಇಲ್ಲ. ಅವನು ಮುದುರಿಕೊಂಡು ಕುಳಿತಿದ್ದ.

ಯಾರಾದರೂ ಬಂದು ಏನಾದರೂ ಅಂದರೋ?

ಯಾರಾದರೂ ಬರುತ್ತಾರೆಂದೋ, ಏನಾದರೂ ಕೇಳುತ್ತಾರೆಂದೋ ತಿಳಿಯದು. ಆದರೂ ಒಂದು ರೀತಿಯ ಭಯ.

ಯಾರೂ ಏನನ್ನೂ ಅನ್ನಲಿಲ್ಲ. ಯಾರೂ ಅವನ ಕಡೆಗೆ ಕಣ್ಣೆತ್ತಿಯೂ ನೋಡಲಿಲ್ಲ. ಆಗ ಅವನಿಗೆ ಅನ್ನಿಸಿತು: ಬರಬಾರದಾಗಿತ್ತು; ಬರಬಾರದಾಗಿತ್ತು......

'ನಾನೂ ಈ ಮನೆಯವನೇ' ಎಂದು ಗಟ್ಟಿಯಾಗಿ ಕೂಗಿ ಹೇಳಬೇಕು ಎನ್ನಿಸಿತು. ತನ್ನನ್ನು ಯಾರೂ ನೋಡದೆ ಮಾತನಾಡದೆ ಇರುವುದನ್ನು ಕಂಡು ಅಸಹ್ಯವೆನಿಸಿತು.

ನಾನು ವಡಕ್ಕೇಪಾಟ್‌ನವನು.

ನನ್ನ ಹೆಸರು ವಿ. ಅಪ್ಪುಣ್ಣಿ ಎಂದು.

ಕ್ಲಾಸಿನಲ್ಲಿ ಹಾಜರಿ ಕರೆಯುವುದೂ ಹಾಗೆಯೇ.

ವಿ. ಎಂದರೆ ವಡಕ್ಕೇಪಾಟ್ ಎಂದು.

ಹಾಗೆ ಆಲೋಚನೆ ಮಾಡುತ್ತ ಕುಳಿತಿದ್ದಾಗ "ಹುಡುಗರೆಲ್ಲ ಊಟಕ್ಕೆ ಕುಳಿತುಕೊಳ್ಳಿ" ಎನ್ನುವ ಶಬ್ದ ಕೇಳಿಸಿತು. ಹುಡುಗರ ಊಟಕ್ಕೆ ಎಲೆಹಾಕಿತ್ತು.

"ಅಪ್ಪುಣ್ಣೀ. ವಾಸು. ಪ್ರಭೆ—ಎಲ್ಲ ಕುಳಿತುಕೊಳ್ಳಿ"

"ಎಲ್ಲಿ ನಮ್ಮ ಕುಟ್ಟಿ ಶಂಕರನ್?"

"ನಾಣು. ಕುಂಞಕುಟ್ಟನನ್ನ ನಿನ್ನ ಹತ್ತಿರ ಕೂರಿಸಿಕೊ."

ಹಲವರು ಹಲವರನ್ನು ಕೇಳುತ್ತಿದ್ದುದು ಕೇಳಿಸಿತು. ಯಾರೂ ಅವನನ್ನು ಮಾತನಾಡಿಸಲಿಲ್ಲ.

ಅವನಿಗೆ ಈ ಊಟ ಬೇಡ.

ಊಟಕ್ಕೆ ಅಷ್ಟೊಂದು ಆಸೆಪಟ್ಟುಕೊಂಡು ಬಂದವನಲ್ಲ. ಒಳಗೆ ದ್ವೇಷ ಕಿಡಿಕಾರಿತು. ಎಲ್ಲರ ಮೇಲೂ ಸಿಟ್ಟು ಬಂದಿತು. ಅವನಿಗೆ ಇವರ ಊಟ ಹುಲ್ಲಿಗಿಂತ ಕಡೆ.

ಹೇಳಿದಷ್ಟನ್ನು ಎಣಿಸಿ ಆಡುತ್ತಿದ್ದ ಒಬ್ಬನೇ ಒಬ್ಬ ಪಗಡೆ ಆಟಗಾರನಿದ್ದದ್ದು. ಅದು ಅವನ ತಂದೆ. ಕೋಂದುಣ್ಣಿ ನಾಯರ್......

ನಾನು ಕೋಂದುಣ್ಣಿ ನಾಯರ ಮಗ, ತಂದೆ ಇರಬೇಕಾಗಿತ್ತು ಈಗ......

ತಂದೆಯನ್ನು ಕುರಿತು ಆಲೋಚಿಸಿದಾಗ ಸೈದಾಲಿಕುಟ್ಟಿಯ ನೆನಪಾಯಿತು. ತುಂಡು ತಲೆಗೂದಲೂ. ಕೆಂಡದಂತಹ ಕಣ್ಣುಗಳೂ......ಅವನೇ......

'ಭಗವತೀ. ಇದಕ್ಕೆ ಪ್ರತೀಕಾರ ತೀರಿಸಬೇಕು !'

ಆಗ ಮಾಳು ಬಂದದ್ದು.

ಅವಳು ಹತ್ತಿರವೇ ಕುಳಿತು ಪುಳ್ಳುವರ ಹೆಂಗಸರು ಹಾಡುವುದನ್ನು ಕೇಳುತ್ತಾ ಕುಳಿತಿದ್ದಳು.

ಈಗ ದೊಡ್ಡ ಘಟಗಳು ಶಬ್ದ ಮಾಡುತ್ತಿವೆ. ನಿಧಾನವಾಗಿ ತಾಳ ಹಾಕುತ್ತಿದ್ದಾರೆ. ವೀಣೆಗಳ ಶಬ್ದವೂ ಕೇಳಿಸುತ್ತಿದೆ.

'ಕರಿನಾಗರವನ್ನು ಕುರಿತ ಹಾಡು ಹಾಡುತ್ತಿದ್ದಾರೆ.'

ಮಾಳು ಹೇಳಿದಳು—ಅವನು ರಾಮನ್‌ನ ತಮ್ಮ.

ಚಪ್ಪರದಲ್ಲಿ ರಾಮನ್‌ನ ಹೆಂಡತಿ ಹಾಡತೊಡಗಿದಳು. ಅವಳು ಹಾಡುವುದಕ್ಕಾರಂಭಿಸಿದಾಗ ರಾಮನ್ ಎದ್ದು ನಿಂತು ಪೂಜಾರಿಯನ್ನು ಕರೆದು ಏನೋ ಹೇಳಿದ್ದಕ್ಕೆ ಪೂಜಾರಿ ಚಪ್ಪರದಿಂದ ಹೊರಗೆ ಬಂದು, ಹಾಡಿನ ಧ್ವನಿಗಿಂತ ದೊಡ್ಡದಾಗಿ ಹೇಳಿದ:

"ನಾಟ್ಯ ಆಡುವವರು ಬರಲಿ."

ಜನರ ಕಣ್ಣುಗಳು ಪಡಸಾಲೆಯ ಕಡೆಗೆ ತಿರುಗಿದುವು. ಅಕ್ಕಿಯನ್ನೂ ದೀಪವನ್ನೂ ಅಡಕೆಯ ಹೊಂಬಾಳೆಯನ್ನೂ ಇಟ್ಟ ಹೊಳೆಯುವ ಹರಿವಾಣವನ್ನು ಹಿಡಿದು ನಿರಿಗೆ ನಿರಿಗೆಯ ಉಡುಗೆಯನ್ನುಟ್ಟಿದ್ದ ಇಬ್ಬರು ಹುಡುಗಿಯರು ಚಪ್ಪರದೊಳಕ್ಕೆ ಬಂದರು.

"ಮೂಡು ಬಾಗಿಲಿನಲ್ಲಿ ನಿಂತು ನಮಸ್ಕಾರ ಮಾಡಿ."

ರಾಮನ್‌ನ ನಿರ್ದೇಶನವನ್ನು ಅನುಸರಿಸಿ ಅವರು ನಮಸ್ಕರಿಸಿದರು.

"ಪೂಜಾರಿ ಸುರಿಯುವ ನೀರಿನಿಂದ ಕೈಕಾಲು ಮುಖ ತೊಳೆದುಕೊಳ್ಳಿ."

"ಮಂಡಲವನ್ನು ಮೂರು ಸುತ್ತು ಪ್ರದಕ್ಷಿಣೆ ಮಾಡಿ ನಾಗಗಳ ತಲೆ ಕಡೆಗೆ ನೋಡುತ್ತ ಕುಳಿತುಕೊಳ್ಳಿ."

ಅವರು ಪ್ರದಕ್ಷಿಣೆ ಮಾಡಿ ಸರ್ಪಗಳ ಬಾಲಗಳ ಹತ್ತಿರ ಕುಳಿತುಕೊಂಡರು.

ಅಕ್ಕಿಯನ್ನೂ ಹೂವನ್ನೂ ಇಟ್ಟು ನಾಗದೇವರನ್ನು ಮನಸ್ಸಿನಲ್ಲಿಯೇ ಧ್ಯಾನಿಸ ಬೇಕು."

"ಹಿಂಗಾರ ಕೈಯಲ್ಲಿ ಹಿಡಿದುಕೊಳ್ಳಿ."

ಗಿಂಡಿಯಿಂದ ಅಡಕೆ ಹಿಂಗಾರವನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ಅವರು ಹೆಣೆದುಕೊಂಡಿದ್ದ ಸರ್ಪಗಳ ಹೆಡೆಯನ್ನೇ ನೋಡುತ್ತ ಕುಳಿತುಕೊಂಡರು.

ಆಶ್ಚರ್ಯದಿಂದ ಬಿಟ್ಟ ಕಣ್ಣು ಬಿಟ್ಟ ಹಾಗೆ ಅಪ್ಪಣ್ಣ ಆ ಹುಡುಗಿಯರನ್ನು ನೋಡಿದ. ಎಡಗಡೆ ಕಪ್ಪನೆಯ ತೆಳ್ಳನೆಯ ಕೋಲು ಮುಖದ ಒಬ್ಬಳು ಹುಡುಗಿ. ಕಂಬ ಮರೆಯಾಗಿದ್ದುದರಿಂದ ಅವಳು ಸರಿಯಾಗಿ ಕಾಣಿಸುತ್ತಿರಲಿಲ್ಲ. ಮತ್ತೊಬ್ಬಳು ಬೆಳ್ಳಗೆ, ತೆಳ್ಳಗೆ ಕಾಣುವುದಕ್ಕೆ ಅಂದವಾಗಿದ್ದ ಹುಡುಗಿ. ಸೊಂಟದಿಂದ ಮೇಲಕ್ಕೆ, ಅವಳು ಕೈಯಲ್ಲಿ ಹಿಡಿದಿದ್ದ ಹಿಂಗಾರದ ಬಣ್ಣದಂತಿದ್ದ ಮೈಯಲ್ಲಿ ಬಟ್ಟೆಯೇ ಇಲ್ಲ. ಅಯ್ಯೋ ಈ ಹುಡುಗಿಯರಿಗೆ ನಾಚಿಕೆಯಾಗುವುದಿಲ್ಲವೆ ಎನ್ನಿಸಿತು ಮೊದಲು. ನೋಡುತ್ತಾ ನೋಡುತ್ತಾ ಇದ್ದಂತೆ ಎದೆಯ ಸುತ್ತಲೂ ಇದ್ದ ತೂಗು ದೀಪಗಳ ಕಾಂತಿಯೇ ಹಣ್ಣಾ ಯಿತೋ ಎನ್ನುವಂತಿತ್ತು. ಅರೆ ಮುಚ್ಚಿದ ಕಣ್ಣುಗಳು. ದಿಟ್ಟಿಸಿ ನೋಡಿ, ನಿದ್ದೆ ಮಾಡು ತ್ತಿಲ್ಲ ಎಂದುಕೊಂಡ. ಸೊಂಟದಿಂದ ಕೆಳಕ್ಕೆ ನಿರಿಗೆ ನಿರಿಗೆಗಳಿರುವ ಉಡುಪು ಮಾತ್ರವೇ ಇದ್ದ ಆ ಹುಡುಗಿಯನ್ನು ನೋಡುತ್ತ ಕುಳಿತ್ತಿದ್ದಾಗ ಎಳೆ ಬಾಳೆ ಕಂದಿನ ಸುಳಿಯನ್ನು ನೋಡಿದಷ್ಟು ಸಂತೋಷವಾಯಿತು.

"ಅದು ಯಾರು?"

ಅವನು ಮಾಳುವನ್ನು ಕೇಳಿದ.

"ಅವಳು ಅಮ್ಮಿಣಿ ಅಕ್ಕ ಅಲ್ವಾ? ದೊಡ್ಡಮಾವನ ಕಿರಿಯ ಮಗಳು. ಮತ್ತೊ ಬ್ಬಳು ತಂಗಕ್ಕ."

'ಪಾತ್ರೊಪ್ಪುಳು ಯಾರಾದರೂ ಆಗಿರಲಿ.'

ಹಾಡಿನ ವೇಗವೂ ಘಟಗಳ ಶಬ್ದವೂ ಸ್ವಲ್ಪ ಸ್ವಲ್ಪವಾಗಿ ಹೆಚ್ಚಿತು.

ಈಗ ನಾಗಬನದಲ್ಲಿ ನಾಗಗಳು ನಿದ್ದೆಯಿಂದ ಎದ್ದು ಹೆಡೆಯಾಡಿಸುತ್ತಿರಬೇಕು.

ಮಂಡಲದಲ್ಲಿ ಸುಳಿದುಕೊಂಡು ಬಿದ್ದಿದ್ದ ಸರ್ಪಗಳನ್ನೂ, ಅವುಗಳನ್ನೇ ನೋಡುತ್ತ ಕುಳಿತಿರುವ, ಆ ತೂಗು ದೀಪಗಳ ಕಾಂತಿಯೇ ಮೈವೆತ್ತಂತೆ ಹೊಳೆಯುವ ಹುಡುಗಿಯನ್ನೂ ಅವನು ಮತ್ತೆ ಮತ್ತೆ ನೋಡಿದ. ಅವಳ ಕತ್ತಿನಲ್ಲಿ ಬಿಗಿಯಾಗಿ ಕಟ್ಟಿದ್ದ ಪವನ ಆಭರಣ ಥಳ ಥಳನೆ ಹೊಳೆಯುತ್ತಿದೆ......ಮರೆ ಮಾಡಿಕೊಳ್ಳುವ ಎದೆಯಲ್ಲಿ ದೀಪ ನಾಳಿಕೆಗಳು ಪ್ರತಿಬಿಂಬಿಸುತ್ತಿವೆ......ಆಗ ನಿಧಾನವಾಗಿ ಅವನ ಕಣ್ಣೆದುರಿನಿಂದ ಚಪ್ಪರವೂ ಜನರೂ ಅದೃಶ್ಯವಾದಂತಾಯಿತು. ಕಾಡಿನಲ್ಲಿ ಆಕಾಶವೆತ್ತರಕ್ಕಿರುವ ಒಂದು ವೃಕ್ಷ. ಅದರ ಕೊಂಬೆಯಲ್ಲಿ ಒಬ್ಬ ರಾಜ ಕುಮಾರ ಕುಳಿತಿದ್ದಾನೆ. ತಲೆಯ ಮೇಲೆ ಜರತಾರಿಯ ಪೇಟವಿದೆ. ಮಿರ ಮಿರನೆ ಮಿಂಚುವ ರೇಷ್ಮೆ ಉಡುಪು ಧರಿಸಿದ್ದಾನೆ. ಆ ಉಡುಪಿನಲ್ಲಿ ಅಲ್ಲಲ್ಲಿ ಅಲಂಕಾರವಾಗಿ ಹೆಣೆದ ಮುತ್ತು ರತ್ನಗಳು ಪ್ರಕಾಶಿಸುತ್ತಿವೆ. ಮರದ ಕೆಳಗೆ ಕುದುರೆ ಮೇಯುತ್ತಾ ನಿಂತಿದೆ. ತನ್ನ ರಾಜ್ಯವನ್ನು ನೋಡಲು ಅನುಮತಿಯನ್ನು ಪಡೆದು ಬಂದಿದ್ದಾನೆ ಆ ರಾಜ ಕುಮಾರ. ವೇಗವಾಗಿ ಕಾಡಿನೊಳಕ್ಕೆ ನುಗ್ಗಿದಾಗ ದಾರಿ ತಪ್ಪಿ ಹೋಗಿದೆ. ಜೊತೆಯಲ್ಲಿ ಬಂದ ಮಂತ್ರಿ ಕುಮಾರನೂ ಇಲ್ಲ......

ಈ ರಾತ್ರಿಯನ್ನು ಹೇಗಾದರೂ ಕಳೆಯಬೇಕು......

ಆಗ ಅವನು ಕಾಡಿನಲ್ಲೆಲ್ಲ ಘೋರ್ಗರೆಯುತ್ತ ಒಂದು ಉಗ್ರ ಸರ್ಪ ಹರಿದು ಬರುತ್ತಿರುವುದನ್ನು ಕಾಣುತ್ತಾನೆ. ಸರ್ಪದ ಬೆನ್ನಿನ ಮೇಲೆ ಒಬ್ಬ ತರುಣಿ ಸವಾರಿ ಮಾಡಿಕೊಂಡು ಬರುತ್ತಿದ್ದಾಳೆ. ಅವಳ ಕತ್ತಿನಲ್ಲಿ ವಜ್ರದ ಪದಕ ಥಳಥಳನೆ ಹೊಳೆಯುತ್ತಿದೆ... ಮಿರಮಿರನೆ ಮಿಂಚುವ ರೇಷ್ಮೆಯ ಉಡಲಿಯನ್ನುಟ್ಟಿದ್ದಾಳೆ. ಬೆನ್ನಿನ ಮೇಲೆ ನೀಳದ ಹರಿಯುವ ನೀರಿನಂತೆ ಹರಡಿದ ಕೇಶರಾಶಿ......ಅರೆ ಮುಚ್ಚಿದ ಕಣ್ಣುಗಳು......

ಘಟಗಳ ಶಬ್ದ ಥಟ್ಟನೆ ನಿಂತಿತು.

ಒಂದು ಕ್ಷಣದಲ್ಲಿ ಮತ್ತೆ ಅಪ್ಪಣ್ಣಿಯ ಕಣ್ಣುಗಳಲ್ಲಿ ಸುತ್ತಮುತ್ತ ಇದ್ದುದೇ ಕಾಣಿಸುತ್ತಿದೆ.

ಮಂಡಲದಲ್ಲಿ ಕುಳಿತ ಹುಡುಗಿಯರ ಶರೀರಗಳು ಮೆಲ್ಲ ಮೆಲ್ಲನೆ ಊಲಾಡ ತೊಡಗಿವೆ. ಕೈಯಲ್ಲಿ ಹಿಡಿದ ಹಿಂಗಾರ ಹರಡಿಕೊಳ್ಳುತ್ತಿದೆ.

ಥಟ್ಟನೆ ಮತ್ತೆ ಘಟಗಳೂ ಪೀಪೆಗಳೂ ಶಬ್ದ ಮಾಡತೊಡಗುವುವು. ಘಟಗಳನ್ನು ನುಣುಪಾದ ಸಣ್ಣ ಕಲ್ಲುಗಳಿಂದ ಕುಟುಕುತ್ತ ಶಬ್ದ ಮಾಡುತ್ತಿದ್ದರು. ಎಲ್ಲ ವಾದ್ಯಗಳೂ ಒಂದೇ ಸಲ ಶಬ್ದ ಮಾಡಿದುವು. ಹಾಡಿಗೆ ತಕ್ಕಂತೆ ತಾಳವೂ ಹೊಂದಿಕೊಂಡು ಬೀಳುತ್ತಿದೆ.

"ಆ ಹಾಡು......ಆಡುವಾಗ......

ಮಂಡಲಕೆ ಬಂದು ನೀನಾಡುವಾಗ......"

ತಾಳ ಹಾಕುವುದೂ ಹಾಡುವುದೂ ವೇಗವಾದಂತೆ ನಾಟ್ಯದ ವೇಗವೂ ಹೆಚ್ಚಿತು.

ಮಂಡಲದಲ್ಲಿ ಕಪ್ಪಾದ ಸರ್ಪಗಳಂತೆ ತಲೆಹುಡಿ ಆಡುತ್ತಿದೆ......ಗಾಳಿಗೆ ತೂಗಾಡುವ ಎಳೆ ಬಾಳೆಯ ಸುಳಿಯಂತೆ ಆ ತೆಳ್ಳನೆಯ ಬೆಳ್ಳನೆಯ ದೇಹ ಉಲಾಡುತ್ತಿದೆ.

"ಈಗ ಹಿಂಗಾರ ನೆಲಕ್ಕೆ ಮುಟ್ಟುತ್ತಿಲ್ಲ." ಮಾಳು ಹೇಳಿದಳು.

ಅವನು ಅದನ್ನು ಕೇಳಿಸಿಕೊಳ್ಳಲಿಲ್ಲ.

"ಆಡಿಕೊಂಡು......ಬಾ ನೀನು......ನಿನ್ನ ಬನದಿಂದ......"

"ಆಹಾಡು......"

"ಆಹಾಡು......"

"ಆಡಾಡು......ಆಡುವಾಗ"

ಘಟಗಳ ಕಿವಿ ಒಡೆಯುವ ಶಬ್ದ......ಮೈ ರೋಮಾಂಚನಗೊಂಡಿತು. ಅವನಿಗೆ ತಾನೂ ಒಂದು ಸಲ ನಾಟ್ಯವಾಡಿಬಿಡಲೇ ಎನ್ನಿಸಿತು.

ಕೈಯಲ್ಲಿ ಹಿಡಿದ ಹಿಂಗಾರವನ್ನು ಬಿಡದೆ ಸರ್ಪಗಳ ಹಾಗೆ ನಾಟ್ಯವಾಡಿ ಉಲಾಡುತ್ತಿದ್ದಾಗ ನೆಲದಲ್ಲಿ ಹೆಣೆದುಕೊಂಡಿದ್ದ ಸರ್ಪಗಳ ರೂಪವೆಲ್ಲ ಅಳಿಸಿ ಹೋಯಿತು.

ನುಲಿದು ಆಡುತ್ತ ಕುಳಿತಿದ್ದ ಆ ಹುಡುಗಿಯನ್ನು ನೋಡುತ್ತ ಇದ್ದಂತೆ ಅವಳು ಬದಲಾಗುತ್ತಿದ್ದಾಳೆ ಎನ್ನಿಸಿತು. ದೇಹ ಸರ್ಪವಾಗಿಯೂ ಮುಖ ಮನುಷ್ಯರದೂ ಆದ ಒಂದು ಜೀವಿ ಆ ಮಂಡಲದಲ್ಲಿ ತಲೆದೂಗುತ್ತಿದ್ದಂತೆ. ಮನುಷ್ಯ ಸ್ತ್ರೀಯ ಮುಖವಿರುವ ಸರ್ಪ ಹೆಡೆ ಬಿಚ್ಚಿ ಆಡಿದಂತೆ.

ಮಾಳು ಮತ್ತೂ ಏನನ್ನೋ ಹೇಳಿದಳು. ಅದನ್ನು ಅಪ್ಪಣ್ಣ ಗಮನಿಸಲಿಲ್ಲ. ಅರೆ ಮುಚ್ಚಿದ ಅವನ ಕಣ್ಣುಗಳಿಂದ ಹುತ್ತ, ಚಪ್ಪರ, ಮನುಷ್ಯರು, ಸುತ್ತು ಮುತ್ತು ಎಲ್ಲವೂ ಮರೆಯಾಯಿತು.

ಮನುಷ್ಯ ಸ್ತ್ರೀಯ ಮುಖವಿರುವ ಸರ್ಪ ಮಾತ್ರ ಹೆಡೆ ಬಿಚ್ಚಿ ಆಡುತ್ತಿದೆ.

ಅಲ್ಲ. ಸರ್ಪದ ಬೆನ್ನಿನ ಮೇಲೆ ಮೂಗುದಾರ ಹಿಡಿದುಕೊಂಡು ಸವಾರಿ ಮಾಡುತ್ತಿರುವ ತರುಣಿ. ಎಲ್ಲವನ್ನೂ ಕಣ್ಣು ಮುಚ್ಚಿಕೊಂಡೇ ಅವನು ಕಾಣುತ್ತಾನೆ. ಅವನೀಗ ಅಪ್ಪಣ್ಣಯಲ್ಲ. ರಾಜ ಕುಮಾರ. ತನ್ನ ರಾಜ್ಯವನ್ನು ನೋಡಲು ಬಂದು ದಾರಿ ತಪ್ಪಿದ ರಾಜ ಕುಮಾರ.

ತಣ್ಣನೆಯ ಗಾಳಿ ದೇಹದ ಮೇಲೆ ಬೀಸಿದಾಗ ಒಮ್ಮೆ ಕಣ್ಣುಬಿಟ್ಟ. ಕಾಡು, ಸರ್ಪ ಕನ್ನಿಕೆ, ಸರ್ಪಯಾವುದೂ ಇಲ್ಲ. ವೃಕ್ಷದ ಮೇಲಲ್ಲ. ಅಂಗಳದ ಅಂಚಿನಲ್ಲಿ ಬಿದ್ದಿದ್ದಾನೆ. ಮೇಲೆ ಒಡ್ಡೆ ಬಟ್ಟೆಯ ಹಾಗೆ ಮುಸುಕಾದ ಆಕಾಶ. ದೂರದ ಬಾಳೆ ತೋಟಗಳಲ್ಲಿ

ಮಂಜಿನ ಪಟಲ ತಂಗಿ ನಿಂತಿದೆ. ಕೆಳಗಿನ ಚಪ್ಪರದಲ್ಲಿ ಯಾರ್ಯಾರೋ ಎತ್ತೆತ್ತಲಾಗಿಯೋ ಮಲಗಿದ್ದರು.

ಮನೆಯ ಮುಂಬಾಗಿಲನ್ನು ತೆರೆದು ಯಾರೋ ಬೆಳಕು ಹಿಡಿದುಕೊಂಡು ಬಂದವರು ಹಾಗೆಯೇ ಹಿಂದಿರುಗಿದರು. ಒಳಗಿನಿಂದ ಒಂದು ನಾಮಜಪ ಕೇಳಿಸುತ್ತಿತ್ತು:

"ನಾರಾಯಣ, ನಾರಾಯಣ......"

ತಾನೆಲ್ಲಿದ್ದೇನೆ ಎಂದು ತಿಳಿಯಲು ಎಷ್ಟೋ ನಿಮಿಷಗಳು ಬೇಕಾದುವು.

ಚಳಿಯಾದ ಗಾಳಿ ಬೀಸಿತು. ಕಣ್ಣು ರೆಪ್ಪೆಗಳು ಭಾರವಾದ ಹಾಗೆ ತೋರುತ್ತಿದ್ದುವು. ಒಳಗಿನಿಂದ ಎಲ್ಲಿಂದ ಎಂದು ತಿಳಿಯದು, ಯಾರೋ ಸಣ್ಣ ಧ್ವನಿಯಲ್ಲಿ ಹೇಳುತ್ತಿದ್ದಾರೆ.

"ನರನಾಗಿ ಹುಟ್ಟಿ, ಭೂಮಿಯ ಮೇಲೆ......"

ಮತ್ತೆ ಕಣ್ಣು ರೆಪ್ಪೆಗಳು ಮುಚ್ಚಿದುವು.

ಪುನಃ ಕಣ್ಣು ತೆರೆದದ್ದು ಒಂದು ತಣ್ಣನೆಯ ಕೈ ತನ್ನ ಮೈಯನ್ನು ತಡವಿದಾಗಲೇ. ಬೆಚ್ಚಿ ನೋಡಿದಾಗ ಅವನ ಹತ್ತಿರದಲ್ಲಿ ಕುಕ್ಕುರುಗಾಲಿನಲ್ಲಿ ಒಬ್ಬ ಅಜ್ಜಿ ಕುಳಿತಿದ್ದರು. ತಲೆಗೂದಲೆಲ್ಲ ಬೆಳ್ಳಗಾಗಿದೆ. ಚರ್ಮವೆಲ್ಲ ಸುಕ್ಕುಗಟ್ಟಿದೆ. ಅವರು ಕೆಂಪು ಅಂಚಿನ ವಸ್ತ್ರವನ್ನು ಹೊದೆದಿದ್ದಾರೆ. ಆ ಸುಕ್ಕು ಗಟ್ಟಿದ ಕಣ್ಣುಗಳ ಕಡೆಗೆ ನೋಡಿದಾಗ ಆಕೆಯ ಮುಖವಲ್ಲಿ ಸಣ್ಣ ನಗು ಕಾಣಿಸಿತು. ತಾತ್ಕಾಲಿಕವಾಗಿ ಅವನ ಭಯ ಹೋಯಿತು.

ಏನನ್ನೋ ಹೇಳಲು ಭಾವಿಸಿದಾಗ ಅವರು ಹೇಳಿದರು:

"ಹೆದರಿಕೊಳ್ಳಬೇಡ. ನಾನು ನಿನ್ನ ಅಜ್ಜಿ."

ಅಜ್ಜಿ ! ಅವನ ತಾಯಿಯ ತಾಯಿ !

"ಎದ್ದು ಒಳಕ್ಕೆ ಬಾ."

ಅಪ್ಪಣ್ಣ ಎದ್ದು ನಿಂತು ಅವರನ್ನು ಹಿಂಬಾಲಿಸಿದ. ಬಾಗಿಲನ್ನು ತಲಪುವಷ್ಟರಲ್ಲಿ ಪಡಸಾಲೆಯಲ್ಲಿ ನಿದ್ದೆಮಾಡುತ್ತಿದ್ದ ಕೆಲವರನ್ನು ಎಡವುತ್ತಾ ಹೋಗಬೇಕಾಗಿ ಬಂದಿತು. ಚಿತ್ರ ಗೆಲಸ ಮಾಡಿದ ಹೊರ ಬಾಗಿಲನ್ನು ದಾಟಿ ತೆಂಕು ಪಾರ್ಶ್ವಕ್ಕೆ ಹೋದ. ಅದರ ಹತ್ತಿರದಲ್ಲೇ ನಡು ಅಂಗಳ. ಅದರ ಪಶ್ಚಿಮ ಭಾಗದಲ್ಲಿ ಒಂದು ದೀಪ ಉರಿಯುತ್ತಿತ್ತು.

ತೆಂಕು ಭಾಗದ ಮನೆಯ ತುಂಬ ಸ್ತ್ರೀಯರು ಮಲಗಿದ್ದರು. ನಿದ್ದೆ ಮಾಡುತ್ತಿದ್ದ ಸ್ತ್ರೀಯರ ಸಮೂಹದ ಕಡೆಗೆ ಅವನೊಂದು ಸಲ ಕಣ್ಣಾಡಿಸಿದ. ರಾತ್ರಿ ಕಂಡ ನಾಗಕನ್ನಿಕೆ ಅಲ್ಲಿರಬಹುದೇ ಎಂದು.

ನಡು ಅಂಗಳದ ಸುತ್ತಲೂ ಇರುವ ದೊಡ್ಡ ಕಂಬಗಳನ್ನು ನೋಡುವುದೇ ಒಂದು ಸಂತೋಷ.

ಆ ಕಡೆಗೆ ಬಡಗು ಮನೆ. ಕಿಟಕಿಗಳನ್ನು ತೆರೆದಿಲ್ಲ. ಕತ್ತಲೆಯೋ ಕತ್ತಲೆ. ನೆಲದಲ್ಲಿ ಯಾರೋ ಕೆಲವರು ಮಲಗಿದ್ದಂತೆ ಕಾಣಿಸಿತು. ಅಲ್ಲಿಂದ ಮುಂದೆ ಹೆಜ್ಜೆ ಹಾಕಿ ಅಟ್ಟವಿಲ್ಲದ

ಭಾಗಕ್ಕೆ ಬಂದಾಗ ಹಿಂದಿನ ದಿನ ಕಂಡ ಮಾಳು ಯಾವುದೋ ಕೆಲಸದಲ್ಲಿ ನಿರತಳಾಗಿದ್ದುದು ಕಾಣಿಸಿತು.

ಒಂದು ಕಿಟಕಿಯ ಹತ್ತಿರ ಅಜ್ಜಿ ಮಣೆಯ ಮೇಲೆ ಕುಳಿತುಕೊಂಡರು. ಅವನನ್ನು ಹತ್ತಿರ ಕರೆದು ಕೂರಿಸಿಕೊಂಡು ಹೇಳಿದರು:

"ನನ್ನ ಕಂದ, ನೀನು ಬಂದದ್ದು ನನಗೆ ಗೊತ್ತಾಗಲಿಲ್ಲ. ಕೊಟ್ಟಿಗ ಮುದುಕಿ ನನ್ನ ಹತ್ರ ಏನೂ ಹೇಳಲೇ ಇಲ್ಲವಲ್ಲೋ. ಈಗ ಮಾಳು, ಹೇಳಿದಳು."

ಅಜ್ಜಿ ಅವನ ತಲೆ ನೇವರಿಸುತ್ತ ಹೇಳಿದರು:

"ನನ್ನ ಕಂದಾ, ಎಲ್ಲ ನನ್ನ ಹಣೆ ಬರಹ."

ಸ್ವಲ್ಪ ಹೊತ್ತು ಆಲೋಚಿಸಿ ಅವರು ಮತ್ತೂ ಹೇಳಿದರು:

"ಅದೆಲ್ಲ ನನ್ನ ಹಣೆಬರಹ ಅನ್ನದೆ ಇನ್ನೇನು ಹೇಳಲಿ?"

ಅವನಿಗೆ ಹೇಳುವುದಕ್ಕೆ ಏನೂ ತೋಚುತ್ತಿಲ್ಲ. ಒಟ್ಟಿನಲ್ಲಿ ಮನಸ್ಸಿನಲ್ಲಿ ಏನೋ ತಳಮಳವುಂಟಾಗುತ್ತಿದ್ದಂತೆ ಮಾತ್ರ ತೋರಿತು.

"ಸ್ಕೂಲಿಗೆ ಹೋಗ್ತಿದ್ದೀಯಾ?"

"ಹ್ಞಂ."

"ನೀನು ಮೇಲೆ ಬರಬೇಕು. ಅವಳಿಗೆ......ಅವಳಿಗೆ......" ಅಜ್ಜಿಯ ಗಂಟಲು ಬಿಗಿದ ಹಾಗಾಯಿತು.

"ಅವಳಿಗೆ ನೀನೇ ಗತಿ."

ಅಷ್ಟರಲ್ಲಿ ಬಾಗಿಲಿನಲ್ಲಿ ಒಬ್ಬಳು ಬಂದು ಇಣಕಿ ನೋಡಿ ಹೋದಳು. ಅನಂತರ ಕೆಲವು ಸ್ತ್ರೀಯರ ಮುಖಗಳು ಬಾಗಿಲಿನ ಹತ್ತಿರ ಬಂದು ಗುಂಪುಗೂಡಿದುವು. ಎಲ್ಲರ ಕಣ್ಣುಗಳೂ ಅವನ ಕಡೆಗೆ. ಅವರು ತಮ್ಮೊಳಗೆ ಏನನ್ನೋ ಪಿಸುಗುಟ್ಟುತ್ತಿದ್ದರು. ಹೊಸ ಹೊಸ ಮುಖಗಳು ಪ್ರತ್ಯಕ್ಷವಾಗುತ್ತಿದ್ದುವು.

ತಲೆಗೂದಲು ಸ್ವಲ್ಪ ನರೆತ, ಯಜಮಾನಿಯಂತಿದ್ದ ಒಬ್ಬ ಸ್ತ್ರೀ ಅಜ್ಜಿಯ ಮುಂದೆ ಬಂದು ಒಂದುಸಲ ಕೆಮ್ಮಿದಳು. ಆಮೇಲೆ ತಗ್ಗಿದ ಧ್ವನಿಯಲ್ಲಿ, ಆದರೆ ಗಡುಸಾಗಿ ಹೇಳಿದಳು.

"ಅಮ್ಮ ಯಾವುದೋ ತೊಂದರೆ ತಂದುಕೊಳ್ತಿದ್ದೀಯ."

"ಎಂಥಾದ್ದೇ ತೊಂದರೆ?"

"ಮಾವನಿಗೆ ಗೊತ್ತಾದರೆ ಉಳಿಯೋ ಹಾಗಿಲ್ಲ."

ಅಜ್ಜಿಗೆ ಸಿಟ್ಟುಬಂದಿತೆಂದು ತೋರಿತು.

"ಗೊತ್ತಾದರೇನು? ಅವನು ನನ್ನ ಕೊಂದು ಹಾಕ್ತಾನೇನೊ"

"ಇದರಿಂದ ನನಗೂ ಮಕ್ಕಳಿಗೂ ಯಾವ ತೊಂದರೆಯೂ ಆಗಬಾರದು. ಅಷ್ಟು ನಾನು ಹೇಳೋದು."

"ಲೇ ನಿನ್ನನ್ನು ಹೆತ್ತ ಹಾಗೆ ಇವನ ತಾಯೀನೂ ನಾನು ಹೆತ್ತು ಹೊತ್ತು ಸಾಕಿದ್ದೀನಿ ಕಣೇ."

"ಅದೆಲ್ಲ ಮಾವನ ಹತ್ರ ಹೇಳಿ, ನನ್ನ ಹತ್ರ ಬೇಡಿ."

ಅಜ್ಜಿ ಮತ್ತೆ ಏನೂ ಮಾತಾಡಲಿಲ್ಲ. ಹೊದೆದಿದ್ದ ವಸ್ತ್ರದಿಂದ ಒಂದು ಸಲ ಕಣ್ಣನ್ನು ಒರಸಿಕೊಂಡರು.

ವಾದಿಸಲು ಬಂದ ಸ್ತ್ರೀ ಒಂದು ಸಲ ಕಾಲು ನೆಲಕ್ಕೆ ಝಾಡಿಸಿ ಅಲ್ಲಿಂದ ಹೊರಟು ಹೋದಳು.

ಈಗ ಬಾಗಿಲಿನ ಹತ್ತಿರ ನಿಂತಿರುವುದು ಹೆಂಗಸರಲ್ಲ; ಕೆಲವು ಹುಡುಗರು. ಅವರೂ ಅವನನ್ನು ಆಶ್ಚರ್ಯದಿಂದ ನೋಡುತ್ತ ನಿಂತಿದ್ದರು.

ಒಂದಿನ ದಿನ ಮಧ್ಯಾಹ್ನ ಕಂಡ ನಂತರ ಮುತ್ತಜ್ಜಿಯನ್ನು ಅವನು ಪುನಃ ಕಂಡದ್ದು ಆಗ. ಮುತ್ತಜ್ಜಿ ಅಡಿಗೆ ಮನೆಯ ಭಾಗದಿಂದ ಬಂದು ಹೇಳಿದಳು:

"ಅಪ್ಪಾ, ಇನ್ನು ನಾವು ಮನೆಗೆ ಹೋಗೋದು ಬ್ಯಾಡವಾ? ನಿನ್ನನ್ನ ಮನೆಗೆ ಕರೆದುಕೊಂಡು ಹೋಗಿ ಬಿಟ್ರೆ......ನಾನು......"

ಅದಕ್ಕೆ ಅಜ್ಜಿಯೇ ಉತ್ತರ ಕೊಟ್ಟರು.

"ಮುಂದುಕೀ, ನೀನು ಬೇಕಾದರೆ ಹೋಗು, ಅವನು ಈಗ ಬರೋದಿಲ್ಲ."

ಹೆಂಗಸರು ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಆ ದೊಡ್ಡ ಹೆಂಗಸು ಗಂಟಲು ಸರಿಮಾಡಿಕೊಂಡು ಮತ್ತೊ ಒಂದು ಸಲ ನೆಲ ಝಾಡಿಸುತ್ತ ಅಲ್ಲಿಂದ ಹೋದಳು. ಎದುರಿನಲ್ಲಿ ಉಗುರು ಕಚ್ಚುತ್ತ ನಿಂತಿದ್ದ ಹುಡುಗನ ಕೈಮೇಲೆ ಒಂದು ಪಟನ್ನು ಹಾಕಿಹೋದಳು.

"ಮಾಳು ಬಾ ಇಲ್ಲಿ"

ಮಾಳು ಬಂದಾಗ ಅಜ್ಜಿ ಹೇಳಿದರು.

"ಮಾಳೂ ಅಪ್ಪಣ್ಣಿಗೆ ಒಂದಿಷ್ಟು ಹಲ್ಲು ಪುಡೀನೂ ನೀರೂ ಕೊಡು."

ಆಗಲೂ ಕೊಟ್ಟಿಗೆ ಮುತ್ತಜ್ಜಿ ಸಂಶಯಪಟ್ಟುಕೊಂಡು ನಿಂತಿದ್ದಳು.

"ಮುಂದುಕಿ, ನೀನು ಹೋಗು. ನಾನು ಅವನನ್ನ ಹೊಲೆಯರ ಹುಡುಗನ ಜತೇಲಿ ಕಳಿಸ್ತೀನಿ."

ಮುತ್ತಜ್ಜಿ ಹೊರಟು ಹೋದಳು.

ಅಪ್ಪಣ್ಣ ಮಾಳುವಿನ ಜೊತೆಯಲ್ಲಿ ಹೊರಕ್ಕೆ ಹೋದ. ಹಲ್ಲು ಉಜ್ಜಿ ಮುಖ ತೊಳೆದು ಅವನು ಮತ್ತೆ ಅಜ್ಜಿಯ ಹತ್ತಿರ ಬಂದ. ಅಜ್ಜಿ ಮುಂಡಿಯ ಮೇಲೆ ಗಲ್ಲವನ್ನಿರಿಸಿ ಕೊಂಡು ಏನನ್ನೋ ಆಲೋಚಿಸುತ್ತಿದ್ದರು. ಅಪ್ಪಣ್ಣಿಯೂ ಮಾತಾಡದೆ ತಲೆ ತಗ್ಗಿಸಿ ಕೊಂಡು ಕುಳಿತಿದ್ದ.

ಅಜ್ಜಿಗೆ ಗಂಜಿ ಬಡಿಸಿದಾಗ. ಅಜ್ಜಿ ಅವನಿಗೂ ಬಡಿಸುವಂತೆ ಹೇಳಿದರು. ಅಡಿಗೆ ಮನೆಯಿಂದ ಗೊಣಗಾಡುವುದು ಕೇಳಿಸುತ್ತಿತ್ತು.

ಗಂಜಿಯನ್ನೂ ಸುಟ್ಟ ಹಪ್ಪಳವನ್ನೂ ಬಾಳೆ ಎಲೆ ತುಂಡಿನಲ್ಲಿ ಚಟ್ನಿಯನ್ನೂ ಅಪ್ಪಣ್ಣಿಗೆ ಬಡಿಸಿದಾಗ ಅವನಿಗೆ ಗಂಜಿ ಕುಡಿಯಲು ಹಸಿವೇ ಕಾಣಿಸುತ್ತಿರಲಿಲ್ಲ.

ಹಲಸಿನೆಲೆಯ ದೊನ್ನೆಯಲ್ಲಿದ್ದ ಗಂಜಿಯನ್ನು ಮಾತ್ರವೇ ಕುಡಿದದ್ದು. ಅಷ್ಟರಲ್ಲಿ ಹೆಂಗಸರು ಅಡಿಗೆ ಮನೆಯ ಕಡೆಗೆ ಬೇಗಬೇಗ ಹೆಜ್ಜೆಯಿರಿಸುವುದೂ ಹುಡುಗರು ಬಾಗಿಲಿನ ಪಕ್ಕದಲ್ಲಿ ಮರೆಯಾಗಿ ನಿಲ್ಲುವುದೂ ಕಾಣಿಸಿತು.

ಸಿಡಿಲಿನ ಹಾಗೆ ಧ್ವನಿ.

"ಒಡ ಹುಟ್ಟಿದೋಳೇ......"

ಅಜ್ಜಿ ಹಲಸಿನೆಲೆಯ ದೊನ್ನೆಯನ್ನು ತಟ್ಟೆಯಲ್ಲಿಟ್ಟು ಮೆಲ್ಲಗೆ ಜಪಿಸಿದರು. "ನಾರಾಯಣ...ನಾರಾಯಣ......"

ಬಾಗಿಲಿನಲ್ಲಿ, ಬಾಗಿಲಿನೆತ್ತರಕ್ಕೂ ನಿಂತುಕೊಂಡಿದ್ದರು ಒಬ್ಬಾತ.

ದೊಡ್ಡ ಮಾವ !

"ಯಾರು ಈ ಹುಡುಗ?"

ಅಜ್ಜಿ ಮಾತಾಡಲಿಲ್ಲ.

"ಈಗ ನಿಮ್ಮ ಹತ್ತಿರವೇ ಕೇಳ್ತಿರೋದು ಈ ಹುಡುಗ ಯಾರು ಅಂತ?"

"ಇವನು ಪಾರುಕುಟ್ಟಿಯ ಮಗ......"

"ಯಾರವಳು ನಿಮ್ಮ ಪಾರುಕುಟ್ಟಿ?"

ಅಜ್ಜಿಗೆ, ಅವಳು ಈ ಮನೆಯ ಜ್ಯೋತಿ ಎಂದು ಹೇಳಬೇಕು ಎನ್ನಿಸಿತು. ಆದರೆ ಅವರು ಸಮಾಧಾನದಲ್ಲಿ ಹೇಳಿದರು.

"ನಾನು ಅಂಥವಳೊಬ್ಬಳನ್ನು ಹೆತ್ತೆ."

"ಥೂ ! ನನ್ನ ಮನೆತನ, ಕಂಡ ಕಂಡವರೆಲ್ಲ ಕಾಲಿಡೋ ಅಂಥಾದ್ದಲ್ಲ. ಯಾವಳೇ ಅವಳು ಈ ಹುಡುಗನಿಗೆ ಗಂಜಿ ಕೊಟ್ಟವಳು?"

ಅಜ್ಜಿ ಎದ್ದು ನಿಂತರು.

ಅವನೂ ನಡುಗುತ್ತ ಎದ್ದು ನಿಂತ.

ಈಗ ತನ್ನನ್ನು ಕೊಂದು ಹಾಕಿ ಬಿಡುತ್ತಾರೋ ಏನೋ......ತಾನು ಸತ್ತು ಹೋಗುತ್ತೇನೋ ಎನ್ನಿಸಿತ್ತು......ಅವನ ಕುತ್ತಿಗೆಯನ್ನು ಅವರ ಕೈ ಬೆರಳುಗಳು ಬಳಸಿ ದುವು. ಹೊರಗಿನ ಬಾಗಿಲನ್ನು ತೋರಿಸುತ್ತ ದೊಡ್ಡ ಮಾವ ಗರ್ಜಿಸಿದರು.

"ಹೋಗೋ ಆಚೆ ! ಇನ್ನು ಹಿತ್ತಿಲಿನೊಳಕ್ಕೆ ಕಾಲಿರಿಸಿದ್ದನ್ನ ಕಂಡರೆ ಕಾಲು ಕತ್ತರಿಸಿ ಹಾಕಿಯೇನು. ಹೋಗ್......" ಎಂದು ಹೇಳಿ ಅವನನ್ನು ಹೊರಕ್ಕೆ ತಳ್ಳಿದರು.

ಅವನು ನಡೆಯುತ್ತಿರಲಿಲ್ಲ. ಓಡುತ್ತಿದ್ದ......

ನುರುಜುಗಲ್ಲುಗಳು ಹರಡಿ ನಿಂತಿದ್ದ ಹೊರಗಿನ ಅಂಗಳದಲ್ಲಿ ಮುಗ್ಗರಿಸಿಬಿದ್ದಾಗ ಅವನ ಮಾವ ಹೇಳುವುದು ಕೇಳಿಸುತ್ತಿತ್ತು.

"ಅನುಭವಿಸ್ತೀರಿ. ಇದರ ಫಲ ಅನುಭವಿಸ್ತೀರಿ."

* * * * *

ಹಿಂದಿನಿಂದ ಯಾರೋ ತನ್ನನ್ನು ಹಿಡಿಯುವುದಕ್ಕೆ ಅಟ್ಟಿಸಿಕೊಂಡು ಬರುತ್ತಿದ್ದಾರೆಯೋ ಎನ್ನುವ ಭೀತಿಯಿಂದ ಅಪ್ಪಣ್ಣ ಬರುತ್ತಿದ್ದ.

ಮನೆಗೆ ಹೋಗಬೇಕಾಗಿರುವ ದಾರಿಯನ್ನು ಕಷ್ಟಪಟ್ಟು ತಿಳಿಯಬೇಕಾಗಿತ್ತು. ಕಾಲು ದಾರಿಯಲ್ಲಿ ಹೋಗಿ ಗುಡ್ಡದ ಹತ್ತಿರ ಹೋದಾಗಲೂ ಅವನ ದುಃಖ ಕಡಿಮೆಯಾಗಿರಲಿಲ್ಲ.

ದುಃಖ ಕ್ರಮೇಣ ಕಡಿಮೆಯಾಗುತ್ತಿತ್ತು. ಷರಟಿನ ಅಂಚಿನಿಂದ ಕಣ್ಣೊರಸಿಕೊಂಡು ಗೇಣಸು ನೆಡಲು ದಿಂಡು ಕಟ್ಟಿದ್ದ ಸ್ಥಳದ ಮಾರ್ಗವಾಗಿ ಗುಡ್ಡದ ಹತ್ತಿರಕ್ಕೆ ಬಂದ. ನೆಲ ಸುಡುವ ಬಿಸಿಲು. ಉರುಟು ಗಲ್ಲುಗಳನ್ನು ಎಡವಿಕೊಂಡು ನಡೆಯುತ್ತಿದ್ದ.

ಮೇಲೆಲ್ಲ ಜೇಡ ಬಲೆ ಕಟ್ಟಿದ ಕುರುಚಲು ಗಿಡಗಳು ತುಂಬಿದ್ದ, ಕಾಡಿನ ಪಕ್ಕದಲ್ಲಿ ಒಂದು ನುಣುಪಾದ ಕಲ್ಲಿನ ಮೇಲೆ ಕುಳಿತುಕೊಂಡ.

ಕುತ್ತಿಗೆ ಹಿಡಿದು ದಬ್ಬಿ ಓಡಿಸಿಬಿಟ್ಟರು. ಹುಳಿತ ನಾಯಿಯನ್ನು ಕಂಡಾಗ ಓಡಿಸುವಂತೆ ಬಡಿದು ಓಡಿಸಿದರು......

ತಡೆದು ನಿಂತಿದ್ದ ಕಣ್ಣೀರಿನ ಕಟ್ಟೆ ಸಂಪೂರ್ಣವಾಗಿ ಒಡೆದದ್ದು ಆಗ. ಅಪ್ಪ ಮೊದಲೇ ಹೇಳಿದ್ದಳು "ಹೋಗಬೇಡ" ಎಂದು. ಆದರೂ ಬಂದ, ಅಮ್ಮನಿಗೆ ಇದು ತಿಳಿದಾಗ—

ಹೀಗಾಗುವುದೆಂದು ಖಂಡಿತ ಭಾವಿಸಿರಲಿಲ್ಲ.

ಕುತ್ತಿಗೆ ಹಿಡಿದು ತಳ್ಳುತ್ತಾರೆ ಎಂದು—ಹುಳಿತ ನಾಯಿಯನ್ನು ಓಡಿಸುವಂತೆ ಓಡಿಸುತ್ತಾರೆ ಎಂದು !

ಆ ಹೆಂಗಸರೆಲ್ಲರೂ ನೋಡಿದರು. ಹುಡುಗರೂ ನೋಡುತ್ತ ನಿಂತಿದ್ದರು. ಕತ್ತು ಹಿಡಿದು ಹೊರಕ್ಕೆ ದಬ್ಬಿದರು......ಅವಮಾನ ! ಹಣವಂತನಲ್ಲದಿದ್ದರೂ ಅವನ ತಂದೆ ಗಂಡಸಾಗಿದ್ದ. ಎದುರಿಗೆ ಬಂದು ನಿಲ್ಲಲು ಒಬ್ಬನಿಗೂ ಧೈರ್ಯವಿರಲಿಲ್ಲ......ಧೀರನಾದ ಕೋಂದುಣ್ಣಿ ನಾಯರ ಮಗ ಅವನು. ಆದರೆ ಕುತ್ತಿಗೆ ಹಿಡಿದು ತಳ್ಳಿಸಿಕೊಂಡು ನಾಯಿಯ ಹಾಗೆ ಓಡಿ ಬಂದ.

ಆದರೆ ಓಡದೆ ನಿಲ್ಲಲು ಸಾಧ್ಯವಿರಲಿಲ್ಲ. ಬಾಗಿಲುದ್ದಕ್ಕೂ ನಿಂತಿದ್ದ ಆ ಮನುಷ್ಯನ ಚಿತ್ರ ಅವನ ಕಣ್ಣೆದುರಿಗೆ ಬರುತ್ತಿತ್ತು.

ಜನರು ಯಾರೂ ಕಾಣದ ಯಾವುದಾದರೂ ಗುಹೆಯಲ್ಲಿ ಅಡಗಿಕೊಳ್ಳಬೇಕು--- ಇಲ್ಲದಿದ್ದರೆ ರೈಲು ಹತ್ತಿ ಎಲ್ಲಿಯಾದರೂ ಓಡಿಹೋಗಿ ಬಿಡಬೇಕು ಎನ್ನಿಸಿತು. ಎಲ್ಲರನ್ನೂ. ಎಲ್ಲರನ್ನೂ ದ್ವೇಷಿಸುತ್ತಾನೆ.

ಹುಳಿತ ನಾಯಿಯ ಹಾಗೆ!

ಸತ್ತರೆ ಮತ್ತೆ ಅವಮಾನವಿಲ್ಲ. ಆಗ ಯಾರೂ ಅಟ್ಟೆಗೆ ನೂಕುವುದಿಲ್ಲ. ಬಯ್ಯುವುದಿಲ್ಲ. ಆಕಾಶದ ಆಚೆಗಿರುವ ಸ್ವರ್ಗಕ್ಕೆ ದೈವ, ಕೈಹಿಡಿದು ಕರೆದುಕೊಂಡು ಹೋಗುತ್ತವೆ . . . ಆ ಸ್ವರ್ಗದಲ್ಲಿ ಹಳೆಯ ಚೌಕಟ್ಟಿನ ಮನೆಗಳೂ ದೊಡ್ಡ ಮಾವಂದಿರೂ ಇರುವುದಿಲ್ಲ.

ಅಷ್ಟರಲ್ಲಿ ಸ್ವಲ್ಪ ಹಿಂದಿನಿಂದ ಏನೋ ಮನುಷ್ಯನ ಶಬ್ದ ಕೇಳಿಸಿತು. ಹಿಂದಿರುಗಿ ನೋಡಿದ. ಅಯ್ಯೋ ದೇವರೇ! ಶರೀರವೆಲ್ಲ ತಣ್ಣಗಾದ ಹಾಗಾಯಿತು. ಯಾರು ಹಿಂದೆ ನಿಂತಿರುವುದು?

ಕೆಂಡದಂತಹ ಕಣ್ಣುಗಳು. ತುಂಡುತಲೆಗೂದಲೂ......

ಅದೇ ಸೈದಾಲಿಕುಟ್ಟಿ.

ತಂದೆಗೆ, ಮಾಂಸದಲ್ಲಿ ವಿಷಹಾಕಿ ಕೊಂದವನು! ವಿಷವನ್ನು ಅನ್ವೇಷಿಸಿಕೊಂಡು ಹೊರಟಿದ್ದಾನೋ? ಹೇಗೆ ಕೊಲ್ಲಬೇಕು ಎನ್ನುವ ಆಲೋಚನೆಯಲ್ಲಿದ್ದಾನೋ? ದಪ್ಪನೆಯ ತುಂಡು ಬೆರಳುಗಳ ಕಡೆಗೆ ಅವನು ನೋಡಿದ.

"ಯಾಕೆ ಅಳ್ತೀ?"

ಸಿಟ್ಟಿನಿಂದ ಅಲ್ಲ. ಮೆಲ್ಲಗೆ ಕೇಳಿದ.

"ಯಾಕೆ ಇಲ್ಲಿ ಕುಳಿತಿದ್ದಿ?"

ಅದಕ್ಕೂ ಅಪ್ಪುಣ್ಣಿ ಉತ್ತರ ಕೊಡಲಿಲ್ಲ.

"ಅಳಬೇಡ ಮಗು."

ಅದು ಕೊಲ್ಲುವುದಕ್ಕೆ ಹೊರಟ ಮನುಷ್ಯನ ಧ್ವನಿಯಾಗಿರಲಿಲ್ಲ. ಅವನು ಒದ್ದೆಯಾದ ಕಣ್ಣುಗಳನ್ನೆತ್ತಿ ಆ ಮನುಷ್ಯನ ಮುಖದ ಕಡೆಗೆ ನೋಡಿದ. ಆ ಕಣ್ಣುಗಳು ಭಯಪಡಿಸುವ ಕಣ್ಣುಗಳೇ ಅಲ್ಲ. ಕೆಂಡದಂತಿದ್ದ ಆ ಕಣ್ಣುಗಳಲ್ಲಿ ಅಜ್ಜಿಯ ಮುಖದಲ್ಲಿ ಕಂಡಂತೆ ಒಂದು ವಾತ್ಸಲ್ಯಪೂರ್ವಕ ವೇದನೆಯಿದೆ.

"ಮನೆಗಲ್ಲವೆ?"

ಅವನು ಹೌದು ಎನ್ನುವ ಅರ್ಥದಲ್ಲಿ ತಲೆಯಲ್ಲಾಡಿಸಿದ.

"ನಾನೂ ಆ ದಾರಿಯಲ್ಲೇ ಬರ್‍ತೀನಿ, ನಡಿ."

ಆತ ಮುಂದೆಯೂ ಅವನು ಹಿಂದೆಯೂ ನಡೆದರು. ಬಿಕ್ಕಿ ಬಿಕ್ಕಿ ಅಳುತ್ತಿದ್ದದ್ದು ನಿಂತಿತು.

"ಇಷ್ಟು ಬೆಳಗ್ಗೆ ಈ ಗುಡ್ಡದ ಹತ್ತಿರಕ್ಕೆ ಯಾಕೆ ಬಂದಿದ್ದೆ?"

"ಯಾಕೂ ಇಲ್ಲ."

"ಎಲ್ಲಿಂದ ಬರೋದು?"

"ಅಲ್ಲಿಂದ......ವಡಕ್ಕೇಪಾಟ್‌ನಿಂದ."

"ಅಳ್ತಾ ಇದ್ದೆಯಲ್ಲ. ಯಾಕೆ?"

ಮಾತಿಲ್ಲ.

"ದಾರಿ ಗೊತ್ತಾಗಲಿಲ್ಲವಾ?"

"ಇಲ್ಲ."

"ದಾರೀಲಿ ಎಡವಿಬಿದ್ದೆಯಾ?"

"ಇಲ್ಲ. ಇಲ್ಲ."

"ಮತ್ತ್ಯಾಕೆ ಅಳ್ತಿದ್ದೆ?"

"ಅಲ್ಲಿ...ಅಲ್ಲಿ......ದೊಡ್ಡ ಮಾವ"

ಮುಂದಕ್ಕೆ ಹೇಳಲಾಗಲಿಲ್ಲ.

ಸೈದಾಲಿಕುಟ್ಟಿ ಮುಂದೆ ಏನೂ ಕೇಳಲಿಲ್ಲ. ಎಷ್ಟೋ ಹೊತ್ತು ಇಬ್ಬರೂ ಮೌನವಾಗಿ ಹೆಜ್ಜೆ ಹಾಕಿದರು. ಕಡೆಗೆ ಸೈದಾಲಿಕುಟ್ಟಿ ಕೇಳಿದ:

"ಅಲ್ಲಿ ನಿನಗೂ ಹಕ್ಕಿದೆ."

ಸೈದಾಲಿಕುಟ್ಟಿ ಅವನ ಭುಜದ ಮೇಲೆ ಕೈಯಿಟ್ಟುಕೊಂಡು ನಡೆದು ಬರುತ್ತಿದ್ದ.

ಕಲ್ಲು ತೆಗೆಸಿದ ಗುಂಡಿಯ ಹತ್ತಿರಕ್ಕೆ ಬಂದಾಗ ಅವನ ಮನಸ್ಸಿನಲ್ಲಿ ಯಾವುದೋ ಒಂದು ರೀತಿಯ ಅಸಮಾಧಾನವುಂಟಾಯಿತು.

"ದಡ ಕುಸಿದೀತು. ಈ ಕಡೆಗೆ ಬಾ."

ಅವರು ಅಡಕೆ ಎಡೆಯುತ್ತಿದ್ದ ಸ್ಥಳಕ್ಕೆ ಬಂದರು.

ಅದು ದಾಟಿದರೆ ಮೂರು ನಾಲ್ಕು ಅಂಗಡಿಗಳು.

"ನಾಯರ್ ಕುಟ್ಟಿಗೆ ಚಾ ಬೇಕಾ?"

"ಬೇಡ,"

ಅವನ ಮನೆಯ ಮುಂದಕ್ಕೆ ಬಂದಾಗ ಸೈದಾಲಿಕುಟ್ಟಿ ನಿಂತ.

"ಇನ್ನು ಹೋಗು."

ಸೈದಾಲಿಕುಟ್ಟಿ ತಲೆ ಸವರಿಕೊಳ್ಳುತ್ತ ದೇವರನ್ನು ಕುರಿತು ಏನನ್ನೋ ಗೊಣಗುತ್ತ ಮುಂದೆ ಹೆಜ್ಜೆಯಿರಿಸಿದ.

* * * * *

ಎರಡು ದಿನಗಳು ನಂಬೂದಿರಿಗಳ ಮನೆಗೆ ಕೆಲಸಕ್ಕೆ ಹೋಗಬೇಕಾಗಿಲ್ಲ. ನಂಬೂದಿರಿ ಮನೆಯವರೆಲ್ಲರೂ ಯಾವುದೋ ಊರಿಗೆ ಹೋಗಿದ್ದಾರೆ. ಕುಂಞಾತ್ತೋಲು ಕೂಡ

ಹೋಗಿದ್ದಾಳೆ. ಇರಿಕಣ್ಣಮ್ಮ ಮಾತ್ರ ಮನೆಯಲ್ಲಿದ್ದಾಳೆ. ಇಕ್ಕಾವಮ್ಮ ಬಟ್ಟೆ ಹೊಲಿಯುವುದಕ್ಕೆ ಹೋಗಿದ್ದಾಳೆ.

ಆ ದಿನ ಪಾರುಕುಟ್ಟಿ ಬೆಳಗ್ಗೆ ಏಳುವುದು ಸ್ವಲ್ಪ ತಡವಾಯಿತು. ಶಂಕರನ್ ನಾಯರನ್ನು ಕಂಡು ಮಾತಾಡಬೇಕೆಂದು ನಿಶ್ಚಯಿಸಿದ್ದ ವಿಷಯ ಅವಳಿಗೆ ಮೊದಲು ಎದ್ದ ತಕ್ಷಣ ನೆನಪಾದದ್ದು. ಆತನನ್ನು ಎಲ್ಲಿ ಕಾಣುವುದು? ಕಾಲುದಾರಿಯಲ್ಲಿ ಹೋಗಿ ಆತನನ್ನು ಕಂಡು ವಿಷಯ ತಿಳಿಸಬೇಕು. ಇಲ್ಲದಿದ್ದರೆ ಅಪ್ಪುಣ್ಣಿಯನ್ನು ಕಳಿಸಿ, ಬರ ಹೇಳಬೇಕು. ಅಪ್ಪುಣ್ಣಿಗೆ ಆತನ ಮನೆ ಎಲ್ಲಿದೆ ಎಂದು ಗೊತ್ತಿಲ್ಲ. ಕೇಳಿಕೊಂಡು ಹೋಗಬೇಕು. ನಂಬೂದಿರಿಗಳ ಮನೆಗೆ ಕೆಲಸಕ್ಕೆ ಹೋದ ದಿನಗಳಲ್ಲಿ ಸಾಯಂಕಾಲದ ಹೊತ್ತು ಆತ ಸ್ನಾನಕ್ಕೆ ಹೋಗುವುದು ಅದೇ ದಾರಿಯಲ್ಲಿ. ಈ ದಿನ ಮನೆಯಲ್ಲೇ ಇರಬಹುದು. ಹಾಗೆಲ್ಲ ಸುಮ್ಮನೆ ರಸ್ತೆಯಲ್ಲೋ ಬೇರೆಯವರ ಮನೆಯಲ್ಲೋ ಸುತ್ತಾಡುತ್ತಾ ಕಾಲಕಳೆಯುವ ಮನುಷ್ಯನಲ್ಲ ಆತ ಎಂದು ಕೇಳಿದ್ದುಂಟು. ಆದ್ದರಿಂದ ಮನೆಯಲ್ಲೇ ಇರಬಹುದು.

ಹಿಂದಿನ ದಿನ ಕಂಡಾಗಲೇ ಹೇಳಬೇಕಾಗಿತ್ತು. ಆದರೆ ಆಗ ನಾಳೆ ಹೇಳಿದರಾಯ್ತು ಎಂದುಕೊಂಡಿದ್ದಳು. ನಾಳೆ ಕೆಲಸಕ್ಕೆ ಹೋಗಬೇಕಾಗಿಲ್ಲ ಎನ್ನುವ ವಿಷಯ ಅವಳಿಗೆ ಆಗ ನೆನಪಾಗಿರಲಿಲ್ಲ. ಅದೂ ಅಲ್ಲದೆ ಶಂಕರನ್ ನಾಯರನ್ನು ಕಂಡ ಕೂಡಲೇ ಅವಳಿಗೆ ತಲೆಯೆತ್ತಿ ನೋಡುವುದಕ್ಕಾಗುತ್ತಿರಲಿಲ್ಲ. ವಡಕ್ಕೇಪಾಟ್‌ನಲ್ಲಿ ಸಣ್ಣ ಹುಡುಗಿಯಾಗಿದ್ದಾಗಿನಿಂದಲೂ ಆತನನ್ನು ನೋಡಿರಲಿಲ್ಲವೆ?

ನಂಬೂದಿರಿಗಳ ಮನೆ ಕೆಲಸಕ್ಕೆ ಹೋಗುವುದಕ್ಕೆ ಪ್ರಾರಂಭಿಸಿದ ಮೊದಲ ದಿನಗಳನ್ನು ನೆನಸಿಕೊಂಡಾಗ ಈಗಲೂ ವೇದನೆಯುಂಟಾಗುತ್ತದೆ. ಒರಳು ಕಲ್ಲಿನ ಪಡಸಾಲೆಯಲ್ಲಿ ಭತ್ತ ಕುಟ್ಟುವಾಗ......ಹಜಾರದಲ್ಲಿ ಇರಿಕಣ್ಣಮ್ಮನ ಪಕ್ಕದಲ್ಲಿ ಕುಳಿತು ಎಂಜಲೆಲೆಯ ಅನ್ನ ತಿನ್ನುತ್ತಿದಾಗ...... ಕುಂಞಾತ್ತೋಲು 'ಪಾರೂ' ಎಂದು ಕರೆಯುತ್ತಿದ್ದಾಗ... ಮನೆಗೆಲಸದವರನ್ನೆಲ್ಲ ನೋಡಿದಾಗ......ಯಾವುದೋ ಒಂದು ರೀತಿಯ ಸಹಿಸಲಾಗದ ಯಾತನೆಯುಂಟಾಗುತ್ತಿತ್ತು. ಮೈಮೇಲಿನ ಬಟ್ಟೆ ಪರ್ರನೆ ಹರಿದು ಹೋದಂತೆ ವಿಪರೀತ ಯಾತನೆಯ ಅನುಭವಗಳುಂಟಾಗಿದ್ದುವು..

ಒಂದು ದಿನ ಊಟ ಮಾಡಿ ಒರಳು ಕಲ್ಲಿನ ಪಡಸಾಲೆಯ ಹತ್ತಿರ ಕುಳಿತಿದ್ದಾಗ ಕುಂಞಾತ್ತೋಲು ಕರೆದಳು:

"ಪಾರೂ".

ಅವಳು ಹೊರಗೆ ಬಂದಾಗ ಹೇಳಿದಳು:

"ಪಡಸಾಲೆಗೆ ಹೋಗಿ ಆ ಭತ್ತ ತುಂಬಿಡು."

ಹೊರಗೆ ಗೇಣಿದಾರ ಎರಡು ಗಾಡಿ ಭತ್ತ ಸುರಿದಿದ್ದ. ಗೇಣಿ ಭತ್ತ ಸಂದಾಯ ಮಾಡಿ ರಶೀದಿ ತೆಗೆದುಕೊಳ್ಳಲು ಬಂದಿದ್ದ.

ದೊಡ್ಡ ಕೊಳಗವನ್ನು ತಂದಿಟ್ಟಿದ್ದರು. ನಂಬೂದಿರಿಗಳ ಮನೆಯಲ್ಲಿ ಕೊಳಗಗಳಿರುವುದು ಎರಡು. ಗೇಣಿ ಭತ್ತ ಅಳೆಸಿಕೊಳ್ಳುವುದು ಹದಿನಾರು ಸೇರಿನ ಕೊಳಗದಲ್ಲಿ. ಭತ್ತ ಸಾಲ ಕೊಡುವುದು ಒಂದು ಚಿಕ್ಕ ಕೊಳಗದಲ್ಲಿ. ಅದರಲ್ಲಿ ಹಿಡಿಸುವುದು ಹದಿನಾಲ್ಕು ಸೇರು ಮಾತ್ರ.

"ಹೆಣ್ಣೇ, ಆ ಭತ್ತ ಅಳೆದು ಹಾಕು."

ಮೆಟ್ಟಲಿನ ಮೇಲೆ ದೊಡ್ಡ ಹೊಟ್ಟೆಯ, ಹೆಸರಿಗೆ ಮಾತ್ರವೇ ಸೊಂಟಕ್ಕೆ ಒಂದು ಟವಲ್‌ಸುತ್ತಿಕೊಂಡು ಕುಳಿತಿದ್ದ ದೊಡ್ಡ ನಂಬೂದಿರಿ ಹೇಳಿದರು. ಜನರು ತನ್ನ ಹತ್ತಿರದಲ್ಲೇ ಇದ್ದರೂ ಅವರು ಹೇಳುವುದು ಗಟ್ಟಿಯಾಗಿ.

ದೊಡ್ಡ ಮೊರ ತೆಗೆದುಕೊಂಡು ಭತ್ತ ತುಂಬಿ ಕೊಳಗಕ್ಕೆ ಸುರಿಯಲು ಎತ್ತಿದಾಗ ಅವಳ ಮುಖ ಬಿಳಿಚಿಕೊಂಡಿತ್ತು. ಕೊಳಗವನ್ನು ಹಿಡಿದುಕೊಂಡು ಬಾಗಿ ನಿಂತಿದ್ದ ಆ ಮನುಷ್ಯನನ್ನು ಅವಳು ಆಗ ಮಾತ್ರ ನೋಡಿದ್ದು. ತೌರಿನಲ್ಲಿ ಗದ್ದೆಗೆ ನೀರೆತ್ತುವುದಕ್ಕೂ ವನಗಳನ್ನು ನೋಡಿಕೊಳ್ಳುವುದಕ್ಕೂ ಬರುತ್ತಿದ್ದ ಶಂಕರನ್ ನಾಯರ್! ಮೈಯೆಲ್ಲ ದಿಗ್ಗನೆ ಹೊತ್ತಿಕೊಂಡು ಸುಟ್ಟು ಹೋಯಿತೋ ಎನ್ನುವಷ್ಟು ಗಾಬರಿಯಾಯಿತು. ತನ್ನ ಗಾಬರಿಯನ್ನು ಅಡಗಿಸಿಕೊಂಡು ಭತ್ತ ತುಂಬಿಸಿದಳು.

ಆತ ನಂಬೂದಿರಿಗಳ ಮನೆಗೆ ಕೆಲಸಕ್ಕೆ ಬರುವುದಕ್ಕೆ ತೊಡಗಿ ಮೂರು ದಿವಸಗಳಾಗಿದ್ದುವು. ಅದು ತಿಳಿದದ್ದು ಆ ಮೇಲೆ. ಆ ದಿನ ಬರುವಾಗ ಶಂಕರನ್ ನಾಯರನ್ನು ಕಂಡಳು. ಅವಳ ಕಣ್ಣುಗಳು ತೇವಗೊಂಡುವು. ಆತ ಅದೇ ದೊಡ್ಡ ಧ್ವನಿಯಲ್ಲಿ ಹೇಳಿದ. "ಇದೆಲ್ಲ ವಿಧಿಲೀಲೆ ಪಾರುಕುಟ್ಟಿ ಅಮ್ಮ".

ಕುಟುಂಬದ ಮನೆಯಿಂದ ಹೋದ ಮೇಲೆ ಆತನನ್ನು ಮತ್ತೆ ನೋಡಿದ್ದುಂಟು. ಆಗ ತಲೆಯೆತ್ತಿ ನಿಲ್ಲಬಲ್ಲವಳಾಗಿದ್ದಳು; ನಿಂತು ಮಾತಾಡಬಲ್ಲವಳಾಗಿದ್ದಳು. ಅಪ್ಪುಣ್ಣಿಯ ತಂದೆ ಬದುಕಿದ್ದ ಕಾಲದಲ್ಲಿ ಶಂಕರನ್ ನಾಯರ್ ಕೆಲವು ಸಲ ಮನೆಗೆ ಬಂದದ್ದುಂಟು. ಮೀನು ಹಿಡಿಯುವುದರಲ್ಲಿ ಅಪ್ಪುಣ್ಣಿಯ ತಂದೆಯ ಹಾಗೆಯೇ ಶಂಕರನ್ ನಾಯರ್ ಒಳ್ಳೆಯ ಬೇಟೆಗಾರ. ಮೇಷಮಾಸದಲ್ಲಿ ಹೊಳೆಯಲ್ಲಿ ಮೀನು ಹೆಚ್ಚಿದಾಗ ಶಂಕರನ್ ನಾಯರ್ ತಲೆಯ ಮೇಲೆ ಟೊಪ್ಪಿ ಕೊಡೆಯನ್ನೂ ಭುಜದ ಮೇಲೆ ದೊಡ್ಡ ಬಲೆಯನ್ನೂ ಇಟ್ಟುಕೊಂಡು ಅಪ್ಪುಣ್ಣಿಯ ತಂದೆಯನ್ನು ಕರೆಯುವುದಕ್ಕೆ ಬರುತ್ತಿದ್ದ. ಎಟ್ಟಿ ಮೀನು ಅಂದರೆ ಅಪ್ಪುಣ್ಣಿಯ ತಂದೆ ಪ್ರಾಣ ಬಿಡುತ್ತಿದ್ದರು. ಸೊಸ್ಲು ಮೀನಿನಂಥ ಸಣ್ಣ ಸಣ್ಣ ಮೀನು ಹಿಡಿಯುವುದಕ್ಕೆ ಅವರ ಬಳಿಯಿದ್ದ ಬಲೆ ಸಾಕಾಗುತ್ತಿತ್ತು. ಬಾಳೆ ಮೀನು ಹಿಡಿಯಬೇಕಾಗಿದ್ದರೆ ಶಂಕರನ್ ನಾಯರ ದೊಡ್ಡ ಬಲೆಯೇ ಬೇಕಾಗುತ್ತಿತ್ತು.

ಕುಟುಂಬದ ಮನೆಯಲ್ಲಿ ಒಂದು ಸಣ್ಣ ಹೆಣ್ಣು ಮಗುವಾಗಿದ್ದಾಗಿನಿಂದಲೂ ಈ ಮನೆಯ ಯಜಮಾನಿಯಾಗಿ ಬಂದಾಗಿನಿಂದಲೂ ತನ್ನನ್ನು ಕಂಡಿರುವ ಮನುಷ್ಯ......

ಈಗ ಅದೇ ಮನುಷ್ಯ ತನ್ನನ್ನು ನಂಬೂದಿರಿ ಮನೆಯಲ್ಲಿ ಅಕ್ಕಿ ಬೀಸುವುದನ್ನು ನೋಡುತ್ತಿದ್ದಾನೆ...... !

ಎಲ್ಲಾ ವಿಧಿಲಿಖಿತ...... !

ಅಪ್ಪುಣ್ಣಿ ಸರ್ಟಿಫಿಕೇಟ್ ತರಲು ಸ್ಕೂಲಿಗೆ ಹೋಗಿದ್ದ. ಬಾವಿಯ ಹತ್ತಿರ ಅಪ್ಪುಣ್ಣಿ ನೆಟ್ಟಿದ್ದ ಕುಂಬಳದ ಗಿಡಕ್ಕೆ ನೀರು ಹಾಕಿದಳು. ಕತ್ತೆತ್ತಿ ನಿಂತಿದ್ದ ಹಾಗಲ ಗಿಡಕ್ಕೆ ಹಲಸಿನ ಕೊನೆಯನ್ನು ಕತ್ತರಿಸಿ ಊರೆ ಕೊಟ್ಟಳು. ಬಾಳೆಯ ಗಿಡದ ಹತ್ತಿರ ತಲೆಗೂದಲನ್ನು ಬೆರಳಿನಿಂದ ಬಿಡಿಸುತ್ತ ಸುಮ್ಮನೆ ಸ್ವಲ್ಪ ಹೊತ್ತು ನಿಂತಳು. ಅಪ್ಪುಣ್ಣಿಯ ಕೈಯಿಂದ ಬಿದ್ದು ಒಡೆದು ಕನ್ನಡಿಚೂರುಗಳು ಬಾಳೆ ಗಿಡದ ಹತ್ತಿರ ಬಿದ್ದಿದ್ದುವು. ಅವನು ದಾರಿಯ ಮೇಲೆ ಗಮನವಿಟ್ಟು ನಡೆಯುವುದಿಲ್ಲ. ತೋಟದಲ್ಲಿ ಓಡಾಡುವಾಗ ಕಾಲಿಗೆ ತಾಗಿದರೆ... ಅವನ್ನೆಲ್ಲ ಆರಿಸಿ ತೆಗೆದುಕೊಂಡು ಹೋಗಿ ಬಿದಿರಿನ ಹಿಂಡಲಿನ ಹತ್ತಿರ ಹಾಕಿ ಬರಬೇಕು.

ಒಂದು ದೊಡ್ಡ ಕನ್ನಡಿಯ ಚೂರನ್ನು ಕೈಗೆತ್ತಿಕೊಂಡಳು. ಒಂದು ಸಲ ತನ್ನ ಮುಖವನ್ನು ನೋಡಿಕೊಂಡಳು. ಹಣೆಯ ಮೇಲೆ ಹರಡಿಕೊಂಡಿದ್ದ ತಲೆಗೂದಲನ್ನು ಹಿಂದಕ್ಕೆ ನೀವಿಕೊಂಡಳು. ಮುಖ ಕಪ್ಪಾಗಿದೆ. ಒಂದೆ ಮುತ್ತಜ್ಜಿ ಅವಳನ್ನು ಕುರಿತು ಹೇಳಿದ್ದದ್ದು ನೆನಪಾಯಿತು—"ಅಕ್ಕಿ ಹಿಟ್ಟಿನ ದೀಪ ಹಚ್ಚಿಟ್ಟ ಹಾಗಿದ್ದಾಳೆ—" ಎಂದು. ಆಗ ಹದಿನೈದು ವರ್ಷ ವಯಸ್ಸು. ಅದರ ನಂತರ ಹದಿನೈದೋ ಹದಿನಾರೋ ದಾಟಿಹೋಗಲಿಲ್ಲವೆ?

ಎಣ್ಣೆ ಸ್ನಾನ ಯಾವಾಗಲೋ ಒಮ್ಮೆ. ತಲೆಗೂದಲು ಯಾವಾಗಲೂ ಹಾರಾಡಿಕೊಂಡಿರುತ್ತದೆ. ನಿತ್ಯವೂ ಎಣ್ಣೆ ಹಚ್ಚಿ ಬಾಚದಿದ್ದರೆ ಹಾಳು ತಲೆಗೂದಲು ಸರಿಯಾಗಿ ನಿಲ್ಲುವುದಿಲ್ಲ. ಚಿಕ್ಕಂದಿನಲ್ಲಿ ಅಕ್ಕಂದಿರು ಅಸೂಯೆಪಟ್ಟುಕೊಳ್ಳುತ್ತಿದ್ದುದುಂಟು. "ಎರಡು ಕೈಯಲ್ಲೂ ಹಿಡಿದುಕೊಳ್ಳೋದಕ್ಕಾಗದಷ್ಟು ತಲೆಮುಡಿ ಹೆಣ್ಣಿಗೆ" ಎಂದು. ಬಿಚ್ಚಿದರೆ ಈಗಲೂ ಬೆನ್ನಿಗೆ ಹರಡಿಕೊಳ್ಳುತ್ತದೆ.

ಕನ್ನಡಿ ಚೂರುಗಳನ್ನು ತೆಗೆದುಕೊಂಡು ಹೋಗಿ ದೂರ ಎಸೆದು ಬರುತ್ತಿದ್ದಾಗ ಆ ಮನುಷ್ಯನನ್ನು ಕಂಡದ್ದು.

ಶಂಕರನ್ ನಾಯರ್ ಅಲ್ಲವಾ ಅದು? ಹೌದು. ಶಂಕರನ್ ನಾಯರ್. ಆತನೇ ಅಲ್ಲಿಗಾಗಿ ಬಂದದ್ದು ಒಳ್ಳೆಯದಾಯ್ತು.

ಬೇಲಿಯ ಹತ್ತಿರಕ್ಕೆ ಬಂದಾಗ ಅವಳು ಆತನನ್ನು ಕರೆದಳು.

"ಶಂಕರನ್ ನಾಯರೇ"

ಆತ ಕೊಂಗುಣೆ ಗಿಡಗಳ ಹತ್ತಿರ ಬಂದಾಗ ಅವಳ ಕಡೆಗೆ ನೋಡಿ.

"ಪಾರುಕುಟ್ಟಿ ಅಮ್ಮ ಕರೆದದ್ದಾ?"

"ಅವಸರ ಇಲ್ಲದೇ ಇದ್ರೆ ಒಂದು ಸಲ ಬಂದು ಹೋಗಿದ್ದರಾಗಿತ್ತು."

ಆತ ಎರಡು ಹೆಜ್ಜೆ ಮುಂದಿರಿಸಿ ಮೆಟ್ಟಿಲು ಹತ್ತಿ ಬಂದ.

ಪಡಸಾಲೆಯ ಜಗಲಿಯ ಮೇಲೆ ಅವಳು ಚಾಪೆಯನ್ನು ಹಾಸಿ ತಾನು ಬಾಗಿಲಿನ ಹತ್ತಿರ ನಿಂತುಕೊಂಡಳು. ಮಸಿ ಹಾಕಿ ಉಜ್ಜಿದ್ದ ನೆಲವನ್ನೂ, ಕುಡಿ ಬಾಡಿದ್ದ ಕರವೀರ ಗಿಡವನ್ನೂ ನೋಡುತ್ತ ಆತ ತಲೆ ತಗ್ಗಿಸಿಕೊಂಡು ಒಬ್ಬ ಮುಗ್ಧನಂತೆ ಕುಳಿತುಕೊಂಡ.

"ಕೋಂದುಣ್ಣಿ ತೀರಿಕೊಂಡ ಮೇಲೆ ನಾನು ಇದೇ ಮೊದಲ ಸಲ ಇಲ್ಲಿಗೆ ಬರ್ತಿರೋದು."

ಪಾರುಕುಟ್ಟಿಯ ಮುಖದಲ್ಲಿ ವಿಷಾದ ಛಾಯೆ ಕಾಣಿಸಿಕೊಂಡಿತು. ಉಗುಳು ನುಂಗಿಕೊಂಡು ಅವಳು ಹೇಳಿದಳು.

"ಯಾರೂ ಆಮೇಲೆ ಇಲ್ಲಿಗೆ ಬಂದಿಲ್ಲ."

ನಿಮಿಷಗಳು ಮೌನವಾಗಿ ಕಳೆಯುತ್ತಿದ್ದುವು.

"ತೋಟವೆಲ್ಲ ಹಾಳಾಗಿ ಹೋಯ್ತಲ್ಲ.?"

ಆ ತೋಟವನ್ನು ನೋಡುತ್ತ ಹೇಳಿದ.

"ಬೇಲಿ ಬಂಕ ಯಾವುದೂ ಇಲ್ಲ. ಕಂಡ ಕಂಡೋರ ದನಗಳೆಲ್ಲ ನುಗ್ಗಿ ಹಾಳು ಮಾಡ್ತಿವೆ. ಒಂದೇ ಒಂದು ಬಾಳೆ ಗಿಡ ಬಿಟ್ಟಿಲ್ಲ......"

ಬಂಜರಾಗಿದ್ದ ಆ ಸ್ಥಳದಲ್ಲಿ ಬಾಳೆಯ ಕಂದು ನೆಟ್ಟದ್ದು ಅಪ್ಪುಣ್ಣಿಯ ತಂದೆ. ಆತ ತೀರಿಕೊಂಡ ಮೇಲೆ ತೋಟದಲ್ಲಿ ಏನನ್ನೂ ಮಾಡಲಾಗಲಿಲ್ಲ. ಬಾಳೆ ಕಂದುಗಳನ್ನು ಕಿತ್ತು ಬೇರೆ ಕಡೆಗೆ ನೆಡದೆ ಅರ್ಧದಷ್ಟು ತೋಟ ಹಾಳಾಯಿತು. ಕುಂಡಂಗಲ್‌ಕಾರರ ಮನೆಯ ದನಗಳು ನುಗ್ಗಿ ಉಳಿದದ್ದನ್ನೂ ತಿಂದು ಹಾಳು ಮಾಡಿದುವು.

"ಬೇಲಿ ಕಟ್ಟಿಸಬೇಕು. ಎರಡು ಗೊನೆ ಬಾಳೆಕಾಯಿ ಇದ್ದರೆ ಉಪ್ಪು ಮೆಣಸಿನಕಾಯಿ ಕೊಂಡುಕೊಳ್ಳಬಹುದಲ್ಲ."

ಪಾರುಕುಟ್ಟಿ ಅದಕ್ಕೇನೂ ಮಾತಾಡಲಿಲ್ಲ.

"ಅಪ್ಪುಣ್ಣಿ ಎಲ್ಲಿ?"

"ಅವನು ಸ್ಕೂಲಿಗೆ ಹೋಗಿದ್ದಾನೆ."

"ಸ್ಕೂಲು ಬಾಗಿಲು ತೆಗೀತಲ್ಲವಾ?"

"ಈವತ್ತು ತೆಗೆಯುತ್ತೆ. ಅವನು ಎಂಟರಲ್ಲಿ ಪಾಸಾಗಿದ್ದಾನೆ. ಈವತ್ತು ಸರ್ಟಿಫಿಕೇಟು ತರೋದಕ್ಕೆ ಹೋಗಿದ್ದಾನೆ. ಅವನ ವಿಷಯ ಹೇಳೋದಕ್ಕೇ ಕರೆದದ್ದು."

"ಏನು?"

"ಅವನಿಗೆ ತೃತ್ತಾಲ ಸ್ಕೂಲಿಗೆ ಸೇರಬೇಕು ಅನ್ನೋ ಆಶೆ."

"ಹ್ಞೂಂ. ಅವನು ಓದಿ ಒಂದು ನೌಕರಿ ಅಂತ ಸಿಕ್ಕಿದರೆ ಆ ಮೇಲೆ ಅವನ ಹತ್ತಿರವೇ ಇರಬಹುದಲ್ಲ."

ಪಾರುಕುಟ್ಟಿಯ ಉಗುರುಗಳು ಬಾಗಿಲಿನ ಮೇಲೆ ಏನನ್ನೋ ಬರೆಯುತ್ತಿದ್ದುವು. ವಿಷಾದ ಬೆರೆತ ಧ್ವನಿಯಲ್ಲಿ ಹೇಳಿದಳು:

"ನನ್ನ ಕೈಯಲ್ಲಿ ಹೆಚ್ಚಿಗೆ ಓದಿಸೋದಕ್ಕಾಗೋದಿಲ್ಲ. ಆದರೆ ಅವನ ಆಸೆ ಅದೇ ಆಗಿದ್ದರೆ ಮತ್ತೇನು ಮಾಡ್ಲಿ?"

"ಹೂಂ. ಓದಲಿ. ಎಲ್ಲರಿಗೂ ದೇವರು ದಾರಿ ತೋರಿಸಿಯೇ ತೋರಿಸ್ತಾನೆ ಪಾರು ಕುಟ್ಟಿ ಅಮ್ಮ."

"ಫೀಸು ಆಗಬೇಕು. ತಿಂಗಳು ತಿಂಗಳಿಗೆ ನಾಲ್ಕು ರೂಪಾಯಿ ಹದಿಮೂರಾಣೆ ಹೊಂದಿಸಬೇಕು. ಇನ್ನು ಸೇರುವಾಗಿನ ಖರ್ಚು ಬೇರೆ. ಅಮಿನುಮ್ಮನ ಚೀಟಿ ಸಿಕ್ಕಿದ್ದ ರಲ್ಲಿ ಎಂಟು ರೂಪಾಯಿ ತೆಗೆದಿಟ್ಟಿದ್ದೀನಿ."

ಪಾರುಕುಟ್ಟಿ ಅಮ್ಮ ಹಣ ಸಾಲ ಕೇಳುವುದಕ್ಕಾಗಿರಬೇಕು ಕರೆದದ್ದು ಎಂದು ಆತ ಊಹಿಸಿದ್ದ. ಕೈಯಲ್ಲಿ ಏನೂ ಇಲ್ಲ; ಕೇಳಿದರೆ ಏನು ಮಾಡುವುದು ದೇವರೇ. ಅಂದು ಣ್ಣಿಯ ಹಣ ಈವತ್ತು ಸಿಕ್ಕಿದ್ದಿದ್ದರೆ ಚೆನ್ನಾಗಿತ್ತು ಎಂದು ಕೊಂಡಿದ್ದ.

"ನಾಳೆ ಅವನನ್ನ ಸ್ಕೂಲಿಗೆ ಸೇರಿಸೋದಕ್ಕೆ ಒಂದು ಸಲ ತೃತ್ತಾಲದ ವರೆಗೆ ಹೋಗಿ ಬರಬೇಕು. ಅವನ ಜೊತೆಗೆ ಹೋಗಿ ಬರಲಿ ಅಂತಲೇ......ನನಗೆ ಯಾವುದಕ್ಕೂ ಒಬ್ಬ ಮನುಷ್ಯ ಅಂತ ಇಲ್ಲ."

ಪಾರುಕುಟ್ಟಿ ಮತ್ತೂ ಕಣ್ಣೊರಸಿಕೊಂಡಳು. "ನಾನು ಹೋಗಿ ಬರ್ತೀನೆ ಪಾರುಕುಟ್ಟಿ ಅಮ್ಮ. ಅದಕ್ಕಾಗಿ ಯೋಚನೆ ಮಾಡೋದೇನೂ ಬೇಡ."

ಆತ ಟವಲ್ ತೆಗೆದುಕೊಂಡು ಮುಖವನ್ನು ಒರೆಸಿಕೊಳ್ಳುತ್ತಾ ಹೇಳಿದ.

"ಕೈಯಲ್ಲಿ ಹಣಕಾಸು ಇಲ್ಲ ಅಷ್ಟೆ. ಆದರೆ ನಿಮ್ಮಂಥವರಿಗೆ ಕೈಯಲ್ಲಿ ಆದ ಸಹಾಯ ಮಾಡಬಲ್ಲೆ."

ಹರಡಿಕೊಂಡಿದ್ದ ತಲೆಗೂದಲೂ ವಿಷಾದ ತುಂಬಿದ ಕಣ್ಣುಗಳೂ ಆಗಿ ತಲೆಬಗ್ಗಿಸಿ ಕೊಂಡು ನಿಂತಿದ್ದ ಆ ಸ್ತ್ರೀಯನ್ನು ಕಾಣುವಾಗ ಶಂಕರನ್ ನಾಯರ ಮನಸ್ಸಿನಲ್ಲಿ ಯಾವುದೋ ಒಂದು ಹಿಂದಿನ ಚಿತ್ರ ನೆನಪಾಯಿತು......ಸ್ಮಶಾನದಲ್ಲಿ ನಿಂತ ಚಂದ್ರ ಮತಿಯ ಚಿತ್ರ !

ಇಬ್ಬರೂ ಏನನ್ನೂ ಮಾತನಾಡಲಿಲ್ಲ. ಅವಳು ಹಿಂದಿನ ಕಾಲವನ್ನು ಕುರಿತು ಏನನ್ನೋ ಯೋಚಿಸುತ್ತಿದ್ದಳು. ಆತ ಮನಸ್ಸಿನಲ್ಲಿ ಏನೇನೋ ಯೋಜನೆ ಮಾಡುತ್ತ ಅನೇಕ ವಿಚಾರಗಳನ್ನು ಒಂದು ಕಡೆಗೆ ತಂದುಕೊಂಡು ಆಲೋಚಿಸುತ್ತಿದ್ದ.

ಥಟ್ಟನೆ ನೆನಪು ಮಾಡಿಕೊಂಡವಳಂತೆ ಅವಳು ಹೇಳಿದಳು:

"ಅಪ್ಪುಣ್ಣಿ ಅಲ್ಲಿಗೆ ಹೋಗಿದ್ದ."

"ನನಗೆ ಗೊತ್ತು."

"ಹೋಗಬಾರದಿತ್ತು."

"ಹೋದದ್ದರಲ್ಲಿ ತಪ್ಪೇನೂ ಇಲ್ಲ. ಅವನು ಹುಡುಗನಾದದ್ದರಿಂದ ಹೋಗಾಚೆ ಅಂದದ್ದಕ್ಕೆ ಹೊರಟು ಬಂದ." ಆತನ ಅಂತರಂಗದಲ್ಲಿ ಎಲ್ಲಿಯೋ ದ್ವೇಷ ಹೊಗೆಯಾಡುತ್ತಿತ್ತು.

"ಆ ಮನೆಯಲ್ಲಿ ಎಲ್ಲರಿಗೂ ಇರುವ ಹಾಗೆ ಅವನಿಗೂ ಹಕ್ಕಿದೆ. ಅವರ ಒಂದು...."

ಆತ ಒಂದು ಸಲ ಗಟ್ಟಿಯಾಗಿ ಮೂಗಿನಿಂದ ಶಬ್ದ ಮಾಡಿ ಹೇಳಿದ:

"ಇದನ್ನೆಲ್ಲಾ ನೋಡೋ ದೇವರು ಮೇಲ್ಗೊಬ್ಬ ಇಲ್ಲವಾ? ಇದರ ನಂತರ ಇದ್ದೀತು?"

ಶಂಕರನ್ ನಾಯರ್ ಜಗಲಿಯ ಮೇಲಿನಿಂದ ಎದ್ದ. ಮೆಟ್ಟಿಲಿನ ಹತ್ತಿರ ನಿಂತು ಸೂರು ಕಟ್ಟು ಹಿಡಿದುಕೊಂಡು ಹೊರಕ್ಕೆ ಉಗುಳುತ್ತ ಮತ್ತೂ ಏನನ್ನೋ ಆಲೋಚಿಸುತ್ತ ನಿಂತ.

"ನಾನು ಬೆಳಗ್ಗೆ ಬರ್ತೀನಿ. ಅಪ್ಪುಣ್ಣಿ ಹೊರಟಿರಲಿ."

"ಆಯ್ತು."

ಆತ ಮುಂದೆ ಹೆಜ್ಜೆ ಹಾಕಿದ.

ಆಮೇಲೆ ಹಣೆ ಒರೆಸಿಕೊಳ್ಳುತ್ತ ಗಂಭೀರವಾದ ಧ್ವನಿಯಲ್ಲಿ ಹೇಳಿದ.

"ಯಾವಾಗಲಾದರೂ ಸರಿ. ಏನಾದರೂ ಬೇಕಾಗಿದ್ದರೆ ನನ್ನ ಹತ್ತಿರ ಸಂಕೋಚವಿಲ್ಲದೆ ಹೇಳಬೇಕು ಪಾರುಕುಟ್ಟಿ ಅಮ್ಮ."

ಟವಲ್ ಕೊಡವಿಕೊಂಡು ಭುಜದ ಮೇಲಿಟ್ಟುಕೊಳ್ಳುತ್ತ ವೇಗವಾಗಿ ಹೆಜ್ಜೆಯಿರಿಸಿದ.

ದೋಣಿ ನಡೆಸುವ ಅತ್ತುಣ್ಣಿ ಎರಡು ರೂಪಾಯಿ ಸಾಲ ಈಸಿಕೊಂಡದ್ದನ್ನು ಹಿಂದಿರುಗಿಸಲಿಲ್ಲ. ಕೇಳಿ ಕೇಳಿ ಸಾಕಾಯ್ತು. ನಿನ್ನೆ ರಸ್ತೆಯಲ್ಲಿ ಹಿಡಿದು ನಿಲ್ಲಿಸಿದ್ದ. ಕೆಲವು ದಿವಸಗಳಿಂದ ಆ ನಾಚಿಕೆಯಿಲ್ಲದವನು ತಪ್ಪಿಸಿಕೊಂಡು ತಿರುಗುತ್ತಿದ್ದ. ಈ ದಿನ ಖಂಡಿತ ಕೊಡುತ್ತೇನೆಂದು ದೇವರ ಮೇಲೆ ಆಣೆಯಿಟ್ಟು ಹೇಳಿದ್ದಾನೆ ಎಂದು ಅವನನ್ನು ಹುಡುಕಿಕೊಂಡು ಹೊರಟಿದ್ದ ಶಂಕರನ್ ನಾಯರ್.

ಪಾರುಕುಟ್ಟಿ ಅಮ್ಮನ ಮನೆಯಿಂದ ಹೊರಟಾಗ ಶಂಕರನ್ ನಾಯರ್ ಅತ್ತುಣ್ಣಿಯ ಎರಡು ರೂಪಾಯಿಯ ವಿಷಯವನ್ನು ತತ್ಕಾಲಕ್ಕೆ ಮರೆತಿದ್ದ. ರಸ್ತೆಗೆ ಬಂದಾಗ ದಿಕ್ಕಿಲ್ಲದ ಹೆಣ್ಣಿನ ವಿಷಯ ಆಲೋಚಿಸುತ್ತಾ ನಡೆಯುತ್ತಿದ್ದ.

ಒಳ್ಳೆಯ ಮನೆಯಲ್ಲಿ ಹುಟ್ಟಿ ಬೆಳೆದ ಹೆಣ್ಣು. ಮನುಷ್ಯನ ಸ್ಥಿತಿ ಅಂದರೆ ಹೀಗೇ ಅಲ್ಲವೇ? ಎನ್ನುವ ವೇದಾಂತವೂ ಅವನಿಗೆ ತೋರಿತು.

ಕೇದಿಗೆ ವನದ ಮೂಲಕ ಆತ ರಸ್ತೆ ತಲುಪಿದ......ಆಕೆಗೆ ಏನಾದರೂ ಕೇಡುಂಟಾದರೆ ಆ ಹುಡುಗನ ಸ್ಥಿತಿ ಏನು? ನಾಲ್ಕು ದಿನ ಖಾಯಿಲೆ ಮಲಗಿದರೆ ಒಲೆ ಹಚ್ಚುವುದಕ್ಕೆ ಕೂಡ ಏನೂ ಇಲ್ಲ. ಮೊದಲು ಮನೆಯ ಮುಂದೆ ಹತ್ತು ಸಾವಿರ ಕೊಳಗದ ಭತ್ತದ

ರಾಶಿ ಬಂದು ಬೀಳುತ್ತಿದ್ದ ಒಂದು ಕುಟುಂಬದ ಹೆಣ್ಣು ಅವಳು. ಆ ದೃಶ್ಯ ಆಗಾಗ ಕಣ್ಣೆದುರಿಗೆ ಕಟ್ಟಿದಂತೆ ನಿಲ್ಲುತ್ತದೆ. ರಾತ್ರಿಯಲ್ಲಿ ತಾಯಿಯೂ ಮಗನೂ ಇಬ್ಬರೇ ಮಲಗಬೇಕು. ಬಾಗಿಲು ಭದ್ರವಾಗಿಲ್ಲದ ಮನೆಯಲ್ಲಿ ಯೌವನ ದಾಟಿಲ್ಲದ ಹೆಣ್ಣು ಒಂಟಿಯಾಗಿ.

ಆದರೂ ಅವಳಿಗೆ ಮನೆತನ ಅನ್ನುವುದು ಇದೆ. ಭಿಕ್ಷೆ ಎತ್ತಿದರೂ ಆ ಮನೆತನದ ಹೆಸರು ಹೋಗುವುದಿಲ್ಲ. ಅದು ಅವಳನ್ನು ನೋಡಿದರೇ ತಿಳಿಯುತ್ತದೆ.

ನಂಬೂದಿರಿ ಮನೆಯಲ್ಲಿ ಇನ್ನೊಬ್ಬ ಕೆಲಸದವಳು ಶಂಕರನ್ ನಾಯರ್‌ಗೆ ಗೊತ್ತಿದೆ. ಮಹಾತಾಯಿ! ನಲವತ್ತು ವರ್ಷ ಆಗಿದೆ. ಆದರೂ ಕುಣಿದಾಡುತ್ತ ಅವಳು ನಡೆಯುವುದು. ಅವಳು 'ಶಂಕರನ್ ನಾಯರೇ' ಎಂದು ಕರೆದಾಗ ಒದೆಯಬೇಕು ಅನ್ನಿಸುತ್ತೆ. ಅವಳ ನಾಟ್ಯವೋ! ನಡೆಗೆಯೋ! ತಾನಿನ್ನೂ ಹದಿನಾರು ವರ್ಷದ ಹುಡುಗಿ ಅಂದು ಕೊಂಡಿದ್ದಾಳೆ. ಹೊರಗೆ ಅಂಗಳದಲ್ಲಿ ಕಸಗುಡಿಸುತ್ತ ಮನೆಗೆಲಸದ ನೆಪದಲ್ಲಿ ನಿಲ್ಲುವ ಹೊತ್ತಿನಲ್ಲಿ ಅವಳನ್ನೇ ನೋಡಿಕೊಂಡು ನಿಲ್ಲುವ ಅಯೋಗ್ಯ ನಂಬೂದಿರಿಯೂ ಇದ್ದಾನೆ. ಅಯೋಗ್ಯ, ಅಯೋಗ್ಯ! ಅವನೊಬ್ಬ ಬ್ರಾಹ್ಮಣನಲ್ಲವೆ? ಒಂದಿಷ್ಟಾದರೂ ಮಾನ ಮರ್ಯಾದೆ ಇರಬೇಕು. ಬೆಳಗ್ಗೆ ಅವನು ಎಲೆ ಅಡಿಕೆ ಪೆಟ್ಟಿಗೆ ಮುಚ್ಚಳ ತೆಗೆದಿಟ್ಟುಕೊಂಡು ಜಗಲಿಯ ಮೇಲೆ ಬಂದು ಕುಳಿತುಕೊಳ್ಳುತ್ತಾನೆ. ಕಣ್ಣು ಯಾವಾಗಲೂ ಅಂಗಳದಲ್ಲಿ ಚಾಪೆ ಹಾಸಿ ಭತ್ತ ಒಣಗು ಹಾಕುವ ಹೆಂಗಸರ ಮೇಲೆ. ಮೊದಲು ಆ ಮನೆಯಲ್ಲಿದ್ದ ಕೆಲಸದವಳ ಮಗಳಿಗೂ ಅವನ ಹಾಗೆ ಓರೆ ತುಟಿಯಿದೆ.

ಪಾರುಕುಟ್ಟಿ ಅಮ್ಮ ನಂಬೂದಿರಿ ಮನೆಗೆ ಕೆಲಸಕ್ಕೆ ಹೋಗುತ್ತಿದ್ದಾಳೆ ಎಂದು ತನ್ನ ಹತ್ತಿರ ಹೇಳಿದ್ದು ಯಾರು! ಆಗ ಆಕೆಯ ವಿಷಯದಲ್ಲಿ ಸಿಟ್ಟು ಬಂದಿತ್ತು. ತರವಾಡಿನ ಮಾನ ಹಾಳು ಮಾಡಿದ್ದು ಸಾಲದು ಅಂತ ಈಗ ನಂಬೂದಿರಿಗಳಿಗೆ ಅವಮಾನ ಮಾಡುವುದಕ್ಕೆ ಬಂದಿದ್ದಾಳೆ ಎಂದು ಮೊದಲು ಅನ್ನಿಸಿತ್ತು. ಆದರೆ ನಂಬೂದಿರಿ ಮನೆಯ ವ್ಯವಸಾಯ ನೋಡಿಕೊಳ್ಳಲು ದೊಡ್ಡ ನಂಬೂದಿರಿ ತನ್ನನ್ನು ನೇಮಿಸಿದಾಗ ಅವನ ಭಾವನೆ ಬದಲಾಯಿಸಿತು. ಬೆಳಗ್ಗೆ ಬರುತ್ತಾಳೆ. ಕಾರ್ಯದರ್ಶಿ ಹೇಳಿದ ಕೆಲಸ ಮಾಡುತ್ತಾಳೆ, ಹೋಗುತ್ತಾಳೆ. ಪಾರುಕುಟ್ಟಿ ಅಮ್ಮನಿಗೆ ಗೊತ್ತಿಲ್ಲದಂತೆ ಅವಳನ್ನು ಗಮನಿಸಿದ್ದಾನೆ. ಒಳ್ಳೆಯ ಗಾಂಭೀರ್ಯವೂ ಬಿಗುಮಾನವೂ ಇದೆ. ಹೊರಗಿನ ಅಂಗಳಕ್ಕೆ ಕಾಲಿರಿಸಿದ್ದೇ ಇಲ್ಲ. ಯಾರಾದರೂ ಮೊಗಸಾಲೆಯ ಹತ್ತಿರ ಇದ್ದರೆ ಆ ದಾರಿಯಲ್ಲಿ ಬರುವುದಿಲ್ಲ. ಗಂಡಸರ ಮುಖ ನೋಡಿ ಮಾತನಾಡುವುದಂತೂ ಇಲ್ಲವೇ ಇಲ್ಲ. ಹೀಗೆಲ್ಲ ಆಗಬೇಕಾಗಿದ್ದವಳಲ್ಲ.

"ಹಣೆಯಲ್ಲಿ ಒಳ್ಳೆಯದು ಬರೆಯಲಿಲ್ಲ. ಹಣೆಯಲ್ಲಿ ಒಳ್ಳೆಯದು ಬರೆಯಲಿಲ್ಲ."

"ನನ್ನವರು ಅಂತ ಯಾರೂ ಇಲ್ಲ......"

ಅಮ್ಮ, ಅಕ್ಕಂದಿರು, ಚಿಕ್ಕಪ್ಪ ಇನ್ನೂ ಯಾರ್‍ಯಾರೋ ಇದ್ದಾರೆ. ವಡಕ್ಕೇಪಾಟ್‌ನಿಂದ ಅಲ್ಲಿಗಿರುವುದು ಕೇವಲ ಎರಡು ಮೈಲಿ. ಎಷ್ಟು ದೂರವಾಗಿ ಹೋಗಿದೆ! ಎಷ್ಟೊಂದು ಅಂತರವುಂಟಾಗಿದೆ! ಎಂದು ಆಶ್ಚರ್ಯಪಟ್ಟುಕೊಂಡ. ಅವಳು ತೌರಿಗೆ ಅಪಮಾನ ಮಾಡಿ ಬಂದಳು......

ಅಪ್ಪುಣ್ಣಿಗೆ ಅವರು ಅಪಮಾನ ಮಾಡಿ ಕಳುಹಿಸಿದರು. ಅವನೇನು ತಪ್ಪು ಮಾಡಿದ್ದ? ಅವನೂ ಆ ಕುಟುಂಬಕ್ಕೇ ಸೇರಿದವನು. ಕೇವಲ ದೊಡ್ಡ ಮನೆಯವರಾದರೆ ಸಾಲದು. ಕುಟುಂಬದ ಮನೆಗೆ ಸೇರಿದವನೊಬ್ಬ ಬಂದಿದ್ದಾನೆ ಎಂದು ನೋಡುವ ವಿಶಾಲ ಮನೋಭಾವ ಇರಬೇಕು.

ಶಂಕರನ್ ನಾಯರಿಗೆ ವಿಪರೀತ ಸಿಟ್ಟು ಬಂದು ಒಂದು ಸಲ ಕ್ಯಾಕರಿಸಿ ಉಗುಳಿದ.

ದಾರಿಯಲ್ಲಿ ಉಣ್ಣೇರಿಯನ್ನು ಕಂಡಾಗ ಶಂಕರನ್ ನಾಯರ್‌ಗೆ ಏನೋ ತಕ್ಷಣ ನೆನಪಾಯಿತು.

"ನಿಮ್ಮ ಹತ್ರ ಬೇಲಿಯ ಮುಳ್ಳುಂಟಾ ಉಣ್ಣೇಯರೆ?"

"ನನ್ನ ಮುಳ್ಳನ್ನೆಲ್ಲ ಕದ್ದುಕೊಂಡು ಹೋಗಲಿಲ್ಲವಾ? ಇನ್ನೆಲ್ಲೋ ಸ್ವಲ್ಪ ಉಳಿದಿರಬೇಕು. ಬೇಕಾದರೆ ತೆಗೆದುಕೊ."

"ನನಗೆ ನಾಲ್ಕೈದು ಹೊರೆ ಮುಳ್ಳು ಬೇಕು. ನಾನು ನಾಳೆ ನಂಬೂದಿರಿ ಮನೆ ಕೆಲಸ ಮಾಡುವ ಅಪ್ಪನನ್ನು ಕಳಿಸ್ತೀನಿ."

"ಹಾಗಾದರೆ ನಿಮ್ಮ ಬೇಲಿ ಕೆಲಸ ಇನ್ನೂ ಆಗಿಲ್ಲವಾ?"

"ನನ್ನದಾಯ್ತು. ಬೇರೆಯವರಿಗೆ, ನಾಳೆ ಅಪ್ಪನನ್ನು ಸಾಯಂಕಾಲಕ್ಕೆ ಮೊದಲು ಕಳಿಸ್ತೀನಿ."

"ಕಳಿಸು."

ಉಣ್ಣೇರಿಗೆ ಮುಳ್ಳಿನ ಹಣ ಕೊಡಬೇಕಾಗಿಲ್ಲ. ಇಬ್ಬರು ಹೊಲೆಯರನ್ನು ಕರೆದುಕೊಂಡು ಬಂದು ಕಟ್ಟಿಸಿದರೆ ಒಂದು ದಿನದಲ್ಲಿ ಬೇಲಿ ಮುಗಿಯುತ್ತದೆ. ಎರಡು ರೂಪಾಯಿ ಕೂಲಿ ಕೊಡಬೇಕಾಗಬಹುದು. ಚಿಂತೆಯಿಲ್ಲ.

ಎರಡು ರೂಪಾಯಿ ವಿಷಯ ಬಂದಾಗ ದೋಣಿಯ ಅತ್ತುಣ್ಣಿ ಕೊಡುತ್ತೇನೆಂದು ಹೇಳಿದ್ದದ್ದು ನೆನಪಾಯಿತು. ಎಲ್ಲಿ ಆ ಎರಡು ರೂಪಾಯಿ?

ಯೂಸೋಫನ ಅಂಗಡಿಯ ಹತ್ತಿರಕ್ಕೆ ಹೋದ. ಅಲ್ಲಿ ಬೀದಿಯಲ್ಲಿ ಬಟ್ಟೆ ಮಾರುತ್ತ ಹೋಗುತ್ತಿದ್ದವನನ್ನು ಕರೆದು ಯಾರೋ ಇಬ್ಬರು ಚೌಕಾಸಿ ಮಾಡುತ್ತಿದ್ದರು.

"ನಮ್ಮ ದೋಣಿ ನಡೆಸೋ ಅತ್ತುಣ್ಣಿ ನೋಡಿದೆಯಾ?"

"ಬೆಳಗ್ಗೆ ಇಲ್ಲಿಗಾಗಿ ಹೋದ." ಮುಸಲಿಯಾರ್ ಹೇಳಿದ:

"ನಮ್ಮ ಏನುದ್ದೀನ್ ಅಂಗಡಿಯಲ್ಲಿ ಕೂತಿರಬಹುದು. ಕಳ್ಳ ಭಡವ. ನಾನು ಕಾಸು

ಕೇಳ್ತೀನಿ ಅಂತ ನಮ್ಮ ಅಂಗಡಿಗೆ ಬರೋದಿಲ್ಲ. ನನಗೂ ನಾಲ್ಕಾಣೆ ಕೊಡಬೇಕು."

ಏನುದ್ದೀನನ ಅಂಗಡಿಯಲ್ಲಿ ಅತ್ತುಣ್ಣಿ ಇರಲಿಲ್ಲ. 'ಹೋಗಲಿ, ಅಯೋಗ್ಯ! ಎಂದು ಮನಸ್ಸಿನಲ್ಲೇ ಅವನನ್ನು ಬಯ್ಯುತ್ತಾ ತಾನು ತರಕಾರಿ ನೆಟ್ಟಿದ್ದ ಸ್ಥಳಕ್ಕೆ ಬಂದ. ಹೊಳೆಯ ಪಕ್ಕದಲ್ಲಿ ಸ್ವಲ್ಪ ಸ್ಥಳವನ್ನು ಹರಾಜಿನಲ್ಲಿ ತೆಗೆದುಕೊಂಡಿದ್ದ. ಮುಳ್ಳು ಸೌತೆಯನ್ನೂ ಕುಂಬಳವನ್ನೂ ನೆಟ್ಟಿದ್ದಾನೆ. ಎರಡು ಸಲ ಕಾಯಿ ತೆಗೆದಿದ್ದಾನೆ. ಹೊಸ ಮಳೆಬಿದ್ದ ಮೇಲೆ ಕುಯ್ದಿಲ್ಲ. ಚಂದುವಿನ ಹತ್ತಿರ ನೀರೆತ್ತುವ ಕೊಟ್ಟನ್ನು ತೆಗೆದುಕೊಂಡು ಬಂದು ಬಗಿನೆ ಮರದ ಕಾಲುವೆಯ ಹತ್ತಿರಕ್ಕೆ ಬಂದ. ಅದಕ್ಕೆ ನೀರೆತ್ತಿ ಅಲ್ಲಿದ್ದ ಗುಂಡಿಯನ್ನು ತುಂಬಿಸಿದ ಆ ಮೇಲೆ ಗಿಡಗಳಿಗೆ—

ತರಕಾರಿಗೆ ನೀರೆತ್ತಿ ಆದ ಮೇಲೆ ಹೊಳೆಯಲ್ಲಿ ಮಿಂದು ಶಂಕರನ್ ನಾಯರ್ ರಸ್ತೆಗೆ ಬಂದಾಗ ವಾಪುವಿನ ಅಂಗಡಿಯ ಮುಂದೆ ಒಂದು ಕೂಗು ಕೇಳಿಸಿತು. ಮೀನು ಬಂದಿದ್ದುವು. ಹೋಗಿ ನೋಡಿದರೆ ನೆತ್ತಲ್ ಮೀನು. ಆದರೂ ಮೀನಲ್ಲವೇ ಎಂದು ಎರಡಾಣೆಗೆ ತೆಗೆದುಕೊಂಡ.

ಇನ್ನೇನು ಹೊರಡಬೇಕು ಎನ್ನುವಷ್ಟರಲ್ಲಿ ಅಂಗಡಿಯ ಜಗಲಿಯ ಮೇಲೆ ಕುಳಿತಿದ್ದ ಅಚ್ಯುಮಾನ್ ಕೂಗಿದ. ಹೋಗದಿದ್ದರೆ ಮುದುಕ ಸಿಟ್ಟು ಮಾಡಿಕೊಳ್ಳುತ್ತಾನೆ. ಹೋದರೆ ಅಲ್ಲಿಂದ ಬೇಗ ಬರುವ ಹಾಗಿಲ್ಲ. ಊರಿನಲ್ಲಿ ಎಲ್ಲಿ ನೋಡಿದರೂ ಅಚ್ಯುಮಾನ್ ಇರುತ್ತಾನೆ. ಸ್ವಲ್ಪ ಹತ್ತಿರದಲ್ಲೇ ಆತನ ಮನೆ. ಆದರೆ ರೋಡು ಪಕ್ಕದಲ್ಲಿ ಕಟ್ಟಿದ ಮಹಡಿಯ ಮೇಲೆ ಹೆಚ್ಚಿಗೆ ಇರುವುದು. ರಾಮಾಯಣ ಪಾರಾಯಣ ಮಾಡುವುದು. ಜೊತೆಗೆ ಮದುವೆಯ ದಳ್ಳಾಳಿಯ ಕೆಲಸ. ಯಾರಾದರೂ ಮಾತಿಗೆ ಸಿಕ್ಕಿದರೆ ಸಾಕು. ವೇದಾಂತ ಪ್ರಾರಂಭಿಸುವುದು ಆ ಮುದುಕನ ಕೆಲಸ.

ಶಂಕರನ್ ನಾಯರ್ ಮನೆಗೆ ಹಿಂದಿರುಗಿದಾಗ ಸಾಯಂಕಾಲವಾಗಿತ್ತು.

ಸಂಜೆಯ ಸೂರ್ಯನಿಗೆ ಗುಡ್ಡ ಮರೆಯಾಗಿದ್ದದ್ದರಿಂದ ಬಿಸಿಲು ತೆಂಗಿನ ಮರಗಳ ತುದಿಯಲ್ಲಿ ಕಾಣಿಸುತ್ತಿತ್ತು. ತುಳಸಿ ಕಟ್ಟೆಯಲ್ಲಿ ದೀಪ ಹಚ್ಚಿಟ್ಟು ಮನೆಯೊಳಗೂ ದೀಪ ಹಚ್ಚಿಟ್ಟು ಅಡಿಗೆಗೆ ಪ್ರಾರಂಭಿಸಿದ. ಅನ್ನ ಸಾರು ಮಾಡುವುದು ಮಾತ್ರ ಆತನಿಗೆ ಗೊತ್ತಿರುವುದು. ಒಂಟಿಯಾಗಿ ಅಡಿಗೆ ಮಾಡಿಕೊಂಡು ಊಟ ಮಾಡುವುದಕ್ಕೆ ಪ್ರಾರಂಭ ಮಾಡಿ ಎಷ್ಟೋ ವರ್ಷಗಳಾದುವು. ಆದರೆ ಈಗಲೂ ಅವನಿಗೆ ಗಂಜಿ ಬಸಿಯುವುದಕ್ಕೆ ಭಯ. ಅವನು ಗಂಜಿ ಬಸಿಯದೆ ಇಂಗಿಸುವುದೇ ಹೆಚ್ಚು. ಅಕ್ಕಿ ಕುದಿಯುವುದಕ್ಕಾರಂಭಿಸಿದಾಗ ಅರ್ಧ ಹೋಳು ತೆಂಗಿನ ಕಾಯಿ ತುರಿದು ಅದಕ್ಕೆ ಹಾಕುತ್ತಿದ್ದ. ಅವನ ನೆನಪಿನ ಪ್ರಕಾರ ಒಂಟಿ ಜೀವನವನ್ನು ಪ್ರಾರಂಭಿಸಿ ಹದಿನಾಲ್ಕು-ಹದಿನೈದು ವರ್ಷಗಳಾಗಿರಬಹುದು. ಅವನಿಗಿದ್ದ ಅಜ್ಜಿ ಮತ್ತು ಅಕ್ಕ ಸಾಂಕ್ರಾಮಿಕ ರೋಗದಲ್ಲಿ ತೀರಿಕೊಂಡರು.

ಅಡಿಗೆ ಮನೆಯಲ್ಲಿ ಉರಿಯ ನಾಲಗೆಯನ್ನು ನೋಡುತ್ತಾ ಕುಳಿತಿದ್ದ. ನೀರು ಇಂಗುತ್ತಾ ಬಂದಿತ್ತು. ದಿನಗಳನ್ನು ಕಳೆಯುವುದಕ್ಕೆ ನಂಬೂದಿರಿಗಳ ಮನೆ ಕೆಲಸ ಮಾಡಿ ಕೊಂಡಿದ್ದರೆ ಸಾಲದೆ ಮತ್ತೆ ಯಾಕೆ ಇಷ್ಟು ಕಷ್ಟ ಪಡುತ್ತೀಯೆ ಎಂದು ಜನರು ಕೇಳುವು ದುಂಟು. ನಿಜ, ತರಕಾರಿ ಬೆಳೆಸಿ, ನೇಂದ್ರ ಬಾಳೆ ನಟ್ಟು ಹಣ ಸಂಪಾದನೆ ಮಾಡಿ ಏನು ಮಾಡಬೇಕು?

ಮದುವೆಯಾಗು ಎಂದೂ ಜನರು ಉಪದೇಶಿಸುತ್ತಾರೆ. ಆಗ ಹೇಳುತ್ತಾನೆ:

"ನಲವತ್ತೆರಡು ವರ್ಷ ಕಳೆದಾಯ್ತು. ಇನ್ನೆಂಥದ್ದು ಹೆಣ್ಣು ಕಟ್ಟಿಕೊಳ್ಳೋದು? ಹೀಗೇ ಇದ್ದರಾಯ್ತು."

ಆದರೆ ಕೈಕಾಲು ಮುದುಡಿಕೊಂಡು ಬಿದ್ದಾಗ ಸಹಾಯಕ್ಕೆ ಮತ್ತೊಂದು ಕೈಯಿಲ್ಲ. ಕೆಲಸ ಮಾಡುವುದಕ್ಕಾಗವೆ ಹೋದ ಕಾಲದಲ್ಲಿ ಆ ಅನಾಥೆಯ ಪಾಡೇನು? ಕೊಟ್ಟಿಗೆ ಮುತ್ತಜ್ಜಿಯ ಜೀವನದ ನೆನಪಾಗುತ್ತದೆ. ಯಾರ ಮನೆ ಬಾಗಿಲಾದರೂ ಸರಿ ಹೋಗು ತ್ತಾಳೆ......ಅದನ್ನು ಊಹಿಸುವುದಕ್ಕೂ ಸಾಧ್ಯವಿಲ್ಲ. ಅದು ಕೂಡ ಕಾಲಿನಲ್ಲಿ ಶಕ್ತಿ ಯಿರುವ ವರೆಗೆ ಮಾತ್ರ. ಆ ಮೇಲೆ ಬೂದಿಗುಂಡಿಯಲ್ಲಿ ಉಪವಾಸ ಬಿದ್ದು ಸಾಯುವ ನಾಯಿಗೆ ಹಾಗೆ......

ಆ ಸ್ಥಿತಿಯನ್ನು ನೆನಸಿಕೊಂಡು ಆತ ನಡುಗಿದ.

ವಿವಾಹವನ್ನು ಕುರಿತು ಆಲೋಚನೆ ಮಾಡಿದ್ದ ಒಂದು ಕಾಲವೂ ಇತ್ತು. ಒಂದು ಹೆಣ್ಣಿನ ರೂಪು ಸದಾ ಕಣ್ಣಿಗೆ ಕಟ್ಟಿದಂತೆ ಇರುತ್ತಿದ್ದ ದಿನಗಳೂ ಇದ್ದುವು. ಆಗ ಅಜ್ಜಿಯೂ ಅಕ್ಕನೂ ಬದುಕಿದ್ದರು. ಅಜ್ಜಿಯೇ ಆ ಆಲೋಚನೆಯನ್ನು ತಲೆಯಲ್ಲಿ ತುಂಬಿದ್ದದ್ದು. ಕೈಹಿಡಿಯುವ ಮನಸ್ಸುಂಟಾಗುವಂತೆ ಮಾಡಿದ್ದದ್ದು. ಆದರೆ ದೈವ ಅದಕ್ಕೆ ದಾರಿ ಮಾಡಿಕೊಡಲಿಲ್ಲ.

"ಯಾಕೆ ದೈವವನ್ನು ದೂರಬೇಕು......? ಹಣೆಬರಹ ಚೆನ್ನಾಗಿಲ್ಲ."

ಮುಟ್ಟಿದರೆ ರಕ್ತ ಚಿಮ್ಮುತ್ತಿದ್ದ ಶರೀರ. ಸಾಯಂಕಾಲದ ಹೊತ್ತಿನಲ್ಲಿ ಅವಳನ್ನು ಕಂಡದ್ದು. ಬೆಳಗ್ಗೆ ಕೇಳಿದ್ದು ಅವಳು ತೀರಿಕೊಂಡಳು ಎನ್ನುವ ಸುದ್ದಿಯನ್ನು. ನಾಲ್ಕು ಸಲ ವಾಂತಿ ಮಾಡಿದಳು ಅಷ್ಟೆ. ಸಾಂಕ್ರಾಮಿಕ ರೋಗಕ್ಕೆ ಮೊದಲ ಆಹುತಿಯಾಗಿದ್ದಳು.

ಹತ್ತಿರದವರು ಅನ್ನಿಸಿಕೊಂಡಿದ್ದ ಅನೇಕರು ಸತ್ತರು. ಕುಟುಂಬದಲ್ಲಿ ಏಕಾಂಗಿಯಾದ ಕೆಲಸಮಾಡುತ್ತಿದ್ದ. ದಿನ ಕಳೆಯುತ್ತಿದ್ದ. ಜೀವನ ನೀರಸವಾಗಿ ಸಾಗುತ್ತಿತ್ತು. ಕ್ರಮೇಣ ಆ ದುಃಖ ತನಗರಿಯದಂತೆ ಮನಸ್ಸಿನಿಂದ ಮರೆಯಾಯಿತು.

ಒಲೆಯಲ್ಲಿ ಬೆಂಕಿಯ ಕೆಂಪು ನಾಲಗೆಗಳು ಮಡಕೆಯ ತಳವನ್ನು ನೆಕ್ಕುತ್ತಾ ಇರುವು ದನ್ನು ನೋಡುತ್ತಾ ಆತ ಕುಳಿತಿದ್ದ. ಗಂಜಿ ಕುದ್ದು ಮೇಲೆ ಬಂದು ಚೆಲ್ಲುತ್ತಿದ್ದಾಗ ವಾಸ್ತವ ಜಗತ್ತಿಗೆ ಬಂದ. ನೀರು ಚಿಮುಕಿಸಿದ, ನೊರೆ ಕೆಳಗಿಳಿಯಿತು.

ಊಟ ಮಾಡಿ ಹೊರಗಿನ ಜಗಲಿಯಲ್ಲಿ ಚಾಪೆ ಹಾಸಿಕೊಂಡು ಮಲಗಿದ್ದಾಗ ಮಾರನೆಯ ದಿನದ ಕೆಲಸ ನೆನಪಾಯಿತು. ಸ್ಕೂಲ್‌ವರೆಗೆ ಹೋಗಬೇಕು. ಅಪ್ಪುಣ್ಣಿಯನ್ನು ಸ್ಕೂಲಿಗೆ ಸೇರಿಸಬೇಕು. ಆಗ ಬೇಕಾಗಿದ್ದ ಕಾಲದಲ್ಲಿ ಮದುವೆ ಆಗಿದ್ದಿದ್ದರೆ ಆತನಿಗೂ ಅಪ್ಪುಣ್ಣಿಯ ವಯಸ್ಸಿನ ಒಬ್ಬ ಮಗನಿರುತ್ತಿದ್ದ. ಗದ್ದೆಯಲ್ಲಾಗಲೀ ತರಕಾರಿ ತೋಟದಲ್ಲಾಗಲೀ ಅವನನ್ನು ಕೆಲಸ ಮಾಡಲು ಬಿಡುತ್ತಿರಲಿಲ್ಲ. ಅವನೂ ಎರಡಕ್ಷರ ಕಲಿತು ಮೇಲೆ ಬರುತ್ತಿದ್ದ......ಕಳೆದು ಹೋದದ್ದನ್ನೇ ನೆನಸಿಕೊಂಡು ಏನು ಫಲ?

ಅಪ್ಪುಣ್ಣಿ ಅಭಿವೃದ್ಧಿಗೆ ಬರುತ್ತಾನೆ. ಹುಡುಗನ ಮುಖದಲ್ಲಿ ಒಳ್ಳೆಯ ಲಕ್ಷಣವಿದೆ. ನೋಡುವಾಗಲೇ ಗೊತ್ತಾಗುತ್ತದೆ.

"ಅಮ್ಮಾ ಭಗವತಿ, ಆತನಿಗೆ ಒಳ್ಳೆಯದನ್ನು ಮಾಡು."

ಆತ ಅಸ್ಪಷ್ಟವಾದ ಚಿತ್ರಗಳನ್ನು ಕಾಣುತ್ತಾ ಕತ್ತಲೆಯಲ್ಲಿ ಕಣ್ಣುರೆಪ್ಪೆ ಮುಚ್ಚಿಕೊಂಡು ಮಲಗಿದ.

* * * * *

ಹೈಸ್ಕೂಲಿಗೆ ಸೇರುವುದಕ್ಕೆ ಹೋಗುವ ದಿವಸ ಅಪ್ಪುಣ್ಣಿ ತುಂಬ ಸಂಭ್ರಮದಿಂದಿದ್ದ.

ಶಂಕರನ್ ನಾಯರ್ ಹೊತ್ತಿಗೆ ಮುಂಚೆಯೇ ಬಂದ. ಅದಕ್ಕೆ ಮೊದಲೇ ಅವನು ತಯಾರಾಗಿ ನಿಂತಿದ್ದ. ಫೀಸಿಗೆ ಬೇಕಾದ ಹಣವನ್ನು ಶಂಕರನ್ ನಾಯರ ಕೈಯಲ್ಲಿ ಅಮ್ಮ ಕೊಟ್ಟಳು. ಅವನು ಹೊರಟಾಗ ಅಮ್ಮ ಕಾಲುದಾರಿ ತಿರುಗುವ ವರೆಗೆ ನೋಡುತ್ತಾ ನಿಂತುಕೊಂಡಿದ್ದಳು.

ಹೈಸ್ಕೂಲಿಗೆ ಇರುವುದು ಐದೇ ಮೈಲಿ. ಆದರೂ ಅವನು ನಡೆದು ಹೋಗುತ್ತಿದ್ದಾಗ ಅಮ್ಮನಿಗೆ ಎಷ್ಟೊಂದು ವ್ಯಸನವಾಗಿತ್ತು!

ವಡಕ್ಕೇಪಾಟ್ ದಾರಿಗಾಗಿಯೇ ಹೋಗಬೇಕು. ಮನೆಯ ಮುಂಭಾಗಕ್ಕೆ ಹೋಗಿ ಸೇರುವ ಗದ್ದೆಯ ದೊಡ್ಡ ದಿಬ್ಬದ ಹತ್ತಿರ ಬಂದಾಗ ಒಂದು ಸಲ ಆ ಕಡೆಗೆ ನೋಡಬೇಕು ಎನ್ನಿಸಿತ್ತು. ಆದರೆ ಆ ಕಡೆಗೆ ನೋಡಲಿಲ್ಲ.

ದೊಡ್ಡ ಸ್ಕೂಲು. ಅವನು ಓದಿದ್ದ ಸ್ಕೂಲಿನಲ್ಲಿ ಆಫೀಸು ರೂಮಿಗೆ ಮಾತ್ರ ಹೆಂಚು ಹೊದಿಸಿರುವುದು. ಇಲ್ಲಿ ಎಲ್ಲವೂ ಹೆಂಚು ಹೊದಿಸಿದ ದೊಡ್ಡ ದೊಡ್ಡ ಕಟ್ಟಡಗಳು. ನಾಲ್ಕಿವೆ. ಮೆಟ್ಟಲಿನ ಹತ್ತಿರ ಸ್ಕೂಲಿನ ಹೆಸರನ್ನು ಎದ್ದು ಕಾಣುವ ದಪ್ಪ ಅಕ್ಷರಗಳಲ್ಲಿ ಒಂದು ಕಮಾನಿನಲ್ಲಿ ಬರೆದಿದ್ದಾರೆ.

ಸ್ಕೂಲಿಗೆ ಅಂಟಿದಂತೆ ಹೂವಿನ ತೋಟವಿದೆ. ಮನಕ್ಕಾವು ಸ್ಕೂಲಿನಲ್ಲೂ ಹೂದೋಟವಿದೆ. ಆದರೆ ಅದರಲ್ಲಿ ಹೂಬಿಡುವ ಒಂದೇ ಒಂದು ಗಿಡವಿರಲಿಲ್ಲ. ಹುಡುಗರು

ಅದರಲ್ಲಿ ಬದನೆಯನ್ನೂ ಬೆಂಡೆಯನ್ನೂ ಬೆಳಸುತ್ತಾರೆ. ಕಾಯಿಬಿಟ್ಟಾಗ ಉಪಾಧ್ಯಾಯರು ಕುಯ್ದುಕೊಂಡು ಕಾಗದದಲ್ಲಿ ಪೊಟ್ಟಣ ಕಟ್ಟಿಕೊಂಡು ಮನೆಗೆ ತೆಗೆದುಕೊಂಡು ಹೋಗುತ್ತಾರೆ. ತೋಟಗಾರಿಕೆಗಾಗಿಯೇ ಒಂದು ಪೀರಿಯಡ್ ಇದೆ.

ಬೆಲ್ ಹೊಡೆದಿರಲಿಲ್ಲ.

ರೋಡಿನಲ್ಲಿ, ಗೇಟಿನಲ್ಲಿ, ವೆರಾಂಡದಲ್ಲಿ ಎಲ್ಲಿ ನೋಡಿದರೂ ಹುಡುಗರು. ಸೇರಲು ಬಂದಿದ್ದವರೇ ಹೆಚ್ಚು. ಅವರನ್ನು ನೋಡಿದರೇ ಗೊತ್ತಾಗುತ್ತಿತ್ತು. ಅವನ ಹಾಗೆಯೇ ವಿಸ್ಮಯಕ್ಕೊಳಗಾಗಿದ್ದವರು. ಜೊತೆಯಲ್ಲಿ ಯಾರಾದರೂ ಪೋಷಕರು ಇರುತ್ತಿದ್ದರು.

ಅವನ ಸ್ಕೂಲಿನ ಹುಡುಗರ ಪೈಕಿ ಕೆಲವರು ಅಲ್ಲಿದ್ದರು.

ಆಫೀಸು ರೂಮಿನ ಮುಂದೆ ಇತರ ಹುಡುಗರ ಜೊತೆಯಲ್ಲಿ ಅವರೂ ಕಾದು ನಿಂತಿದ್ದರು. ಹೆಸರನ್ನು ಬರೆದು ಮೊದಲೇ ಕ್ಲಾರ್ಕ್ ಹತ್ತಿರ ಕೊಟ್ಟಿದ್ದ. ಒಬ್ಬೊಬ್ಬರನ್ನಾಗಿ ಕರೆಯುತ್ತಿದ್ದರು.

ಹೆಡ್‌ಮಾಸ್ಟರ ರೂಮಿನ ಹತ್ತಿರ ಹೋದಾಗ ಆಶ್ಚರ್ಯಚಕಿತನಾದ. ನೀಲಿಯ ಬಟ್ಟೆ ಹೊದಿಸಿದ್ದ ದೊಡ್ಡ ಮೇಜು. ಗಾಜಿನ ಬೀರುಗಳು. ಗೋಡೆಯಲ್ಲಿ ತೂಗು ಹಾಕಿದ್ದ ಚಿತ್ರಗಳು. ಮೇಜಿನ ಮೇಲೆ ಒತ್ತಿದರೆ ಶಬ್ದ ಮಾಡುವ ಬೆಲ್, ಕಾಗದ ಪತ್ರಗಳ ಮೇಲೆ ಭಾರ ಹೇರುವುದಕ್ಕಾಗಿ ಇಟ್ಟಿದ್ದ ಸ್ಫಟಿಕದ ಕಲ್ಲುಗಳು. ಅದರ ಹಿಂದೆ ದೊಡ್ಡದೊಂದು ಕುರ್ಚಿಯಲ್ಲಿ ಕುಳಿತಿದ್ದ ಕತ್ತಿನಲ್ಲಿ ಮಡಿಕೆಗಳು ಕಾಣಿಸುತ್ತಿದ್ದ ಒಬ್ಬ ಆಜಾನುಬಾಹು ವ್ಯಕ್ತಿ, ಹೆಡ್‌ಮಾಸ್ಟರ್.

ಸರ್ಟಿಫಿಕೇಟ್ ನೋಡಿದರು.

ಹೆಸರು, ವಯಸ್ಸು, ಮಾರ್ಕ್ಸ್ ಆದರಲ್ಲಿತ್ತು.

ಹೆಡ್‌ಮಾಸ್ಟರ್ ಕೇಳಿದರು.

"ತಂದೆಯ ಹೆಸರು?"

"ಟಿ. ಕೋಂದುಣ್ಣಿ ನಾಯರ್." ಎಂದು ಹೇಳಿ ಇದ್ದ ವಿಷಯವನ್ನು ಹೇಳಿಬಿಡುವುದಕ್ಕಾಗಿ ಮತ್ತೂ ಒಂದು ವಿಷಯವನ್ನು ಸೇರಿಸಿದ.

"ತಂದೆ ಇಲ್ಲ."

"ಪೋಷಕರ ಹೆಸರು?"

ಹೆಡ್‌ಮಾಸ್ಟರ್ ಶಂಕರನ್ ನಾಯರ ಕಡೆಗೆ ತಲೆಯೆತ್ತಿ ನೋಡಿದರು.

ಶಂಕರನ್ ನಾಯರ್ ಯೋಚಿಸಿದ: ಯಾರು ಅಪ್ಪುಣ್ಣಿಯ ಪೋಷಕ? ಸ್ತ್ರೀಯಾದರೇನು? ಗಂಡಸರೇ ಆಗಬೇಕು ಅಂತ ಇದ್ದರೆ? ತೊಂದರೆ ಯಾಗುವುದು ಬೇಡವೆಂದು ಭಾವಿಸಿ ಹೇಳಿದ.

"ತೆಂಗು ಪೊಟ್ಟ ಶಂಕರನ್ ನಾಯರ್" ಎಂದು ಹೇಳಿ ತನ್ನ ವಿಳಾಸವನ್ನು ಹೇಳಿದ.

ಆಗ ಅಪ್ಪುಣ್ಣಿ ಆತನ ಮುಖವನ್ನೊಮ್ಮೆ ನೋಡಿದ. ಅದನ್ನು ಅವನು ನೋಡಿಯೂ ನೋಡದವನಂತೆ ನಟಿಸಿದ.

ಕಿಟಿಕಿಯ ಹತ್ತಿರ ಹೋಗಿ ಕೈಯಲ್ಲಿ ಫೀಸುಕೊಟ್ಟ. ನಾಳೆಯಿಂದ ಕ್ಲಾಸು. ಇನ್ನು ಹೋಗಬಹುದು.

ಅವರು, ಸಮಾಧಾನದಿಂದ ಹಿಂದಿರುಗಿದರು. ಅಂತೂ ಅಪ್ಪುಣ್ಣಿಯ ಮನಸ್ಸಿನಲ್ಲಿ ಒಂದು ಸಂಶಯ ಉಳಿದೇ ಇತ್ತು. ಶಂಕರನ್ ನಾಯರ್ ತನ್ನ ಪೋಷಕನಾಗುವುದು ಹೇಗೆ?

ಹೊಸ ಸ್ನೇಹಿತರ ಜೊತೆಯಲ್ಲಿ ಸ್ಕೂಲಿಗೆ ಹೋಗುವುದು ಅಪ್ಪುಣ್ಣಿಗೆ ತುಂಬ ಸಂತೋಷವನ್ನುಂಟು ಮಾಡಿತ್ತು.

ಪ್ರತಿದಿನ ಬೆಳಗ್ಗೆ, ಸಾಯಂಕಾಲ ವಡಕ್ಕೇಪಾಟ್ ಮಾರ್ಗವಾಗಿಯೇ ಹೋಗಬೇಕು. ದೊಡ್ಡ ದೊಡ್ಡ ಗದ್ದೆಯ ದಿಂಡುಗಳ ಪತ್ತಿರಕ್ಕೆ ಬಂದಾಗ ಒಂದು ಸಲ ಆ ಕಡೆಗೆ ನೋಡುತ್ತಿದ್ದ. ಗದ್ದೆಯ ಅಂಚು, ಒತ್ತೊತ್ತಾದ ಅಡಕೆಯ ಮರಗಳ ಗುಂಪು ಅದರ ಮಧ್ಯೆ ಚೌಕಟ್ಟಿನ ಮನೆ ಸರಿಯಾಗಿ ಕಾಣಿಸುವುದಿಲ್ಲ. ಹೊರಗಿನ ಅಂಗಳದಲ್ಲಿ ಯಾರೂ ಇರುವುದಿಲ್ಲ. ಸಾಯಂಕಾಲ ಹಿಂದಿರುಗಿ ಬರುತ್ತಿದ್ದಾಗ ದಿಂಡಿನ ಮೇಲೆ ನಿಧಾನವಾಗಿ ಹೆಜ್ಜೆಯಿಡುತ್ತಾ ಆ ಕಡೆಗೆ ನೋಡುತ್ತಿದ್ದ. ತಲೆಗೂದಲಿಲ್ಲದೆ ಹೊಳೆಯುವ ತಲೆಯನ್ನು ಎತ್ತಿಕೊಂಡು ತಿರುಗಾಡುತ್ತಿರಬಹುದು ದೊಡ್ಡ ಮಾವ. ಆಕಾಶ ತಲೆಯ ಮೇಲೆ ಬಂದು ಕುಳಿತಿದೆಯೋ ಎನ್ನುವಂತೆ ತನಗೇ ತಿಳಿಯದಂತೆ ಅಪ್ಪುಣ್ಣಿ ಬೇಗ ಬೇಗ ಹೆಜ್ಜೆಯಿಡುತ್ತಿದ್ದ. ಆತ ಅವನನ್ನು ನೋಡುವುದಿಲ್ಲ. ಎಷ್ಟು ಹುಡುಗರು ಅಲ್ಲಿಗಾಗಿ ಹೋಗುತ್ತಾರೆ!

ಗದ್ದೆಯುನ್ನು ಕೊಯ್ದಾಗಿತ್ತು. ವಡಕ್ಕೇಪಾಟ್ ತೋಟದ ಪತ್ತಿರ ಒಂದು ದಾರಿಯಿದೆ. ಆ ದಾರಿಯಲ್ಲಿ ಹೋದರೆ ಗದ್ದೆಯ ತೆಂಕು ಭಾಗದ ಅಂಚಿನಲ್ಲಿ ಮರಗೆಣಸಿನ ಗದ್ದೆಗಳಿವೆ. ಆ ದಾರಿಗಾಗಿ ಹೋದರೆ ಸುಲಭವಾಗಿ ರಸ್ತೆಯನ್ನು ತಲಪಬಹುದು. ಆದರೆ ಆ ದಾರಿಯಾಗಿ ಹೋಗುವಂತಿಲ್ಲ.

ವಡಕ್ಕೇಪಾಟ್‌ನಿಂದ ಇಬ್ಬರು ಅದೇ ಸ್ಕೂಲಿಗೆ ಬರುತ್ತಾರೆ. ಬಿ. ಕ್ಲಾಸಿನಲ್ಲಿ ಭಾಸ್ಕರನೂ ಸೆಕೆಂಡ್ ಫಾರಂನಲ್ಲಿ ಕೃಷ್ಣನ್ ಕುಟ್ಟಿಯೂ ಓದುತ್ತಿದ್ದಾರೆ.

ಡ್ರಿಲ್ ಕ್ಲಾಸಿನಲ್ಲಿ ಎ. ಅಂತಲೂ ಬಿ. ಅಂತಲೂ ವಿಭಾಗ ಮಾಡಿದ್ದರು. ಡ್ರಿಲ್ ಕ್ಲಾಸಿನಲ್ಲೇ ಅವನು ಭಾಸ್ಕರನನ್ನು ಮೊದಲು ನೋಡಿದ್ದು. ಕುಟ್ಟಿ ಶಂಕರನ್ ಹೇಳಿದ ಮೇಲೆ ಗೊತ್ತಾಯಿತು. ಮಾತಾಡಿಸಲೆ? ಆದರೆ ಡ್ರಿಲ್ ಕ್ಲಾಸಿನಲ್ಲಿ ಪತ್ತಿರ ಪತ್ತಿರ ನಿಂತಿದ್ದಾಗಲೂ ನೀರು ಕುಡಿಯುವುದಕ್ಕೆ ಹೋದಾಗ ತನ್ನನ್ನು ಕಂಡಾಗಲೂ ಭಾಸ್ಕರ ಮಾತನಾಡಿಸಲಿಲ್ಲ. ಭಾಸ್ಕರನಿಗೂ ಅವನು ಗೊತ್ತಿದೆ. ಭಾಸ್ಕರನೇ ಕುಟ್ಟಿ ಶಂಕರನ ಹತ್ತಿರ ಹೇಳಿದ್ದು.

ಭಾಸ್ಕರ ಫೋರ್ತ್ ಫಾರಂನಲ್ಲಿ ಇದು ಎರಡನೆಯ ವರ್ಷ. ಭಾಸ್ಕರನೂ ಕೃಷ್ಣನ್ ಕುಟ್ಟಿಯೂ ಸ್ಕೂಲಿಗೆ ಬರುವುದು ಒಂಟೆತ್ತಿನ ಬಂಡಿಯಲ್ಲಿ. ಬಣ್ಣ ಹಚ್ಚಿದ ಕೊಂಬು, ಕೊಂಬಿನ ತುದಿಯಲ್ಲಿ ಗೊಣಸುಗಳು, ಕತ್ತಿನಲ್ಲಿ ಚರ್ಮದ ಪಟ್ಟಿ, ಅದಕ್ಕೆ ಹೆಣೆದಿರುವ ಸಣ್ಣ ಸಣ್ಣ ಗಂಟೆಗಳು—ಇದ್ದ ಒಂದು ಬಿಳಿಯ ಎತ್ತಿನ ಬಂಡಿ. ಒಳಗೆ ಕುಳಿತುಕೊಳ್ಳಲು ಮೆತ್ತೆ ಹಾಕಿದೆ. ದೂರದಿಂದಲೇ ಬಂಡಿ ಬರುವ ಶಬ್ದವನ್ನು ಕೇಳಬಹುದಾಗಿತ್ತು.

ಬಂಡಿ ಯಾವುದೋ ಮಾಪಿಳ್ಳೆಯದು. ಅದಕ್ಕೆ ತಿಂಗಳು ತಿಂಗಳಿಗೆ ಬಾಡಿಗೆ.

ಅವರು ಬರುವುದನ್ನೂ ಹೋಗುವುದನ್ನೂ ಕಂಡು ಅಪ್ಪುಣ್ಣಿ ಅಸೂಯೆಗೊಂಡಿದ್ದ.

ಎಷ್ಟೋ ದಿವಸಗಳ ನಂತರ ತಿಳಿದದ್ದು. ಕ್ಲಾಸಿನಲ್ಲಿ ಹಲವರಿಗೆ ಅವರನ್ನು ಕಂಡರೆ ಅಸೂಯೆಯಿದೆ ಎಂದು. ಸ್ಕೂಲಿಗೆ ನಡೆಯದೆ ಬರುವುದು ಅವರಿಬ್ಬರು ಮಾತ್ರ.

ಭಾಸ್ಕರನಿಗೆ ತುಂಬ ಬಿಂಕವಿದೆ. ತಾನು ದೊಡ್ಡ ಮನುಷ್ಯನೆಂಬ ಭಾವನೆ ಅವನ ನಡಗೆಯಲ್ಲೂ ಮಾತಿನಲ್ಲೂ ಎದ್ದು ಕಾಣುತ್ತಿತ್ತು.

ನಾಲ್ಕು ಗಂಟೆಗೆ ಸ್ಕೂಲು ಬಿಟ್ಟು ಹೊರಟಾಗ ಗೇಟಿನಲ್ಲಿ ಬಂಡಿ ಸಿದ್ಧವಾಗಿರುತ್ತಿತ್ತು. ಹಸಿರು ಟವಲನ್ನು ಯಾವಾಗಲೂ ತಲೆಗೆ ಕಟ್ಟಿರುತ್ತಿದ್ದ ಒಬ್ಬ ಕುಳ್ಳ ಮನುಷ್ಯ ಬಂಡಿಯವನು. ಭಾಸ್ಕರ ಸ್ಕೂಲಿನ ಮೆಟ್ಟಿಲಿಳಿದು ಪುಸ್ತಕವನ್ನು ಮೊದಲು ಬಂಡಿಯೊಳಕ್ಕೆ ಎಸೆಯುವುದು. ಆ ಮೇಲೆ ಕೃಷ್ಣನ್ ಕುಟ್ಟಿಯ ಹತ್ತಿರ ಹೇಳುತ್ತಿದ್ದದ್ದು. "ಹತ್ತೋ ಹುಡುಗ !" ಎಂದು.

ಕೃಷ್ಣನ್ ಕುಟ್ಟಿ ಹತ್ತಿದ ಮೇಲೆ ಅವನು ಪಕ್ಕದಲ್ಲಿ ಕಾಲು ತೂಗುಬಿಟ್ಟು ಕುಳಿತುಕೊಳ್ಳುತ್ತಿದ್ದ. ಗೇಟಿನಲ್ಲೂ ರೋಡಿನಲ್ಲೂ ಹೋಗುತ್ತಿದ್ದ ಹುಡುಗರ ಅಸೂಯೆಯ ಕಣ್ಣುಗಳು ತನ್ನ ಮೇಲಿವೆ ಎಂದು ಅವನಿಗೆ ಗೊತ್ತು.

ಅಪ್ಪುಣ್ಣಿಯ ಸ್ನೇಹಿತ ಮುಹಮ್ಮದ್. ಹೊಸ ಜಮೀನಿನಿಂದ ಸ್ವಲ್ಪ ಹತ್ತಿರದಲ್ಲೇ ಮುಹಮ್ಮದನ ಮನೆ. ಅವನು ಹತ್ತಿರದ ದಾರಿಯಲ್ಲಿ ಒಂದು ಯಜ್ಞೇಶ್ವರ ದೇವಾಲಯದ ಹತ್ತಿರ ಕಾದು ನಿಂತುಕೊಳ್ಳುತ್ತಿದ್ದ. ಮುಹಮ್ಮದ್ ಆ ಒಂಟೆತ್ತಿನ ಬಂಡಿಯ ಭಂಗಿಯನ್ನು ಕುರಿತು ಹೇಳುತ್ತಿದ್ದದ್ದು ನಿಜ. ಓದಿ ಮುಗಿಸಿದ ಮೇಲೆ ವ್ಯಾಪಾರ ಮಾಡಿ, ಹಣ ಸಂಪಾದನೆ ಮಾಡಿ ಒಂದು ಸ್ಟೈಲಿನ ಒಂಟೆತ್ತಿನ ಬಂಡಿ ಕೊಂಡುಕೊಳ್ಳಬೇಕು ಎಂದು.

"ಬಂಡಿಯಲ್ಲಿ ಬರೋ ಭಾಸ್ಕರನೂ ನಮ್ಮ ಅಪ್ಪುಣ್ಣಿಯೂ ಒಂದೇ ಮನೆಯವರು." ಎಂದು ಮುಹಮ್ಮದ್ ಯಾರ ಹತ್ತಿರವೋ ಹೇಳಿದ.

ಅದು ಕ್ಲಾಸಿನಲ್ಲಿ ಕೆಲವರಿಗೆ ತಿಳಿಯಿತು. ಅದರಿಂದ ಹೆಚ್ಚು ಅಸಮಾಧಾನವುಂಟಾದದ್ದು ಭಾಸ್ಕರನಿಗೆ ತಿಳಿದಾಗ.

ಭಾಸ್ಕರನಿಗೂ ಅವನದೇ ಆದ ಸ್ನೇಹಿತರ ಒಂದು ಗುಂಪಿದೆ. ಕರುಣಾಕರನೂ

ರತ್ನಾಕರನೂ ಮತ್ತಿತರರೂ ಅವನನ್ನು ಹಿಂಬಾಲಿಸುವುದರ ಉದ್ದೇಶ ಕೆಲವು ಸಲ ಭಾಸ್ಕರ ಕೃಪೆತೋರಿ ಬಂಡಿಯಲ್ಲಿ ಕೂರಿಸಿಕೊಂಡಾನು ಎಂದು.

ಕರುಣಾಕರ ಭಾಸ್ಕರನ ಹತ್ತಿರ ಹೇಳಿದ.

ಅದನ್ನು ಕೇಳಿ ಭಾಸ್ಕರ ತಿರಸ್ಕಾರದಿಂದ ಒಂದು ಸಲ ನಕ್ಕು ಹೇಳಿದ.

"ಹ್ಞಂ, ನನ್ನ ಮನೆಯವನೇ ! ಕಳೆದ ಸಲ ಸರ್ಪನಾಟ್ಯ ನೋಡೋದಕ್ಕೆ ಬಂದಿದ್ದಾಗ ಏನಾಯ್ತು, ಕೇಳಿನೋಡು."

ಏನಾಯ್ತು? ಕೆಲವರಿಗೆ ಅದು ತಿಳಿಯಬೇಕು. ಆದದ್ದೇನು? ಒತ್ತಾಯ ಮಾಡಿ ಕೇಳಿದಾಗ ಹೇಳಿದ:

ಅದನ್ನು ಕೇಳಿ ಅಪ್ಪುಣ್ಣಿಗೆ ಅಳು ಬಂದಿತು. ಭಾಸ್ಕರನೇ ಸ್ವತಃ ಕೆಲವರ ಹತ್ತಿರ ಹೇಳಿದ.

"ಅವನು ನಮ್ಮ ಮನೆಗೆ ಬರುವ ಹಾಗಿಲ್ಲ. ಮಾವ ಅವನ ಕುತ್ತಿಗೆ ಹಿಡಿದು ಆಚೆಗೆ ನೂಕಿದರು. ಅವನು ಓಡಿದ ಹಾದೀಲಿ ಹುಲ್ಲು ಹುಟ್ಟಿತೋ ಇಲ್ಲವೋ ಗೊತ್ತಿಲ್ಲ."

ಮೌನವಾಗಿ ಅಪ್ಪುಣ್ಣಿ ಕೇಳಿಸಿಕೊಂಡ. ಭಾಸ್ಕರ ಅಂತ ಅಲ್ಲ ಅವನನ್ನು ಕರೆಯಬೇಕಾದದ್ದು ಭಾಸ್ಕರಣ್ಣ ಅಂತ. ಈ ಜನ್ಮದಲ್ಲಿ ಭಾಸ್ಕರಣ್ಣ ಎಂದು ಕರೆಯುವುದಿಲ್ಲ, ದುರಹಂಕಾರಿ !

ಅವನು ದೊಡ್ಡಮ್ಮನ ಮಗ. ಅವನ ತಂದೆ ನಂಬೂದಿರಿಯಾಗಿದ್ದ. ಅವನ ತಾಯಿಗೆ ಸ್ವಂತ ಮನೆ, ಭೂಮಿ ಇದೆ. ಅಲ್ಲಿಯ ಉಸ್ತುವಾರಿಯನ್ನು ಕಾರ್ಯದರ್ಶಿಯೇ ನೋಡಿಕೊಳ್ಳುತ್ತಾನೆ......

ಇತರ ಹುಡುಗರ ಜೊತೆಯಿಂದ ಸಾಧ್ಯವಾದಷ್ಟೂ ಪ್ರತ್ಯೇಕವಾಗಿ ನಿಲ್ಲಲು ಆಶೆಪಡುತ್ತಿದ್ದ. ಅವನು ನಂಬೂದಿರಿ ಮನೆಗೆಲಸದವಳ ಮಗ, ದೊಡ್ಡ ಮನೆಯಿಲ್ಲ. ಹಣವಿಲ್ಲ. ಎರಡು ಜೊತೆ ಬಟ್ಟೆ ಮಾತ್ರ ಅವನಿಗಿರುವುದು. ಅವನ್ನೇ ಬದಲಾಯಿಸಿ ಉಟ್ಟುಕೊಳ್ಳಬೇಕು. ಬೇಕಾಗುವ ಪುಸ್ತಕಗಳಿಲ್ಲ, ಲೆಕ್ಕ ಮಾಡುವುದಕ್ಕೆ ದೊಡ್ಡ ಬೌಂಡು ನೋಟ್ ಬುಕ್ ಕೂಡ ಇಲ್ಲ.

ಮಧ್ಯಾಹ್ನ ಮಾರಾರನ ಹೋಟೆಲಿನಲ್ಲಿ ಭಾಸ್ಕರ ಊಟ ಮಾಡುತ್ತಿದ್ದ.

ಅಪ್ಪುಣ್ಣಿ ಬೆಳಿಗ್ಗೆ ಗಂಜಿ ಕುಡಿದು ಸ್ಕೂಲಿಗೆ ಹೋಗುತ್ತಿದ್ದದ್ದು. ಮತ್ತೆ ಊಟ ಮಾಡುತ್ತಿದ್ದದ್ದು ಸಾಯಂಕಾಲ ಮನೆಗೆ ಹಿಂದಿರುಗಿದಾಗಲೇ.

ಮೂರನೆಯ ಪೀರಿಯಡ್ ಆಗುವಷ್ಟರಲ್ಲಿ ಹಸಿವಿನ ಬಾಧೆ ಹೆಚ್ಚುತ್ತಿತ್ತು. ಸ್ಕೂಲ್ ಕೌಂಪೌಂಡಿಗೆ ಸ್ವಲ್ಪ ಹತ್ತಿರದಲ್ಲಿದ್ದ ಮಾರಾರನ ಹೋಟೆಲಿನ ಅಡುಗೆ ಮನೆಯಿಂದ ಬರುತ್ತಿದ್ದ ಪರಿಮಳ ಮೂಗಿಗೆ ಬಡಿಯುತ್ತಿದ್ದದ್ದೂ ಆಗಲೇ. ಒಂದು ಗಂಟೆಗೆ ಊಟಕ್ಕೆ ಬಿಟ್ಟಾಗ ನೀರು ಕುಡಿಯಲು ಹೋಟೆಲಿನ ಹಿಂಭಾಗಕ್ಕೆ ಹೋಗುತ್ತಿದ್ದಾಗ ಅಡುಗೆ

ರೂಮಿನ ಮುಂಭಾಗದಲ್ಲಿ ಸಾಲು ಸಾಲಾಗಿ ಎಲೆ ಹಾಕಿರುತ್ತಿದ್ದುದು ಕಾಣಸುತ್ತಿತ್ತು.

ಆಮಿನುಮ್ಮ ಚೀಟಿ ಹಣ ಸಿಕ್ಕಿದಾಗ ಅಮ್ಮ ಕ್ಯಾರಿಯರ್ ತೆಗದುಕೊಳ್ಳಲು ಆಲೋಚನೆ ಮಾಡಿದ್ದಳು. ಆದರೆ ಕ್ಯಾರಿಯರ್‌ಗಿಂತ ಮುಖ್ಯವಾಗಿ ಒಂದು ಷರಟು, ಲುಂಗಿ ಅವಶ್ಯಕವಾಗಿತ್ತು. ಅಮ್ಮನೂ ಅದಕ್ಕೆ ಒಪ್ಪಿದಳು.

ಇದ್ದ ಎರಡು ಷರಟುಗಳನ್ನೇ ಆಗುಚಿ ಮಗುಚಿ ಹಾಕಿಕೊಳ್ಳಬೇಕಾಗಿತ್ತು.

ಒಂದು ದಿನ ಸಾಯಂಕಾಲ ಸ್ಕೂಲಿನಲ್ಲಿ ಓಟ್ಟನ್ ತುಳ್ಳಲ್* ಆಡಿಸಲು ನಿಶ್ಚಯಿಸಿದ್ದರು. ಪ್ರತಿಯೊಬ್ಬರೂ ಎರಡಾಣೆ ತೆಗೆದುಕೊಂಡು ಬರಬೇಕೆಂದು ಹಿಂದಿನ ದಿನವೇ ಮೆಮೋ ಬಂದಿತ್ತು. ಆದರೆ ಅವನ ಹತ್ತಿರ ಎರಡಾಣೆಯಿಲ್ಲ. ಅಮ್ಮ ಪಕ್ಕದ ಮನೆಗೆ ಹೋಗಿ ಕೇಳಿ ಬಂದಳು. ಆಮಿನುಮ್ಮನ ಕೈಯಲ್ಲಿ ಕಾಸಿದಿದ್ದರೆ ಸಿಕ್ಕುತ್ತಿತ್ತು.

ಬೆಳಗ್ಗೆ ಮೊದಲನೆಯ ಪಿರಿಯಡ್‌ನಲ್ಲೇ ಕ್ಲಾಸ್‌ಮಾಸ್ಟರ್ ಹಣ ಸಂಗ್ರಹಿಸಿದರು. ಕ್ಲಾಸಿನಲ್ಲಿ ನಾಲ್ಕು ಮಂದಿ ಕೊಟ್ಟಿರಲಿಲ್ಲ. ಅವರಲ್ಲಿ ಅಪ್ಪುಣ್ಣಿಯೂ ಒಬ್ಬ.

ಮಧ್ಯಾಹ್ನ ತರಬೇಕು ಎಂದು ನಂಬೀಶನ್ ಮಾಸ್ಟರು ಮುಖ ದೊಡ್ಡದು ಮಾಡಿಕೊಂಡು ಕಣ್ಣು ಅಗಲವಾಗಿ ತೆರೆದು ಹೇಳಿದಾಗ ಅವನು ಪುಸ್ತಕ ಕೈಗೆತ್ತಿಕೊಂಡು ನೇರವಾಗಿ ಹೊರಕ್ಕೆ ಬಂದ.

ಯಾರೋ ಕೇಳಿದರು:

"ಯಾಕೋ ಪುಸ್ತಕ ತೆಗೆದುಕೊಂಡು ಹೊರಟೆ?"

"ಊ"

"ಯಾಕೋ"

"ಹುಶಾರಿಲ್ಲ. ತಲೆನೋಯುತ್ತೆ."

ಅವನು ಮುಹಮ್ಮದನ ಹತ್ತಿರ ಕೂಡ ಹೇಳದೆ ನೇರವಾಗಿ ಮನೆಯ ಕಡೆಗೆ ಹೊರಟ.

ಮಧ್ಯಾಹ್ನ ನಂಬೀಶನ್ ಮಾಸ್ಟರು ಕಾಸು ಕೇಳುವಾಗ ಕಣ್ ಕಣ್ ಬಿಡುತ್ತಾ ನಿಂತುಕೊಳ್ಳಬೇಕಾಗಬಹುದು. ಕ್ಲಾಸಿನ ಹುಡುಗರೆಲ್ಲ ಪರಿಹಾಸ್ಯದಿಂದ ನೋಡುತ್ತಾರೆ. ಹಾಗಾಗದ ರೀತಿಯಲ್ಲಿ ಆಯ್ತಲ್ಲ.

ಚಿಟಿಕೆ ಹಾಕುವಂಥ ಸುಡು ಬಿಸಿಲು.

ಗದ್ದೆ ಅಂಚಿನಲ್ಲಿ ನಡೆಯುತ್ತಿದ್ದಾಗ ಧೂಳು ಕೆಂಡದ ಹಾಗೆ ಸುಡುತ್ತಿತ್ತು. ಗದ್ದೆಯೊಳಕ್ಕಿಳಿದು ದಿಂಡಿನ ಅಂಚಿನಲ್ಲಿ ನಡೆದಾಗ ತಂಪಾಗಿತ್ತು. ಆ ದಾರಿಗಿಳಿದ.

ವಡಕ್ಕೇಪಾಟ್‌ನ ಕೆಲಸದವರು ಯಾರೋ ತೋಟದಲ್ಲಿ ಇದ್ದಂತೆ ತೋರಿತು. ಕತ್ತೆತ್ತಿ ನೋಡದೆ ಹೋಗುತ್ತಿದ್ದ.

---

* ವೇಷ ಹಾಕಿ ಹಾಡುತ್ತಾ ನರ್ತಿಸುವುದು.

ಆಗ ಯಾರೋ ಕರೆದರು: "ಅಪ್ಪಣ್ಣಿ ಅಣ್ಣಾ."

ಅವನು ಥಟ್ಟನೆ ನಿಂತುಕೊಂಡ. ಕರೆದವಳು ಮಾಳು. ಅವಳು ಅಡಕೆಯ ಮರಕ್ಕೆ ಹಬ್ಬಿದ ವೀಳ್ಯೆದೆಲೆ ಕುಡಿಯಿಂದ ವೀಳ್ಯೆದೆಲೆ ಚಿಗುಟುತ್ತಿದ್ದಳು.

"ಸ್ಕೂಲ್ ಬೇಗನೆ ಬಿಡ್ತಾ?"

ಓ! ಯೋಗಕ್ಷೇಮ ವಿಚಾರಿಸುವುದಕ್ಕೆ ಬೇರೆ ಬಂದಿದ್ದಾಳೆ. ಎಂದು ಕೊಂಡ. ಸಿಟ್ಟು ಬಂದಿತು. ಅಪ್ಪಣ್ಣಿ ಒಂದು ಸಲ 'ಹೌದು' ಎಂದ ಅಷ್ಟೆ.

"ಬಾವಿಯ ಕಟ್ಟೆಯ ಹತ್ತಿರ ನಿಂತರೆ ಕಾಣಿಸುತ್ತೆ—ಅಪ್ಪಣ್ಣಿ ಅಣ್ಣ ಹೋಗೋದು ಅಂತ ಭಾಸ್ಕರಣ್ಣ ಅವನ ತಾಯಿ ಹತ್ತಿರ ಹೇಳ್ತಿದ್ದ. ಆಗಲೇ ನನಗೆ ಗೊತ್ತಾದದ್ದು."

ಅದಕ್ಕೂ ಅವನು ಒಂದು ಸಲ 'ಹ್ಞು' ಎಂದ.

"ಅಜ್ಜಿ ದಿನಾ ಹೇಳ್ತಿರ್ತಾಳೆ 'ಅಪ್ಪಣ್ಣಿ ಅಣ್ಣ ಹೋಗುವಾಗ ಒಂದು ಸಲ ಕಾಣಬೇಕು' ಅಂತ."

—ಒಂದು ಸಲ ಕಂಡಿಲ್ಲವೆ? ಕುತ್ತಿಗೆ ಹಿಡಿದು ದಬ್ಬುವಾಗ ಎಲ್ಲರೂ ನೋಡುತ್ತ ನಿಂತಿರಲಿಲ್ಲವೆ? ಹೆಣ್ಣೇ ನನ್ನ ವಿಚಾರವಾಗಿ ಏನೂ ಮಾತಾಡಬೇಡ.

"ದೊಡ್ಡ ಮಾವನೂ ತಂದೆಯೂ......ಒಬ್ಬರಿಗೊಬ್ಬರು"

ಅವಳು ತಕ್ಷಣ ಮಾತು ನಿಲ್ಲಿಸಿದಳು.

"ಯಾರ ಹತ್ತಿರ ಪಂಚಾಯ್ತಿ ಮಾಡ್ತಾ ನಿಂತಿದ್ದೀಯೆ ಮಾಳು?"

ಅಡಕೆ ಮರಗಳ ಕಡೆಯಿಂದ ಒಬ್ಬಳು ಹುಡುಗಿ ಬರುತ್ತಿದ್ದಳು. ತಕ್ಷಣ ಇಲ್ಲಿಂದ ಹೋಗಿ ಬಿಟ್ಟರೋ ಎಂದು ಆಲೋಚಿಸಿದ್ದದ್ದು. ಆದರೆ ಅವಳನ್ನು ಕಂಡಾಗ ತನ್ನನ್ನೇ ತಾನು ಮರೆತು ನಿಂತುಕೊಂಡ.

ಅಮ್ಮಣ್ಣಿ ಅಕ್ಕ!

ಸರ್ಪದ ಬೆನ್ನಿನ ಮೇಲೆ ಕುಳಿತು ಸವಾರಿ ಮಾಡುವ, ವಕ್ಷಸ್ಥಳವನ್ನು ಮರೆ ಮಾಡಿಕೊಂಡಿಲ್ಲದ ರಾಜಕುಮಾರಿ......

ಆಶ್ಚರ್ಯಪಟ್ಟುಕೊಂಡು ನೋಡಿದ. ನಿರಿ ನಿರಿಯಾದ ಉಡುಗೆಯನ್ನುಟ್ಟು ಸೊಂಟದಿಂದ ಮೇಲಕ್ಕೆ ನಗ್ನಳಾಗಿ ಮುಡಿ ಹರಡಿಕೊಂಡು ಹೆಡೆಯೆತ್ತಿ ಆಡುವ ಹಾವಿನ ಹಾಗಿದ್ದ ಒಂದು ಹೆಣ್ಣಿನ ರೂಪು. ಹಿಂದೆಂದೋ ಕಂಡ ಹಳೆಯ ಸ್ವಪ್ನದ ಹಾಗೆ ಮನಸ್ಸಿನಲ್ಲಿ ಹೊಳೆಯಿತು. ಈಗ ರೇಷ್ಮೆಯ ರವಕೆ ತೊಟ್ಟಿದ್ದಾಳೆ. ಸಣ್ಣ ಅಂಚಿನ ಸೀರೆ ಉಟ್ಟಿದ್ದಾಳೆ. ಹಣೆಯಲ್ಲಿ ಅಡ್ಡಕ್ಕೆಳೆದ ಕುಂಕುಮದ ಗೆರೆ. ಕಾಡಿಗೆಯನ್ನು ಹಚ್ಚಿದ ಕಣ್ಣುಗಳು.

"ಇದ್ಯಾರು ಅಪ್ಪಣ್ಣಿಯಾ?"

ಓ! ಹೆಸರೂ ಗೊತ್ತಾಗಿದೆ.

ಅವಳನ್ನು ಕಣ್ಣೆದುರಿನಲ್ಲಿ ಕಂಡ ಆ ಸೌಂದರ್ಯವನ್ನು ಅವನು ಊಹಿಸಿಕೊಳ್ಳಲೂ ಅಸಮರ್ಥ. ಸುಂದರಳಾದ ಮನುಷ್ಯ ಸ್ತ್ರೀಯ ಮುಖವುಳ್ಳ ಹೊಳೆಯುವ ಸರ್ಪ.

ಅವಳು ನಗುವಾಗಲೂ ಮಾತನಾಡುವಾಗಲೂ ಅರೆ ಮುಚ್ಚಿದ ಕಣ್ಣುಗಳು.

ತನ್ನನ್ನೇ ಬಿಟ್ಟ ಕಣ್ಣು ಬಿಟ್ಟ ಹಾಗೆ ಅಪ್ಪುಣ್ಣಿ ನೋಡುತ್ತಿದ್ದುದನ್ನು ಕಂಡು ಅಮ್ಮಿಣಿ ಕೇಳಿದಳು.

"ಯಾಕೆ ಹಾಗೆ ನೋಡ್ತೀ, ನಿನಗೆ ನಾನು ಗೊತ್ತಾಗಲಿಲ್ಲವಾ?"

ತಕ್ಷಣ ನೆನಪಾಯಿತು.

ಗೊತ್ತು ಗೊತ್ತು, ತನ್ನನ್ನು ಕತ್ತು ಹಿಡಿದು ನೂಕಿದ ದೊಡ್ಡ ಮಾವನ ಮಗಳು. ಅವನಿಗಿಂತ ಮೂರು ವರ್ಷ ದೊಡ್ಡವಳಾದದ್ದರಿಂದ ಅಮ್ಮಿಣಿ ಅಕ್ಕ ಎಂದು ಕರೆಯುವುದು.

ದಿಣ್ಣೆಯ ಮೇಲೆ ಒಂದು ಕಾಲನ್ನಿಟ್ಟುಕೊಂಡು ನಗುತ್ತ ತೇವವಾದ ತುಟಿಗಳನ್ನರಳಿಸಿಕೊಂಡು ಅಮ್ಮಿಣಿ ಅಕ್ಕ ಹೇಳಿದಳು.

"ಅಪ್ಪುಣ್ಣಿಗೆ ನಾನು ಗೊತ್ತಿಲ್ಲದಿದ್ದರೂ ನನಗೆ ಅಪ್ಪುಣ್ಣಿ ಗೊತ್ತು."

ಕೈಯಿಂದ ಕೆಳಗೆ ಜಾರಿ ಬಿದ್ದ ಅಡಕೆ ತುಂಡನ್ನು ಅವಳು ಬಗ್ಗಿ ಕೈಗೆತ್ತಿಕೊಂಡಳು. ಆಗ ತುದಿಯಲ್ಲಿ ಕಟ್ಟಿದ ತಲೆಮುಡಿ ಭುಜದ ಮೇಲೆಲ್ಲ ಹರಡಿಕೊಂಡಿತು.

"ಚಿಗುರೆಲೆ ಇದ್ದರೆ ಮಾಳು, ಒಂದು ಕೊಡು. ಎಲೆ ಹಾಕಿಕೊಳ್ತೀನಿ."

"ನಾನು ಹೋಗ್ತೀನಿ" ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಂಡು ಹೊರಟ.

ಅಮ್ಮಿಣಿ ಅಕ್ಕ ಕರೆದಳು.

"ಇಲ್ಲಿ ನೋಡು ಅಪ್ಪುಣ್ಣೀ"

ಅವನು ಹಿಂದಿರುಗಿ ನೋಡದೆ ಹೆಜ್ಜೆ ಹಾಕಿದ.

ಮನೆಗೆ ಹೋದಾಗ ಅಮ್ಮ ಮನೆಯಲ್ಲಿರುವುದಿಲ್ಲ. ನಂಬೂದಿರಿಗಳ ಮನೆಯಲ್ಲಿರುತ್ತಾಳೆ ಎಂದು ಭಾವಿಸಿದ್ದ. ಅಮ್ಮ ಮಾತ್ರ ಅಲ್ಲ, ಜಗಲಿಯ ಮೇಲೆ ಶಂಕರನ್ ನಾಯರ್ ಕೂಡ ಕುಳಿತಿದ್ದ. ಅವನು ಒಂದು ಸಲ ಕಾಲಿನಿಂದ ನೆಲದ ಮೇಲೆ ಶಬ್ದ ಮಾಡಿದಾಗ ಅಮ್ಮ ಬಾಗಿಲಿನ ಹತ್ತಿರ ಹೋಗಿ ನಿಂತುಕೊಂಡಳು.

"ಇದೇನು ಅಪ್ಪುಣ್ಣಿ ಇಷ್ಟು ಹೊತ್ತಿಗೆ ಮುಂಚೆ?"

ಒಟ್ಟಿನಲ್ಲಿ ಅವನಿಗೊಂದು ಬಗೆಯ ಸಿಟ್ಟು ಬಂದಿತು. ಯಾರ ಮೇಲೆ ಎಂದು ತಿಳಿಯದು. ಅವನು ಹೇಳಿದ ಉತ್ತರ "ಬಂದೆ" ಎಂದಷ್ಟೆ.

"ಏನಾಯ್ತು?"

"ಏನೂ ಇಲ್ಲ."

ಪುಸ್ತಕದ ಕಟ್ಟನ್ನು ಒಂದು ಮೂಲೆಯಲ್ಲಿರಿಸಿದ ಆ ಮೇಲೆ ಕೇಳಿದ:

"ಗಂಜಿ ಉಂಟಾ?"

ಅವನು ತನ್ನ ಮುಖ ಭಾವನೆಯಿಂದ ತಾಯಿಯನ್ನು ಅಸಮಾಧಾನಗೊಳಿಸಿದೆನೆಂದು ಭಾವಿಸಿದ. ಅವನು ಹಿಂದೆ ಎಂದೂ ಮುಖ ಚಿಕ್ಕದು ಮಾಡಿಕೊಂಡು ಮಾತಾಡಿದವನಲ್ಲ. ಪಾರುಕುಟ್ಟಿ ಗಂಜಿ ಬಡಿಸಿ ಮಣೆ ಹಾಕುವುದನ್ನು ಕಾಯುತ್ತ ನಿಲ್ಲದೆ ಹೋಗಿ ಊಟಕ್ಕೆ ಕುಳಿತುಕೊಂಡ.

"ಲುಂಗಿ ಕೊಳೆಯಾಗ್ತದೆ, ಮಣೆ ಬೇಡ."

ಒಂದು ಗುಟುಕು ಗಂಜಿಯನ್ನು ಕುಡಿದಾದ ಮೇಲೆ ಕಾರಣವೇ ಇಲ್ಲದೆ ಉಂಟಾಗಿದ್ದ ಕೋಪ ಇಳಿಯಿತು.

"ಮಣೆ ಏನೂ ಬೇಡ."

ಅವನು ಶಾಂತನಾಗಿ ಹೇಳಿದ.

ಅಮ್ಮ ಹೊರಕ್ಕೆ ಹೋದಳು.

ಶಂಕರನ್ ನಾಯರ ಶಬ್ದ ಕೇಳಿಸಿತು.

"ಯಾಕೋ ಅಪ್ಪುಣ್ಣಿ ಬೇಜಾರಿನಲ್ಲಿದ್ದಾನೆ ಅಲ್ಲವಾ?"

"ಹೌದು ನಾನೂ ಅದನ್ನೇ ಯೋಚಿಸ್ತಾ ಇದ್ದೀನಿ. ಹೊಟ್ಟೆ ಹಸಿದದ್ದರಿಂದ ಇರಬೇಕು."

"ಮತ್ತೊಂದನ್ನ ನಾನು ಸರಿಗಟ್ಟುತ್ತೀನಿ. ಫೈನು ಕೊಡೋದೇನೂ ಬೇಡ."

ಫೈನಿನ ವಿಷಯ. ಫೀಸಿನ ಸಂಗತಿಯನ್ನು ಮಾತನಾಡುತ್ತಿದ್ದಾರೆ. ಫೀಸು ಕಟ್ಟುವುದು ಹತ್ತಿರ ಬಂದಿದೆ. ಅಮ್ಮ ಶಂಕರನ್ ನಾಯರ ಹತ್ತಿರ ಹಣ ಕೇಳಿರಬೇಕು.

"ತುಂಬ ಉಪಕಾರ ಆಯ್ತು, ಶಂಕರನ್ ನಾಯರೇ"

"ನನ್ನಿಂದ ಸಾಧ್ಯವಾದ ಸಹಾಯ ಮಾಡೋದಕ್ಕೆ ನಾನು ಯಾವಾಗಲೂ ಸಿದ್ಧನಾಗಿದ್ದೀನಿ ಪಾರುಕುಟ್ಟಿ ಅಮ್ಮ".

ಶಂಕರನ್ ನಾಯರ್ ಹೋದ ಮೇಲೆ ಪಾರುಕುಟ್ಟಿ ಅಮ್ಮ ಒಳಗೆ ಬಂದಳು. ಅಪ್ಪುಣ್ಣಿ ಊಟ ಮುಗಿಸಿ ಕೈ ತೊಳೆಯುತ್ತಿದ್ದ.

"ಯಾಕೆ ಅಪ್ಪುಣ್ಣೀ ಬೇಗ ಬಂದೆ?"

"ಯಾಕೂ ಇಲ್ಲಮ್ಮ. ಬೇಕಾದವರು ಬೇಗ ಹೋಗಿ ಅಂದರು."

ಅವನು ಪಡಸಾಲೆಗೆ ಬಂದ. ಅಮ್ಮ ನಂಬೂದಿರಿ ಮನೆಗೆ ಕೆಲಸಕ್ಕೆ ಹೋಗಲಿಲ್ಲವೇ ಎಂದು ಕೇಳಬೇಕು ಎನ್ನಿಸಿತು. ಆದರೆ ಕೇಳಲಿಲ್ಲ. ಅಂಥಾದ್ದೊಂದು ನಂಬೂದಿರಿ ಮನೆಯಿದೆ ಎನ್ನುವ ಸಂಗತಿಯನ್ನು ಮರೆಯುತ್ತಿದ್ದಾಳೆ. ಅಲ್ಲಿಯ ಹಜಾರದಲ್ಲಿ ಕುಂಞಾತ್ತೋಲು, ಹಲ್ಲು ಕಿರಿಯುತ್ತಾ ಕುಳಿತ ನಂಬೂದಿರಿಯೂ ಇರುವ ವಿಷಯ ಹೋಗಲಿ. ಅಲ್ಲಿಯ ಒರಳು ಕಲ್ಲಿನ ಹಜಾರದಲ್ಲೂ ಹೊರಗೂ ಅಮ್ಮ ಕೆಲಸ ಮಾಡುತ್ತಾಳೆಂಬುದನ್ನೂ ಮರೆಯಬಲ್ಲ, ನಂಬೂದಿರಿ ಮನೆ ಕೆಲಸದವಳ ಮಗ—ಅದನ್ನು ಮಾತ್ರ ನೆನಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ, ಅಪ್ಪುಣ್ಣಿ ಕೋಂದುಣ್ಣಿ ನಾಯರರ ಮಗ. ಮಣ್ಣಾನ್

ಮಂತ್ರವಾದಿಯ ಆಟದ ಕಟ್ಟೆಯ ಮುಂದೆ ಊರಿನ ಆಟಗಾರರೊಂದಿಗೆ ಸ್ಪರ್ಧೆ ಹೂಡಿ, ಪಣತೊಟ್ಟು ಗೆದ್ದ ಪಗಡೆ ಆಟಗಾರ ಕೋಂದುಣ್ಣಿ ನಾಯರ್. ಮುತ್ತಿಳಂ ಗುಡ್ಡದ ಹತ್ತಿರ ಎಲ್ಲರನ್ನೂ ಒಬ್ಬಂಟಿಗನಾಗಿ ಎದುರಿಸಿದ ಕೋಂದುಣ್ಣಿ ನಾಯರ್......

ಮುತ್ತಜ್ಜಿಯ ಕೊಟ್ಟಿಗೆಯ ಬಾಗಿಲು ತೆರೆದಿತ್ತು. ಮುತ್ತಜ್ಜಿಯನ್ನು ಕಂಡು ಎಷ್ಟೋ ದಿನಗಳಾಗಿದ್ದುವು. ಬಾಗಿಲಿನ ಹತ್ತಿರ ಕುಳಿತು ಮೊರದಲ್ಲಿ ಅಕ್ಕಿ ಹರಡಿಕೊಂಡು ಕಲ್ಲುಗಳನ್ನು ಆರಿಸುತ್ತಿದ್ದಳು ಮುತ್ತಜ್ಜಿ.

"ಯಾರು?"

"ನಾನು ಮುತ್ತಜ್ಜಿ".

"ನನ್ನ ಅಪ್ಪೂ, ಈ ಕಲ್ಲು ಸ್ವಲ್ಪ ಆರಿಸಿಕೊಡು. ಮುತ್ತಜ್ಜಿಗೆ ಕಣ್ಣು ಸರಿಯಾಗಿ ಕಾಣಿಸೋದಿಲ್ಲ."

ಅವನು ಒಂದು ಹಿಡಿ ಅಕ್ಕಿಯನ್ನು ತೆಗೆದು ನೆಲದ ಮೇಲೆ ಹರಡಿಕೊಂಡು ಕಲ್ಲುಗಳನ್ನು ಆರಿಸಿ ಹೊರಕ್ಕೆಸೆಯುತ್ತಿದ್ದ.

ಮುತ್ತಜ್ಜಿಯ ಸಮಾಚಾರಗಳನ್ನು ಕೇಳುವುದಕ್ಕೆ ಅವಕಾಶವೇ ಸಿಕ್ಕುವುದಿಲ್ಲ. ಬೆಳಗ್ಗೆ ಹೊತ್ತಿಗೆ ಮುಂಚೆ ಹೋಗುತ್ತಾಳೆ, ಸಾಯಂಕಾಲ ಹಿಂತಿರುಗುತ್ತಾಳೆ. ಶನಿವಾರವೂ ಭಾನುವಾರವೂ ತನಗೆ ವಿರಾಮ ದೊರೆತಿದ್ದಾಗ ಮುತ್ತಜ್ಜಿಯನ್ನು ನೋಡುವುದಕ್ಕೆ ಹೋದರೆ ಅವಳು ಅಲ್ಲಿರುವುದಿಲ್ಲ.

"ಯಾರು ಅಲ್ಲಿಗೆ ಬಂದಿದ್ದದ್ದು ಅಪ್ಪು?"

"ಅದೇ ಆ ಶಂಕರ ನಾಯರ್."

"ಯಾಕೆ ಬಂದಿದ್ದ?"

"ಯಾಕೋ ಕಾಣೆ. ನಾನು ಈಗ ತಾನೇ ಬಂದೆ."

"ತೆಂಗು ಪೊಟ್ಟ ಶಂಕರ ಒಳ್ಳೆಯವನು ಅಂತೀಯಾ?"

ಮುತ್ತಜ್ಜಿ ಆತನನ್ನು ಕುರಿತು ತಾನು ಒಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದಳು. ಆದರೆ ಅಲ್ಲಿಗೆ ನಿಲ್ಲಿಸಲಿಲ್ಲ. "ಆದರೂ—"

"ಏನು ಮುತ್ತಜ್ಜಿ?"

"ಏನೂ ಇಲ್ಲ."

ಅಕ್ಕಿಯ ಕಲ್ಲು ಆರಿಸಿಕೊಟ್ಟು ಹೊರಟಾಗ ಮುತ್ತಜ್ಜಿ ಹೇಳಿದಳು.

"ಜನ ಮಾತಾಡೋದು ಇಷ್ಟೇ ಸಾಕು ಅಂತಿಟ್ಟುಕೊ."

"ಜನರೇನು ಮಾತಾಡ್ತಾರೆ?"

ಬಾಗಿ ಒಂದು ಕಲ್ಲನ್ನೆತ್ತಿಕೊಂಡು ಬಿದಿರು ಮಳೆ ಕಡೆಗೆ ಶಕ್ತಿಯಿಂದ ಎಸೆದು ಅವನು ಕುಂಡಂಗಲ್ ಮೆಟ್ಟಿಲಿನ ಕೇಸರ ವೃಕ್ಷದ ಹತ್ತಿರಕ್ಕೆ ಹೋದ.

# 3

ವಡಕ್ಕೇಪಾಟ್‌ನ ಅಡಿಗೆ ಮನೆಯ ಕೆಲಸವೆಲ್ಲ ಮೀನಾಕ್ಷಿಯದು. ಮೀನಾಕ್ಷಕ್ಕನಿಗೆ ಸಹಾಯ ಮಾಡುವವಳು ಮಾಳು. ಅಜ್ಜಿಯ ಎರಡನೆಯ ಮಗಳು ಮೀನಾಕ್ಷಕ್ಕ.

ಮೀನಾಕ್ಷಕ್ಕ ಅಣ್ಣನ ತಾಯಿಯ ಹಾಗಲ್ಲ. ಮಾಳುವಿಗೆ ವಿಪರೀತ ಕೆಲಸ ವಹಿಸುವುದಿಲ್ಲ. ಆದ್ದರಿಂದಲೇ ಮಾಳುವಿಗೆ ಅವರನ್ನು ಕಂಡರೆ ತುಂಬ ಇಷ್ಟ. ಅವರಿಗೆ ಮಕ್ಕಳು ಯಾರೂ ಇಲ್ಲ. ಹೆರಲೂ ಇಲ್ಲ. ಮೀನಾಕ್ಷಕ್ಕನ ಗಂಡ ಅಚ್ಯುತನ್ ನಾಯರ್. ಅವರು ಕರೆಯುವುದಂ ಮಾತ್ರ ಚಿಕ್ಕಪ್ಪ ಎಂದು. ಹಾಗಲ್ಲ ಕರೆಯಬೇಕಾದದ್ದು.

ಮೀನಾಕ್ಷಕ್ಕ ಎನ್ನುವ ಒಬ್ಬಾಕೆ ಮನೆಯೊಳಗಿದ್ದಾಳೆ ಎಂದು ಎಷ್ಟೋ ಜನರಿಗೆ ಗೊತ್ತಿಲ್ಲ. ಬೆಳಗಾಗುವ ಮೊದಲು ಸ್ನಾನ ಮಾಡಿ ಅಡಿಗೆ ಮನೆ ಹೊಕ್ಕರೆ ಮತ್ತೆ ರಾತ್ರಿ ಎಲ್ಲರ ಊಟವಾದ ಮೇಲೆ ನೀಲಿಗೆ ಇಡಬೇಕಾದ ಗಂಜಿಯನ್ನು ತೆಗೆದಿಟ್ಟು ಅಡಿಗೆ ಮನೆ ಜಗಲಿ ಒರಸಿದ ಬಳಿಕವೇ ಮಲಗುವುದು. ದೊಡ್ಡ ಮಾವ ಸಾಯಂಕಾಲ ಹೊರ ಗೆಲ್ಲಿಯಾದರೂ ತಿರುಗಾಡಲು ಹೋಗುತ್ತಿದ್ದರು. ಗದ್ದೆ ಬಯಲು ದೂರದಲ್ಲಿ ಎಲ್ಲೆಲ್ಲಿಯೂ ಇರುವ ತೋಟಗಳನ್ನು ನೋಡಿಕೊಂಡು ಹಿಂದಿರುಗಿ ಬರುತ್ತಿದ್ದದ್ದು. ದೊಡ್ಡ ಮಾವ ಮನೆಗೆ ಬರುವುದು ತಡವಾಗುವ ದಿವಸಗಳಲ್ಲಿ ಮೀನಾಕ್ಷಕ್ಕನಿಗೆ ಮಲಗಲು ಅರ್ಧ ರಾತ್ರಿಯಾಗುತ್ತಿತ್ತು. ಅನ್ನ, ಸಾರು, ಪಲ್ಯ ಮಾಡಿ ಆದ ಮೇಲೆ ಅವರು ಅಡಿಗೆ ಮನೆಗೆ ಬಂದು ಮಣೆಯ ಮೇಲೆ ಕುಳಿತುಕೊಳ್ಳುತ್ತಿದ್ದದ್ದು. ಎಷ್ಟು ತಡವಾಗಿ ಬಂದರೂ ಸರಿ, ದೊಡ್ಡ ಮಾವ ಊಟ ಮಾಡಿದ ಮೇಲೆಯೇ ಮಕ್ಕಳಿಗೂ ಸಹ ಊಟ ಮಾಡಿಸಬೇಕಾಗಿತ್ತು. ದೊಡ್ಡ ಮಾವ ಬಂದರೆ ಎಣ್ಣೆ ಹಚ್ಚಿಕೊಳ್ಳಲು ಎಷ್ಟೋ ಹೊತ್ತುಬೇಕು. ಟವಲ್ ಮಾತ್ರ ಸುತ್ತಿಕೊಂಡು ಹೊರಗೆ ಅತ್ತ ಇತ್ತ ಸುತ್ತಾಡುವುದಕ್ಕೆ ಎಷ್ಟೋ ಹೊತ್ತುಬೇಕು. ಬಾವಿ ಕಟ್ಟೆಯ ಹತ್ತಿರ ಎರಡು ಹಂಡೆಗಳ ತುಂಬ ನೀರು ತುಂಬಿಡಬೇಕು. ದೊಡ್ಡ ಹಂಡೆಯ ತುಂಬ ಬಿಸಿ ನೀರನ್ನು ಮೀನಾಕ್ಷಕ್ಕನೂ ಮಾಳುವೂ ಹಿಡಿದುಕೊಂಡು ಬಂದು ಬಾವಿ ಕಟ್ಟೆಯ ಹತ್ತಿರ ತಂದಿಡುವುದು. ಸ್ನಾನ ಮುಗಿಯುವ ಹೊತ್ತಿಗೆ ತೆಂಕು ಮನೆಯ ಮಾಳಿಗೆಯಲ್ಲಿ ದೀಪ ಹಚ್ಚಿಟ್ಟು ಚಾಪೆ ಹಾಸಿ ವಿಭೂತಿ ಇಡಬೇಕು. ಆ ಕೆಲಸ ಅಮ್ಮಿಣಿ ಅಕ್ಕನದು. ಆ ಮೇಲೆ ಬತ್ತಾಯದ ಮನೆಯ ಮಹಡಿಗೆ ಹೋಗಿ ಬಟ್ಟೆ ಬದಲಾಯಿಸಿ ಕೊಂಡು ಬರುವುದು. ಮತ್ತೂ ಅಷ್ಟು ತಡವಾಗುತ್ತಿತ್ತು. ವಿಭೂತಿ ಧರಿಸಿಕೊಂಡು ಮೇಲಕ್ಕೆ ಹೋಗುವಾಗ ಅಡಿಗೆ ಮನೆಯಿಂದ ಹುರಿದ ಮೀನನ್ನೋ ಅಥವಾ ಕೋಳಿ ಮೊಟ್ಟೆ ಪಲ್ಯವನ್ನೋ ಪಿಂಗಾಣಿ ತಟ್ಟೆಯಲ್ಲಿಟ್ಟುಕೊಂಡು ಹೊರಗಿನಿಂದ ಹೋಗಿ

ಬತ್ತಾಯದ ಮನೆಯ ಮಹಡಿಗೆ ತೆಗೆದುಕೊಂಡು ಹೋಗಬೇಕು. ದೇವರ ಮನೆಯ ಮುಂದೆ ಮೀನು ತೆಗೆದುಕೊಂಡು ಹೋಗುವಂತಿಲ್ಲ. ದೊಡ್ಡ ಮಾವ ಮಾತ್ರ ಮೀನು, ಕೋಳಿಮೊಟ್ಟೆ ತಿನ್ನುವುದು. ಊಟಕ್ಕೆ ಕುಳಿತಾಗ ಹುಡುಗರು ಬಡಗು ಭಾಗದಲ್ಲಿ ಕತ್ತಲೆಯಲ್ಲಿ ಮರೆಯಾಗುತ್ತಿದ್ದರು. ದೊಡ್ಡ ಮಾವ ಊಟ ಮಾಡಿ ಹೋಗುವಾಗ ವಿಪರೀತ ವಾಸನೆಯಿರುತ್ತಿತ್ತು.

ಬತ್ತಾಯದಲ್ಲಿ ಭತ್ತದೊಳಗೆ ಸೀಸೆಗಳನ್ನು ಬಚ್ಚಿಟ್ಟುಕೊಂಡಿರುತ್ತಿದ್ದರು.

ಮಾವ ಊಟ ಮಾಡಿದ ಮೇಲೆ ಮಾಳುವಿನ ತಂದೆಯೂ ಚಿಕ್ಕಪ್ಪನೂ ಗಂಡು ಮಕ್ಕಳೂ ಊಟಕ್ಕೆ ಕೂರುತ್ತಿದ್ದರು. ಆಮೇಲೆ ಹೆಂಗಸರ ಸರದಿ. ಎಲ್ಲರಿಗೂ ಊಟಕ್ಕೆ ಬಡಿಸುವುದು ಮೀನಾಕ್ಷಕ್ಕ. ಕೊನೆಯಲ್ಲಿ ಅವರು ಊಟಕ್ಕೆ ಕುಳಿತುಕೊಳ್ಳುವಷ್ಟರಲ್ಲಿ ಉಳಿದವರೆಲ್ಲ ನಿದ್ದೆ ಮಾಡಿರುತ್ತಿದ್ದರು. ಅದನ್ನು ನೋಡಿದಾಗ ಮಾಳುವಿಗೆ ಅಯ್ಯೋ ಪಾಪ ಎನ್ನಿಸುತ್ತಿತ್ತು.

"ನೀನು ಹೋಗಿ ಮಲಗಿಕೊ ಮಾಳೂ. ತುಂಬ ಹೊತ್ತಾಗಿದೆ. ನನಗಾದರೆ ಇದು ದಿನ ನಿತ್ಯದ್ದು—" ಎನ್ನುತ್ತಿದ್ದರು ಮೀನಾಕ್ಷಕ್ಕ.

ಅವರ ಧ್ವನಿ ಹೆಚ್ಚಿಗೆ ಕೇಳಿಸುವುದೇ ಇಲ್ಲ. ಮನೆಯೊಳಗೆಲ್ಲ ಹೆಚ್ಚು ಶಬ್ದ ಕೇಳಿಸುವುದು ಅಣ್ಣನಮ್ಮನದು. ಅವರು ಎಷ್ಟೋ ಸಲ ಮೀನಾಕ್ಷಕ್ಕನ ಜೊತೆಯಲ್ಲಿ ಜಗಳವಾಡುತ್ತಿದ್ದರು. ಮೀನಾಕ್ಷಕ್ಕ ಮರು ಮಾತಾಡುತ್ತಿರಲಿಲ್ಲ. ಅಕ್ಕ ತುಂಬ ಮಾತಾಡಿದ ಮೇಲೆ ಅವರು ಹೇಳುತ್ತಿದ್ದರು.

"ಇದೆಲ್ಲ ನನ್ನ ಹಣೇಬರಹ."

ಅಜ್ಜಿಗೆ ಮೀನಾಕ್ಷಕ್ಕನನ್ನು ಕುರಿತು ಮಾತನಾಡುವಾಗ ಸಂಕಟವಾಗುತ್ತಿತ್ತು.

"ಅವಳ ಹಣೇಲಿ ಒಳ್ಳೇದು ಬರೀಲಿಲ್ಲ." ಎನ್ನುತ್ತಿದ್ದರು. ಆದರೂ ಅಡಿಗೆ ಮನೆಯಲ್ಲಿ ಏನಾದರೂ ಸ್ವಲ್ಪ ತಡವಾದರೆ ಅಜ್ಜಿ ಸಿಟ್ಟು ಮಾಡಿಕೊಳ್ಳುತ್ತಿದ್ದರು.

"ಲೇ, ಅರವತ್ತು ನಾಲ್ಕು ಜನರಿಗೆ ಅಡಿಗೆ ಮಾಡಿ ಬಡಿಸುತ್ತಿದ್ದೋಳು ನಾನು" ಎಂದು ಮಧ್ಯೆ ಮಧ್ಯೆ ಅದೊಂದು ಮಾತು ಸೇರಿಸಿದ ಮೇಲೆಯೇ ಅಜ್ಜಿಗೆ ಸಮಾಧಾನವಾಗುತ್ತಿದ್ದದ್ದು.

ಚಿಕ್ಕಪ್ಪನಿಗೆ ವಯಸ್ಸಾಗಿದೆ ಯಾರ ಹತ್ತಿರವೂ ಮಾತಾಡುವುದಿಲ್ಲ. ಊಟದ ಹೊತ್ತಿನಲ್ಲಿ ಬರುತ್ತಾರೆ. ಊಟ ಮಾಡಿ ಹೋಗುತ್ತಾರೆ. ರಾತ್ರಿಯಲ್ಲಿ ಅಜ್ಜಿ ಮಲಗುವ ಕೋಣೆಗೆ ಸ್ವಲ್ಪ ಹತ್ತಿರದ ಕೋಣೆಯಲ್ಲಿ ಬಂದು ಮಲಗುತ್ತಾರೆ. ಚಿಕ್ಕಪ್ಪನೂ ಅವಳ ತಂದೆಯೂ ಒಂದೇ ತರಹ ಎಂದು ಮಾಳುವಿಗೆ ಅನ್ನಿಸುವುದುಂಟು. ಇಬ್ಬರೂ ತಿರುಗಾಡುವುದನ್ನೂ ಊಟಕ್ಕೆ ಕುಳಿತುಕೊಳ್ಳುವುದನ್ನೂ ಕಂಡಾಗ ಅಂಜಿಕೊಂಡು ಅಂಜಿಕೊಂಡು ಬರುತ್ತಾರೆ ಎನ್ನಿಸುತ್ತಿತ್ತು.

ಅಣ್ಣನ ತಾಯಿಗೂ ಅವರ ಮಕ್ಕಳಿಗೂ ಬೇಕಾದದ್ದೆಲ್ಲ ಇದೆ. ತಂಗಕ್ಕನ ತಂದೆ ಪರಂಬತ್ತು ಮನೆಯ ಅಪ್ಪನ್ ನಂಬೂದಿರಿಯಾಗಿದ್ದರು. ಅವರು ತೀರಿಕೊಳ್ಳುವ ಮೊದಲು ಅವರ ಹೆಸರಿಗೆ ಆಸ್ತಿಯನ್ನೆಲ್ಲ ಬರೆದಿಟ್ಟು ಹೋಗಿದ್ದಾರೆ. ಅಣ್ಣನಮ್ಮನಿಗೆ ದೂರದಲ್ಲಿ ಎಲ್ಲಿಯೋ ಒಂದು ಮನೆಯೂ ಜಮೀನೂ ಇದೆ. ಮಧ್ಯೆ ಮಧ್ಯೆ ಅಣ್ಣನಮ್ಮನನ್ನು ಕಾಣಲು ಬರುವ ಕುಂಜನ್ ನಾಯರ್ ಅಲ್ಲಿಯ ಕಾರ್ಯದರ್ಶಿ. ಗೇಣಿಯಲ್ಲಿ ಬಂದದ್ದನ್ನು ಮಾರಿ ಹಣ ತಂದುಕೊಡುವುದಕ್ಕೆ ಬರುತ್ತಿದ್ದರು. ಅಜ್ಜಿ ಹೇಳುವುದನ್ನು ಕೇಳಿದ್ದುಂಟು.

"ಅವಳ ಕೈಯಲ್ಲಿ ಬೇಕಾದಷ್ಟು ಹಣವಿದೆ. ಆದರೆ ನನ್ನ ಮಗಳ ವಿಷಯ ಹೇಳಿ ಏನು ಫಲ. ಒಂದು ಕಾಸು ಬಿಚ್ಚೋದಿಲ್ಲ" ಎಂದು.

ಅಜ್ಜಿಯೂ ಅಣ್ಣನಮ್ಮನೂ ಕೆಲವು ಸಲ ಜಗಳವಾಡುವುದುಂಟು. ತಮ್ಮಲ್ಲಿ ತಪ್ಪಿದ್ದರೆ ಕೂಡಲೆ ಅಣ್ಣನಮ್ಮ ಯಾವಾಗಲೂ ಹೇಳುವುದು ಒಂದೆ.

"ನೀವೆಲ್ಲ ಸೇರಿಕೊಂಡು ನಾನೂ ನನ್ನ ಮಕ್ಕಳೂ ಕಷ್ಟಕ್ಕೆ ಸಿಕ್ಕಿ ಹಾಕಿಕೊಂಡೆವು." ಎಂದು.

ಒಂದು ದಿನ ಬೆಳಗ್ಗೆ ಒಂದು ದೊಡ್ಡ ರಂಪವಾಯಿತು. ಹೊರಗೆ ಬಟ್ಟೆ ಒಣಗಿ ಹಾಕಿತ್ತು. ಮುಂಡಿನ* ಅರ್ಧದಷ್ಟನ್ನು ಕೊಂಬು ಮುರಿದ ಹಸು ತಿಂದಿತು. ಆ ಹಸುವಿನ ಸ್ವಭಾವವೇ ಹಾಗೆ. ಬಟ್ಟೆ ಎಲ್ಲಿ ಕಂಡರೂ ಬಿಡುತ್ತಿರಲಿಲ್ಲ. ಅದನ್ನು ಕಂಡು ಅಣ್ಣನಮ್ಮ ಓಡಿ ಹೋಗಿ ಸೀರೆಯ ಬಾಕಿಯ ಭಾಗವನ್ನು ಹಸುವಿನ ಬಾಯಿಯಿಂದ ಹಿಡಿದು ಎಳೆದು ತಂದು, ಹಸುವನ್ನು ಬಾಯಿಗೆ ಬಂದ ಹಾಗೆ ಬಯ್ದರು. ಹಸು ಅದನ್ನು ಕೇಳಿಸಿಕೊಳ್ಳದ ರೀತಿಯಲ್ಲಿ ಸುಮ್ಮನೆ ಹೋದಾಗ ಒಳಗೆ ಬಂದು ಬಯ್ಯುವುದಕ್ಕೆ ಪ್ರಾರಂಭಿಸಿದರು.

"ಯಾವೋಳಾದ್ರೂ ಇದ್ದರೆ ಬಂದು ಇದೊಂದು ಸಲ ನೋಡಿ."

"ಹಸು ತಿಂದದ್ದು. ನೋಡಿದೆಯಾ?"

ಅಜ್ಜಿ ಕೇಳಿದರು.

"ಕಂಡರೂ ಓಡಿಸುವುದಿಲ್ಲ. ನನ್ನ ಮನೆ ಹಾಳಾಗಿ ಹೋದರೆ ನಿಮಗೆಲ್ಲ ಆಗಬೇಕಾಗಿರೋದು ತಾನೇ ಏನು? ಇದ್ಯಾವುದಕ್ಕೂ ಇಲ್ಲಿ ಜನರಿರುವುದಿಲ್ಲ, ತಿನ್ನೋದಕ್ಕೆ ಮಾತ್ರ ಇರ್ತಾರೆ."

ಅಜ್ಜಿಗೆ ಅದು ಹಿಡಿಸಲಿಲ್ಲ.

"ಹೊರಗಿನವರು ಇಲ್ಲಿ ಯಾರೂ ಇಲ್ಲ."

---

* ಮುಂಡು; ನಾಯರ್ ಸ್ತ್ರೀಯರು ಉಡುವ ಸೀರೆ.

"ಅಮ್ಮ ಕಾಣೋದಿಲ್ಲವ, ಇಲ್ಲಿಯ ಸಂಪತ್ತೆಲ್ಲ ಹಾಳಾಗ್ತಾ ಇರೋದನ್ನ."

"ಅಯ್ಯೋ, ಸಂಪತ್ತು ನೋಡಿಕೊಳ್ಳೋದಕ್ಕೆ ಕುಂಞಿ ಕೃಷ್ಣ ಇದ್ದಾನಲ್ಲ ಬಿಡು."

"ನನಗೆಷ್ಟೊಂದು ಸಂಕಟ ಇದೆ ಗೊತ್ತಾ? ನಾನೂ ನನ್ನ ಮಕ್ಕಳೂ ಕಷ್ಟಕ್ಕೊಳಗಾಗ್ತೀವಿ."

"ಇಲ್ಲಿ ಬಾಕಿಯುವರೂ ಇದ್ದಾರಲ್ಲ."

ಹಾಗೆ ಮಾತನಾಡುತ್ತಾ ಮಾತನಾಡುತ್ತಾ ಮುಂದುವರಿಯಿತು. ಕಡೆಗೆ ಅಣ್ಣನಮ್ಮ ಹೇಳಿವರು.

"ಅಮ್ಮನಿಗೆ ನನ್ನ ಮಕ್ಕಳನ್ನು ಕಂಡರೆ ಆಗದು. ಅಮ್ಮನ ಸುಪುತ್ರೀನೇ ಕಾಪಾಡಿ. ನನ್ನ ಮಕ್ಕಳನ್ನು ಕಣ್ಣೆತ್ತಿ ನೋಡ್ತಿದ್ದೀರಾ?"

ಅಜ್ಜಿ ಮತ್ತೆ ಮಾತನ್ನು ಮುಂದುವರಿಸದೆ ನಾಮ ಜಪ ಮಾಡುವುದಕ್ಕೆ ತೊಡಗಿದರು. ಮಾಳು ಅಲ್ಲಿ ವಾಸ ಮಾಡುವುದು ಅವರಿಗಿಷ್ಟವಿಲ್ಲ. ಚಿಕ್ಕಪ್ಪನನ್ನು ಕಂಡರೂ ಆಗದು. ಒಂದು ಕಾಸಿಗೂ ಗತಿಯಿಲ್ಲದೆ ಕುಟುಂಬದ ಮನೆಯನ್ನು ಮುಗಿಸುವುದಕ್ಕೆ ಬಂದಿರುವುದು ಚಿಕ್ಕಪ್ಪ ಎಂದು ಅವರು ಬೆನ್ನ ಹಿಂದೆ ಅನ್ನುವುದುಂಟು.

ಮನೆಯ ತೆಂಕು ಪಾರ್ಶ್ವವೂ ಬಡಗು ಪಾರ್ಶ್ವವೂ ಮಹಡಿಯ ಮೂರು ಕೋಣೆಗಳೂ ಅಣ್ಣನಮ್ಮನಿಗೂ ಮಕ್ಕಳಿಗೂ ಇರುವುದು. ಮಾಳು ಕೆಲವು ಸಲ ಮಾತ್ರ ಅಲ್ಲಿಗೆ ಹೋಗುವುದುಂಟು. ಮೊದಲನೆಯ ಕೊಠಡಿಯಲ್ಲಿ ಅಟ್ಟಕ್ಕೆ ಮೇಲ್ಕಟ್ಟಿದೆ. ಅದರ ಕೆಳಗೆ ಮಂಚವಿದೆ. ಅದರ ಮೇಲೆ ಅಣ್ಣನಮ್ಮನೂ ತಂಗಕ್ಕನೂ ಮಲಗುವುದು. ನಡು ಕೋಣೆಯಲ್ಲಿ ಭಾಸ್ಕರನೂ, ಕೃಷ್ಣನ್ ಕುಟ್ಟಿಯೂ ಮಲಗುವುದು. ಮೂರನೆಯ ಕೋಣೆ ಯಾವಾಗಲೂ ಬೀಗ ಹಾಕಿರುತ್ತದೆ. ಒಂದು ಸಲ ಒಳಗೆಲ್ಲ ನೋಡಿದ್ದುಂಟು. ಅದರಲ್ಲಿ ಎರಡು ಮಂಚಗಳಿವೆ. ಒಂದರ ಮೇಲೊಂದು ಹಾಸಿಗೆಗಳೂ ದುಂಡು ತಲೆದಿಂಬುಗಳೂ ಇವೆ. ಮೇಲ್ಕಟ್ಟಿಗೆ ಜರಿ ಇದೆ. ಗೋಡೆಯ ತುಂಬ ಚಿತ್ರಗಳಿವೆ. ಒಂದು ದೊಡ್ಡ ಕನ್ನಡಿಯೂ. ಅದರ ಹತ್ತಿರ ಮಣ್ಣಿನ ತಲೆಯ, ಬಣ್ಣ ಹಚ್ಚಿದ ಜಿಂಕೆಯ ಕೊಂಬುಗಳು, ಮಂಚದ ಕೆಳಗೆ ಗಾಜಿನ ಪಾತ್ರೆಗಳು, ಬೆಳ್ಳಿಯ ಪಾತ್ರೆಗಳು, ಮಧ್ಯೆ ದುಂಡು ಮೇಜು, ಅಟ್ಟದಲ್ಲಿ ತೂಗು ಹಾಕಿದ ರಸಗಾಜಿನ ಬುರುಡೆಗಳು......

ಆ ಕೋಣೆ ತಂಗಕ್ಕನಿಗಿರುವುದು.

"ನನಗೊಬ್ಬಳು ಮಗಳಿದ್ದಾಳೆ. ಅವಳನ್ನ ಕೈ ಹಿಡಿದಾಗ ಒಂದು ಸ್ಥಳ ಅಂತ ಬೇಡವೆ?"

ತಂಗಕ್ಕನಿಗೆ ವರ ಬರುವಾಗ ಇರಲಿ ಎಂದು ಮೊದಲೇ ಆ ರೂಮು ಸಿದ್ಧವಾಗಿದೆ.

ತಂಗಕ್ಕ ಐದನೇ ತರಗತಿಯ ವರೆಗೆ ಮಾತ್ರ ಓದಿರುವುದು. ಅವಳೀಗಾಗ ಹದಿನೈದು ವರ್ಷ.

ಮಾಳುಗೆ ಬರುವ ಕುಂಭ ಮಾಸಕ್ಕೆ ಹನ್ನೆರಡು ತುಂಬುತ್ತದೆ ಅಷ್ಟೆ.

ಅಜ್ಜಿ ಮಲಗುವ ಕೋಣೆಯಲ್ಲೇ ಮಾಳು ಮಲಗುವುದು. ಅಟ್ಟದ ಹತ್ತಿರ ತೆಂಕು ಕೋಣೆಯಲ್ಲಿ ತಿರುಗಾಡುವ ಜಾಗದ ಹತ್ತಿರ ಒಂದು ಕೋಣೆಯಿದೆ. ಅದರಲ್ಲಿ ಮಾಳು ವಿನ ತಂದೆ ಮಲಗುವುದು. ಅದರಲ್ಲಿ ಒಂದು ಬಿದಿರಿನ ಗಣೆ, ಸುತ್ತಿಟ್ಟ ಒಂದು ಚಾಪೆ ಮಾತ್ರ ಇರುವುದು.

ಅಜ್ಜಿ ಎತ್ತರ ಕಡಿಮೆಯಿರುವ ಮಂಚದಲ್ಲಿ ಮಲಗುವುದು. ಕೆಳಗೆ ಚಾಪೆಯ ಮೇಲೆ ವಸ್ತ್ರ ಹಾಸಿಕೊಂಡು ಮಾಳು ಮಲಗುವುದು. ಮಳೆಗಾಲ ಬಂದಾಗ ಅಜ್ಜಿ ಹೇಳುತ್ತಾರೆ.

"ಇದರ ಮೇಲೇ ಮಲಕ್ಕೊಳ್ಳೆ, ಮಾಳೂ."

ತುಂಬ ಮಳೆ ಬೀಳುತ್ತಿದ್ದಾಗ ಕಂಬಳಿಯೊಳಗೆ ಸೇರಿಕೊಂಡು ಮಲಗಲು ಹಿತ ವಾಗುತ್ತದೆ.

ಮಾಳು ಎನ್ನುವವಳೊಬ್ಬಳು ಅಲ್ಲಿದ್ದಾಳೆ ಎನ್ನುವ ವಿಷಯವನ್ನು ತಂದೆ ಆಲೋ ಚಿಸುವುದಿಲ್ಲ. ಮಾತಾಡಿಸುವುದಾಗಲೀ ಏನಾದರೂ ಕೆಲಸ ಹೇಳುವುದಾಗಲೀ ಇಲ್ಲವೇ ಇಲ್ಲ. ಅವಳಿಗೆ ಏನನ್ನೂ ತಂದು ಕೊಟ್ಟದ್ದೂ ಇಲ್ಲ.

"ಅವನ ಕೈಯಲ್ಲಿ ಏನಾದರೂ ಇರಬೇಡವೆ?"

ಜಮೀನು ಮಾರುವ ಮೊದಲು ಕೃಷಿಯ ಉಸ್ತುವಾರಿ ನೋಡಿಕೊಳ್ಳುವವನಿದ್ದ. ಈಗ ಮಾಳುವಿನ ತಂದೆಯೇ ನೋಡಿಕೊಳ್ಳುವುದು. ಬೆಳಗ್ಗೆ ಹೊತ್ತಿಗೆ ಮುಂಚೆ ಎದ್ದು ಹೊರಗೆ ಪಡುದಿಕ್ಕಿನ ಅಂಗಳದಲ್ಲಿ ನಿಂತು ಒಂದು ಕೂಗು ಹಾಕುವುದು. ಆಗ ಗುಡ್ಡದ ಕಡೆಯಿಂದ ನಾಲ್ಕೈದು ಮರುಧ್ವನಿಗಳು ಕೇಳಿ ಬರುತ್ತವೆ. ಗುಡ್ಡದ ಹತ್ತಿರ ಹೊಲೆಯರು ವಾಸ ಮಾಡುವುದು. ಅಯ್ಯಪ್ಪನೂ ಚಾತಪ್ಪನೂ ತಾಮಿಯೂ ಅಯ್ಯಪ್ಪನ ಮಗ ಕಣಕ್ರ ಎಲ್ಲರೂ ಬರುತ್ತಿದ್ದರು. ಅವರು ಕೊಟ್ಟಿಗೆಯಿಂದ ಎತ್ತು ಗಳನ್ನು ಬಿಚ್ಚಿ ನೀರು ತೋರಿಸಿಕೊಂಡು ಹೊರಗೆ ಹೋಗುವಾಗ ತಂದೆಯೂ ಜೊತೆ ಯಲ್ಲಿ ಹೋಗುತ್ತಾರೆ. ಆ ಮೇಲೆ ಬರುವುದು ಸೂರ್ಯ ಪಶ್ಚಿಮಕ್ಕೆ ತಿರುಗಿದ ಮೇಲೆ.

ಕೊಟ್ಟಿಗೆಯಲ್ಲಿ ನಾಲ್ಕು ಜೋಡಿ ಎತ್ತುಗಳು. ಉಳುವುದಕ್ಕೆ ಕಟ್ಟುವುದು ಮೂರು ಜೋಡಿಯನ್ನು ಮಾತ್ರ. ಮತ್ತೊಂದು ಜೋಡಿ ಕಂಬಳಕ್ಕೆ ಮಾತ್ರ ಕಟ್ಟುವುದು. ಅಲ್ಲದೆ ಮತ್ತೊಂದು ಹೋರಿಗರು. ದೊಡ್ಡ ಮಾವನಿಗೆ ಕಂಬಳವೆಂದರೆ ಪ್ರಾಣ. ಪಶ್ಚಿಮ ದಿಕ್ಕಿನ ದೊಡ್ಡ ಗದ್ದೆಯಲ್ಲಿ ಕಳೆದ ಮಿಥುನ ಮಾಸದಲ್ಲಿ ಓಟದ ಸ್ಪರ್ಧೆಯಿತ್ತು. ಅನೇಕ ಕಡೆಗಳಿಂದ ಎತ್ತುಗಳು ಬಂದಿದ್ದುವು. ಆನೆಕ್ಕರದಿಂದ, ಕುಮರ ನೆಲ್ಲೂರಿನಿಂದಲೂ ಎತ್ತು ಗಳು ಸ್ಪರ್ಧೆಗೆ ಬಂದಿದ್ದುವು. ದೊಡ್ಡ ಮಾವ ಮಲಗುವುದಕ್ಕೆ ಮೊದಲು, ಲಾಂದ್ರ ಹಿಡಿದುಕೊಂಡು ಕೊಟ್ಟಿಗೆಯ ಹಜಾರದಲ್ಲಿ ಬಂದು ನೋಡುತ್ತಿದ್ದರು. ದಾವಣೆಯ

ಮುಂದ ಹುಲ್ಲಿದೆಯೋ–ಕತ್ತಿನಲ್ಲಿ ಕಟ್ಟಿರುವುದು ಸರಿಯಾಗಿದೆಯೋ ಎಂದೆಲ್ಲ ಪರಿಶೋಧನೆ ನಡೆಸುವ ಕ್ರಮ. ತಿಂಗಳಿಗೊಮ್ಮೆ ತೃತ್ತಾಲ ಸಂತೆಯಿಂದ ಆಡಿನ ತಲೆ ತರಿಸಿ ಕುಟ್ಟಿ ಕಾಯಿಸಿ ಎತ್ತುಗಳಿಗೂ ಹೋರಿಗೂ ಕೊಡುತ್ತಿದ್ದರು.

ವಾರಕ್ಕೊಂದು ಸಲ ಗೊಟ್ಟದಲ್ಲಿ ಎಣ್ಣೆ ತುಂಬಿ ಕುಡಿಸುತ್ತಿದ್ದರು. ಹೋರಿಗೆ ಕೊಡುತ್ತಿದ್ದ ಎಣ್ಣೆ ಎಳ್ಳು ಆಡಿಸಿ ತರಿಸಿದ ಎಣ್ಣೆ. ಎಳ್ಳು ಬಡಿದ ತಕ್ಷಣ ಮೊದಲು ಎಳ್ಳು ಆಡಿಸಲು ಚೀಲದಲ್ಲಿ ತುಂಬಿ ಆತ್ತ್ರೆಯ ಮನೆಗೆ ಕಳುಹಿಸುತ್ತಿದ್ದರು. ಮನೆಯ ಉಪಯೋಗಕ್ಕೆ ಉಳಿಯುತ್ತಿದ್ದದ್ದು ಜಳ್ಳು ವಗೈರೆ. ಅಜ್ಜಿಗೆ ಎಳ್ಳು ಹುರಿದು ಹುಡಿ ಮಾಡಿಕೊಂಡು ತಿನ್ನಲು ತುಂಬ ಇಷ್ಟ.

ತಿಂಗಳಿಗೊಂದು ಸಲ ಎರಡು ಕುಡ್ತೆ ಎಣ್ಣೆ ಮನೆಯ ಲೆಕ್ಕ. ಮಂಗಳವಾರ ಶುಕ್ರವಾರ ಹೆಂಗಸರು ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡಬೇಕಾಗಿದ್ದ ದಿನಗಳು. ಆ ದಿನಗಳಲ್ಲಿ ತಲೆಗೆ ಒಂದು ತೊಟ್ಟು ಹಚ್ಚಿಕೊಳ್ಳುತ್ತಿದ್ದದ್ದು. ಅಣ್ಣನಮ್ಮನೂ ಮಕ್ಕಳೂ ಅದರಲ್ಲಿ ಪಾಲಿಗೆ ಬರುತ್ತಿರಲಿಲ್ಲ. ಮಾಳಿಗೆಯ ಮಧ್ಯದ ಕೋಣೆಯಲ್ಲಿ ದಪ್ಪನೆಯ, ಕಪ್ಪನೆಯ ಡಬ್ಬದಲ್ಲಿ ಅಣ್ಣ ನಮ್ಮ ಯಾವಾಗಲೂ ಎಣ್ಣೆ ತಂದು ತುಂಬಿಸಿಟ್ಟುಕೊಂಡಿರುತ್ತಾಳೆ.

ತಂದೆಯ ಹತ್ತಿರ ಏನನ್ನಾದರೂ ಹೇಳಲು ಮಾಳುವಿಗೆ ಸಂಕೋಚ. ಪದಕದ ದಾರ ಕಿತ್ತುಹೋದಾಗ ಅದನ್ನು ಹೇಳಿ ಸರಿಮಾಡಿಸಿಕೊಳ್ಳಬೇಕು ಅನ್ನಿಸಿತ್ತು. ತಂದೆಯ ಹತ್ತಿರ ಹೇಳಬೇಕೆಂದು ಅಜ್ಜಿಯ ಹತ್ತಿರ ಹೇಳಿದಳು. ಆಚಾರಿ ಕುಂಜುಗೆ ನಾಲ್ಕಾಣೆ ಕೊಡಬೇಕು.

"ಅವನ ಹತ್ರ ಕಾಸಿದೆಯೋ ಇಲ್ಲವೋ ಕಾಣೆ. ಕುಂಜು ಈ ದಾರೀಲಿ ಹೋಗುವಾಗ ಕಂಡರೆ ಬರಹೇಳು. ನಾನು ಹೇಳಿ ಸರಿಮಾಡಿಸಿಕೊಡ್ತೀನಿ."

ತಂದೆಯ ಕೈಯಲ್ಲಿ ಹಣವಿಲ್ಲ ಎಂದು ಅವಳಿಗೂ ಗೊತ್ತಿದೆ. ಅಜ್ಜಿಗೂ ಗೊತ್ತಿದೆ. ಆದರೂ ಅಜ್ಜಿ ಹಸ್ತ ನಕ್ಷತ್ರ ಕಳೆದ ಮೇಲೆ ಹೇಳಿದರು.

"ಕುಟ್ಟಾ ಓಣಂ[1] ಬರೋ ದಿನ ಆಯ್ತು. ಆ ಹುಡುಗೀಗೆ ಉಡೋದಕ್ಕೆ ಎರಡು ಮುಂಡು, ಒಳಗಿನ ವಸ್ತ್ರ ತರಬೇಕು. ತಿರು ಓಣಕ್ಕೆ[2] ಉಡಿಸಬೇಕು."

ತಂದೆ ಯಾರ ಹತ್ತಿರವೋ ಕಷ್ಟ ಹೇಳಿಕೊಳ್ಳುವಂತೆ ಹೇಳಿದರು.

"ನನ್ನ ಕೈಯಲ್ಲಿ ಕಾಸಿಲ್ಲ."

"ಹತ್ತು ಹದಿಮೂರು ವಯಸ್ಸಾಯ್ತು. ಈ ಪ್ರಾಯದಲ್ಲಿ ಹೆಣ್ಣು ಮಕ್ಕಳು ಋತುವಾಗೋ ಕಾಲ. ದಾರ ಕೋಪೀನ ಕಟ್ಟಿಕೊಂಡು ಓಡಾಡ್ತಿದ್ದರೆ ಜನ ನಗೋದಿಲ್ಲವಾ?"

ತಂದೆ ಮೌನವಾಗಿದ್ದರು.

"ಯಾಕೆ ಮಾತಾಡೋದಿಲ್ಲ?"

---

1. ಹಬ್ಬ. 2. ಹಬ್ಬ.

"ಅಮ್ಮನಿಗೆ ಗೊತ್ತಿದೆಯಾ? ವರ್ಷದಲ್ಲಿ ನಾಲ್ಕು ಪಂಚೆ—ಎರಡು ಟವಲು—ಎರಡು ಕೋಪೀನ—ಈ ತರವಾಡಿನ ಯಜಮಾನರು ನನಗೆ ಕೊಡ್ತಿರೋದು."

"ಅದೆಲ್ಲ ನನಗೆ ಗೊತ್ತಿದೆ."

"ಮತ್ಯಾಕ್ಕೆ ಹಂಗೆಲ್ಲ ಮಾತಾಡೋದು ನೀವು? ಒಂದೇ ಒಂದು ಕಾಸು ನನ್ನ ಹತ್ರ ಇಲ್ಲ. ಹಗಲು ರಾತ್ರಿ ಕೋಣ ದುಡಿದ ಹಾಗೆ ದುಡೀತಿದ್ದೀನಿ. ಮೊದಲೇ ನಾನು ಹೇಳಿದೆ ನನಗೆ ಇದನ್ನೆಲ್ಲ ವಹಿಸಿಕೊಳ್ಳೋದಕ್ಕೆ ಆಗೋದಿಲ್ಲ ಅಂತ. ಅತ್ಯಾವಶ್ಯಕವಾದದ್ದನ್ನು ಕೊಡೋದಕ್ಕೆ ಆಗದೇ ಇದ್ರೆ ಒಪ್ಪಿಗೆ ಕೊಡೋದು ಬೇಡ......ನಾನು ಹೇಳಿರಲಿಲ್ಲವಾ? ಬೇಡ; ಬೇಡ ಅಂತ?

"ಆ ಭಾರ ಕಳೀತಲ್ಲ."

"ಹೋದವರು ಕಷ್ಟವಿಲ್ಲದೆ ಹೋದರು. ನನಗಿದು ಯಾವುದೂ ಬೇಡ ಅಂತಲೂ ಅಲ್ಲ—ನನ್ನ ಕೈಯಲ್ಲಿ ಒಂದು ಮುಕ್ಕಾಲು ಇಲ್ಲ."

ದೊಡ್ಡ ಮಾವನ ಸ್ವಂತ ಇಷ್ಟದಿಂದ ಅಳಿಯನ ಮದುವೆಯಾದದ್ದು, ಸಂಬಂಧದವರ ಒಬ್ಬ ಯಜಮಾನರ ಮಗಳಾಗಿದ್ದಳು ಮಾಳುವಿನ ತಾಯಿ.

ಆ ಮದುವೆ ಸ್ವಂತ ಮನೆಯಲ್ಲಾದ ವಿಷಯವನ್ನು ಮಾಳು ಕೇಳಿಸಿಕೊಂಡಿದ್ದಳು. ದೊಡ್ಡ ಮಾವ ಕರೆದು ಹೇಳಿದರು. ಅವರು ಹೇಳಿದ ಹಾಗೆ ತಂದೆ ಕೇಳಿದರು. ಎರಡು ಪಂಚೆ ಮತ್ತು ತಾಂಬೂಲವನ್ನು ಕೊಟ್ಟು ತಂದೆಯನ್ನು ಹೆಣ್ಣಿನ ಮನೆಗೆ ಕಳುಸಿದ್ದು. ಜೊತೆಯಲ್ಲಿ ನಾಲ್ಕು ಜನರು ನಾಯರರು.

"ಮಾವನ ಹತ್ತಿರ ಕೇಳಿನೋಡು." ಎಂದು ಅಜ್ಜಿ ಹೇಳಿದರು.

"ನನ್ನ ಕೈಲಾಗೋದಿಲ್ಲ. ನನಗೂ ಮೇಲೆ ಅಮ್ಮ ಇಲ್ಲವೇ. ಅಮ್ಮ ಹೇಳಿದರೇ ಒಳ್ಳೆಯದು."

"ನೀನು ಕೇಳು ಕುಟ್ಟಾ. ಅವನೇನು ನಿನ್ನ ತಿಂದು ಹಾಕ್ತಾನಾ?"

ತಂದೆ ಗಂಟಲೆತ್ತರಿಸಿ ಹೇಳಿದರು.

"ನಾನು ಕೇಳ್ತೀನಿ. ಕೇಳಬೇಕೂಂತ ತೀರ್ಮಾನಿಸಿದ್ದೀನಿ."

ಆ ಶಬ್ದ ಅಜ್ಜಿಯನ್ನು ಆಶ್ಚರ್ಯಗೊಳಿಸಿದಂತೆ ತೋರಿತು.

"ನೀನು ಏನು ಹೇಳ್ತಾ ಇದ್ದೀಯಾ?"

"ನನಗೆಲ್ಲಾ ಗೊತ್ತು ಅಮ್ಮ. ನಾನು ಎಲ್ಲ ಮನಸ್ಸಿನಲ್ಲಿ ಗಂಟು ಹಾಕಿಕೊಂಡಿದ್ದೀನೆ. ಕೇಳೋದಕ್ಕೆ ನನಗೆ ಗೊತ್ತಿದೆ. ಸ್ವಂತ ಮನೆ ಸರಿಮಾಡಿಸೋದು ಕೈಯಾಲೆ ಸರಿಮಾಡಿಸೋದು ಸುಣ್ಣ ಬಳಿಯೋದು ಅದಕ್ಕೆಲ್ಲಾ ಕಾಸಿದೆ. ಅದಕ್ಕೆಲ್ಲಾ......"

ತಂದೆ ಹೇಳುತ್ತಿರುವುದನ್ನು ಮಾಳುವಿಗೆ ನಂಬುವುದಕ್ಕೇ ಆಗಲಿಲ್ಲ. ಏನನ್ನೂ ಮಾತನಾಡದ ತಂದೆ ಹೀಗೆ ಮಾತನಾಡುತ್ತಿದ್ದಾರಲ್ಲಾ ಎಂದು.

"ಅದೆಲ್ಲ ನಾನು ಬೆವರಿಸಿ ಸಂಪಾದನೆ ಮಾಡಿದ್ದು."

"ಗಟ್ಟಿಯಾಗಿ ಮಾತಾಡಬೇಡ ಕಣೋ. ಕುಂಞಿಕೃಷ್ಣ ಕೇಳಿಸಿಕೊಂಡಾನು.'

ಅಜ್ಜಿ ಅಂಜುತ್ತಾ ಅಂಜುತ್ತಾ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತರು.

"ಒಂದು ದಿನ ಕೇಳ್ತೀನಿ. ಅಳಿಯನಿಗೂ ಬಾಯಿ ಇದೆ ಅನ್ನೋದನ್ನ ತೋರಿಸ್ತೀನಿ." ಎಂದು ಹೇಳಿ ತಂದೆ ಹೊರಟು ಹೋದರು.

ಅಜ್ಜಿ, ದೊಡ್ಡ ಮಾವ ಇಬ್ಬರೂ ಪರಸ್ಪರ ಮಾತಾಡುವುದಿಲ್ಲ. ಹಿಂದೆ ಮನೆಯೊಳಕ್ಕೇನಾದರೂ ವಿಷಯ ಹೇಳಬೇಕಾಗಿದ್ದರೆ ದೊಡ್ಡ ಮಾವ "ಒಡಹುಟ್ಟಿದೋಳೇ ಅಂತ ಕರೆಯುತ್ತಿದ್ದದ್ದು. ದೊಡ್ಡ ಮಾವನಿಗಿಂತ ಹತ್ತು ವರ್ಷ ದೊಡ್ಡವರು ಅಜ್ಜಿ.

ಕಳೆದ ವರ್ಷ ಸರ್ಪನಾಟ್ಯ ಪ್ರಾರಂಭವಾದ ಮರುದಿನ ಅವರಿಬ್ಬರಲ್ಲಿ ವೈಮನಸ್ಯ ಉಂಟಾದದ್ದು. ಅಪ್ಪುಣ್ಣಿ ಅಣ್ಣನನ್ನು ದೊಡ್ಡ ಮಾವ ಬೈದು ಕಳುಹಿಸಿದಾಗ. ಅದೇ ದಿನ ಸಂಜೆ ಮಾತುಕತೆ ಬಿಸಿಯಾದದ್ದು.

"ಆ ಹುಡುಗನಿಗೂ ಇಲ್ಲಿ ಹಕ್ಕಿದೆ."

ಆಗ ದೊಡ್ಡ ಮಾವ ನಿಂತು ಸೊಂಟದ ಮೇಲೆ ಕೈಯಿಟ್ಟುಕೊಂಡು ಕೇಳಿದರು.

"ಹಕ್ಕು ! ಯಾರು ಅವನು?"

"ಅವನೂ ಇಲ್ಲಿಯವನು ತಾನೆ?"

"ಮುದುಕೀ ಮಾತಾಡದೆ ಸುಮ್ಮನೆ ಕೂತುಕೋ"

ಒಡಹುಟ್ಟಿದವಳೇ ಎಂದು ಕರೆಯುತ್ತಿದ್ದ ಮನುಷ್ಯ ಕರೆದದ್ದು "ಮುದುಕೀ" ಎಂದು.

"ನೀನೊಬ್ಬ ಯಮ ಇದ್ದ ಹಾಗೆ ಕುಂಞಿಕೃಷ್ಣ. ಈ ತರವಾಡಿನ ಯಮ......"

ದೊಡ್ಡ ಮಾವ ರೇಗಿದರು.

"ಒದೆದು ನಾನು—"

ಅಜ್ಜಿ ಮತ್ತೆ ಮಾತನ್ನು ಮುಂದುವರಿಸಲಿಲ್ಲ, ಎದ್ದು ಒಳಕ್ಕೆ ಹೋದರು. ಹೋಗುತ್ತಾ ಹೇಳಿದರು.

"ಅವನು ಅದೂ ಮಾಡ್ತಾನೆ. ನಡತೆ ಕೆಟ್ಟವನು."

* * * * *

ಅಪ್ಪುಣ್ಣಿ ಸ್ಕೂಲಿಗೆ ಹೋಗುತ್ತಿರುವ ಸಂಗತಿ ಮಾಳು ಹೇಳಿದಾಗ ಅವರಿಗೆ ತಿಳಿಯಿತು.

"ನಿಜವೇನೆ?"

"ಹೌದು ಅಜ್ಜಿ ನಾನು ನೋಡಿದೆ."

"ಸುಮ್ಮನೆ ಹಾಗೆ ಹೇಳ್ತೀಯೇನೋ."

"ಇಲ್ಲ ನಾನು ಮಾತಾಡಿಸಿ ಬಂದಿದ್ದೀನಿ."

ಆಗಲೇ ಅವರಿಗೆ ನಂಬಿಕೆ ಮೂಡಿದ್ದು.

"ಆ ಹುಡುಗನಿಗೆ ದೇವರು ಆಯುಸ್ಸು ಕೊಡಲಿ. ಅವಳಿಗಿರೋದೆಲ್ಲಾ ಅವನೇ ತಾನೆ?"

ಹಿಂದೆ ಪಾರುಕುಟ್ಟಿ ತೌರಿನ ಮುಖಕ್ಕೆ ಮಸಿ ಬಳಿದವಳು ಎಂದು ಅನ್ನಿಸಿತ್ತು ಅವರಿಗೆ. ಆ ಕಾಲದಲ್ಲಿ ಯಾರಾದರೂ ಪಾರುಕುಟ್ಟಿಯ ವಿಷಯವಾಗಿ ಹೇಳಿದರೆ ಅವರು ಹೇಳುತ್ತಿದ್ದರು—

"ಅವಳನ್ನ ನನ್ನ ಮನೆಯಲ್ಲಿ ಹೆತ್ತ್ರೆ ಅಷ್ಟೆ."

ಆದರೆ ವರ್ಷಗಳು ಕಳೆದಂತೆ ಪಾರುಕುಟ್ಟಿಯ ಚಿಂತೆ ಹೆಚ್ಚಾಯಿತು. ವಡಕ್ಕೇಪಾಟ್‌ನಿಂದ ಪೂತನ್ ಜಮೀನಿಗೆ ಇರುವುದು ಎರಡು ಮೈಲಿ ದೂರ ಮಾತ್ರ.

ಎರಡು ಮೈಲಿ ದೂರವಿದ್ದರೂ ಎಷ್ಟು ದೂರದಲ್ಲಿ ಇರಿಸಿರುವುದು ಎನ್ನಿಸಿತು. ಯಾರೂ ಅಲ್ಲಿಗೆ ಹೋಗುವಂತಿಲ್ಲ. ಹೋದವರು ಮತ್ತೆ ಈ ತರವಾಡಿನ ಹೊಸಲು ತುಳಿಯುವಂತಿಲ್ಲ. ಹಾಗಿತ್ತು ಆಜ್ಞೆ. ಆ ಕಟ್ಟಾಜ್ಞೆಯನ್ನು ಮೀರಲು ಯಾರಿಗೂ ಧೈರ್ಯವಿರಲಿಲ್ಲ. ಪಾರುಕುಟ್ಟಿ ಹೆತ್ತ ಸುದ್ದಿ ಬಹಳ ರಹಸ್ಯವಾಗಿ ಬಡಗು ಮನೆಗೆ ತಲಪಿತು. ಹೊಲೆಯರಲ್ಲಿ ಯಾರೋ ಬಂದು ಗುಟ್ಟಾಗಿ ಹೇಳಿದರು. ಆಗ ಅವರು ತಕ್ಷಣ ಎದ್ದು ಹೊರಗೆ ಬಂದು ಕೇಳಿದರು.

"ಹೌದಾನೀಲಿ ! ಎಂಥಾ ಮಗು?"

"ಗಂಡು ಮಗು."

"ಯಾವಾಗ? ತುಂಬಾ ನೋವಿತ್ತಾ? ಯಾರಿದ್ರು ನೋಡಿಕೊಳ್ಳೋದಕ್ಕೆ?"

"ನೆನ್ನೆ ರಾತ್ರೆ, ಮಲಗೋ ಹೊತ್ತಾಗೆ ನೋವು ಕಾಣಿಸಿ ಗೊತ್ತಂತೆ. ಬೆಳಗಾಗೋದ್ರೊಳಗೆ ಹೆತ್ರು. ನೋಡ್ಕೊಳ್ಳಾಕೆ ವೆಳ್ಳತ್ತೋಳ್ ಇದ್ರು."

ಆ ಮಾತು ಇನ್ನೂ ಮುಗಿದಿರಲಿಲ್ಲ. ಅಷ್ಟರಲ್ಲಿ ಮಗಳು ಅಲ್ಲಿಗೆ ಬಂದಳು.

"ಅಷ್ಟೊಂದು ಆಸೆ ಇದ್ರೆ ಮಗಳು ಹೆರೋದನ್ನ ನೋಡೋದಕ್ಕೆ ಅಮ್ಮ ಹೋಗಬಹುದಾಗಿತ್ತಲ್ಲ."

ಅವರು ಬೇಗ ಹಿಂದಿರುಗಿ ಬಂದು ಕತ್ತಲೆ ಕವಿದಿದ್ದ ತಮ್ಮ ಕೊಠಡಿಯಲ್ಲಿ ಮಂಚದ ಮೇಲೆ ಕುಳಿತುಕೊಂಡರು.

ಕೋಂದುಣ್ಣಿ ನಾಯರ್ ತೀರಿಕೊಂಡ ಸುದ್ದಿ ಕೇಳಿದ ದಿನ ಯಾರಿಗೂ ತಿಳಿಯದಂತೆ ಆ ಕೋಣೆಯಲ್ಲೇ ಕುಳಿತು ಅತ್ತರು. "ಅವಳಿಗಿನ್ನು ದಿಕ್ಕು ಯಾರು?" ಎಂದು.

ಗಟ್ಟಿಯಾಗಿ ಏನನ್ನೂ ಮಾತನಾಡುವಂತಿಲ್ಲ. ಬಡಗು ಮನೆಗೆ ಬರುವ ಉಮ್ಮ

ಳನ್ನೂ ಹೊಲತಿಯನ್ನೂ ಒಂಟಿಯಾಗಿ ಸಿಕ್ಕಿದಾಗ ಕೇಳಿ ತಿಳಿದುಕೊಳ್ಳುತ್ತಿದ್ದರು. ದೊಡ್ಡ ಮಗಳಿಗೆ ತಿಳಿಯದು. ಮೀನಾಕ್ಷಿಗೆ ಏನು ಕೇಳಿಸಿದರೂ ಯಾವ ಬೇಸರದ ಮನೋ ಭಾವವೂ ಇಲ್ಲ. ಅಳುವುದಿಲ್ಲ. ನಗುವುದಕ್ಕಾಗುವುದಿಲ್ಲ ಎನ್ನುವ ರೀತಿಯಲ್ಲಿ ಯಾವಾಗಲೂ ಮೀನಾಕ್ಷಿಯ ಮುಖಭಾವ.

ಅಪ್ಪುಣ್ಣಿಯನ್ನು ಒಂದು ಸಲ ಕಾಣಬೇಕು ಎಂದಿತ್ತು. ಗೇಟಿನ ಹತ್ತಿರ ನಿತ್ಯವೂ ಎರಡು ಸಲ ಹೋಗುತ್ತಾನೆಂದು ಕೇಳಿದ್ದರು. ಭಾಸ್ಕರನೂ ಕೃಷ್ಣನ್ ಕುಟ್ಟಿಯೂ ಓದುತ್ತಿರುವ ಸ್ಕೂಲಿನಲ್ಲೇ ಅಪ್ಪುಣ್ಣಿಯೂ ಓದುತ್ತಿರುವುದು. ತುಂಬ ನಯವಾಗಿ "ಮಗಾ ಭಾಸ್ಕರ, ನನ್ನ ಅಪ್ಪು ಇಲ್ಲಿ ಬಂದನಾ?" ಎಂದು ಕೇಳಬೇಕೆನ್ನಿಸಿದರೂ "ಅವನಿಗೆ ಬರ ಬೇಕು ಅನ್ನಿಸಿದರೆ ಬರುತ್ತಾನೆ" ಎಂದುಕೊಳ್ಳುತ್ತಿದ್ದರು.

ಸಾಯಂಕಾಲ ಹಿತ್ತಿಲಿನ ಅಂಚಿನಲ್ಲಿ ಹೋಗಿ ನಿಂತುಕೊಂಡರೆ ಅಪ್ಪುಣ್ಣಿಯನ್ನು ಕಾಣ ಬಹುದಾಗಿತ್ತು. ಆದರೆ ಅಂಗಳ ದಾಟಿ ಹೋಗುವುದು ಕಷ್ಟ. ಬೆನ್ನು ಮೂಳೆಯಲ್ಲಿ ಶಕ್ತಿಯಿಲ್ಲ, ಹತ್ತು ಹನ್ನೆರಡು ಮೆಟ್ಟಿಲುಗಳನ್ನಿಳಿದು ಅಂಗಳದ ಅಂಚಿಗೆ ಹೋಗಬೇಕು. ಇಳಿದರೆ ಮತ್ತೆ ಹತ್ತುವುದು ಕಷ್ಟ, ಅಲ್ಲದೆ ಅಲ್ಲಿಗೆ ಹೋಗಿ ನಿಂತು ಮಾತನಾಡುವುದನ್ನು ಯಾರಾದರೂ ಕಂಡರೆ ಮುಗಿಯಿತು.

"ಒದೆಯುತ್ತೇನೆ" ಎಂದು ಮೊದಲು ಹೇಳಿದ್ದದ್ದು. ಅದನ್ನು ಅವರಿಗೆ ಎಂದೂ ಮರೆಯುವುದಕ್ಕೆ ಸಾಧ್ಯವಿಲ್ಲ. ಸಣ್ಣ ಹುಡುಗನಾಗಿದ್ದಾಗ ಮೈಯಲ್ಲೆಲ್ಲಾ ಕಜ್ಜಿ ಹತ್ತಿದ್ದಾಗ ಮುಳ್ಳಿಲೆ ಪುಡಿ ಹಚ್ಚಿ ಸ್ನಾನ ಮಾಡಿಸುತ್ತಿದ್ದವರು ಅವರು. ಅಮ್ಮನಿಗೆ ಮಕ್ಕಳನ್ನು ನೋಡಿಕೊಳ್ಳುವುದಕ್ಕೆ ಸಮಯವಿರಲಿಲ್ಲ. ಬೆಳಗ್ಗೆ ಸೊಂಟದ ಮೇಲೆ ಎತ್ತಿಕೊಂಡರೆ ಸಾಯಂಕಾಲ ಮಲಗುವಾಗ ಕೆಳಗಿಳಿಸುತ್ತಿದ್ದದ್ದು. ಹಾಗೆ ಅನ್ನ ಊಡಿಸಿ ಸ್ನಾನ ಮಾಡಿಸಿ ಜೊತೆಯಲ್ಲಿ ಮಲಗಿಸಿಕೊಂಡು ಸಾಕಿ ಬೆಳೆಸಿದ ತಮ್ಮ ಕುಂಞಕೃಷ್ಣ. ಈ ಮನೆಯ ಯಜಮಾನನಾದ ಮೇಲೆ ಮಾತನಾಡಿಸಬೇಕಾಗಿದ್ದರೆ ಸಮಯ ಸನ್ನಿವೇಶವನ್ನು ನೋಡಿಕೊಂಡು ಹೋಗಬೇಕು, ಕಟ್ಟ ಕಡೆಗೆ ಸಿಕ್ಕಿದ್ದು—

"ಒದೆದು ನಾನು—"

ಅದನ್ನು ನೆನೆಸಿಕೊಂಡಾಗ ಅವರ ಕಣ್ಣುಗಳು ತೇವಗೊಂಡುವು.

"ಅನುಭವಿಸ್ತಾನೆ. ಇದಕ್ಕೆಲ್ಲಾ ಅನುಭವಿಸ್ತಾನೆ".

"ಯಾರ ಜೊತೇಲಿ ಅಜ್ಜಿ ಮಾತಾಡ್ತಿರೋದು?"

—ಮೂಳು ಬಾಗಿಲಿನ ಹತ್ತಿರ ಬಂದು ಕೇಳಿದಳು.

"ಯಾರ ಹತ್ರವೂ ಇಲ್ಲ ಮಗಳೇ. ಸಂಜೆ ಮಲ್ಲಿಗೆ ಅರಳೋ ಹೊತ್ತಾಯ್ತಾ?"

"ಆಯ್ತು ಅಮ್ಮ."

"ಒಂದು ಸಲ ನೋಡೋ ಹಾಗಾಗುತ್ತೆ ಆ ಯಮ ಹಾಯುಗೊಡೋದಿಲ್ಲ."

"ಅಪ್ಪುಣ್ಣಿ ಅಣ್ಣ ಬರಬೇಕಾದ್ರೆ ಇನ್ನೂ ಸ್ವಲ್ಪ ಹೊತ್ತಾಗ್ಬೇಕು."

ಮಾಳುಗೆ ಒಂದು ಲೆಕ್ಕಾಚಾರವಿದೆ. ಪಪ್ಪಾಯಿ ಮರದ ನೆರಳು ಪಾತ್ರೆ ತೊಳೆಯುವ ಕಲ್ಲಿನ ಪತ್ತಿರಕ್ಕೆ ಬರಬೇಕಾದರೆ ಇನ್ನೂ ಸ್ವಲ್ಪ ಹೊತ್ತಾಗಬೇಕು. ಆಗ ಅಪ್ಪುಣ್ಣಿ ಅಣ್ಣ ಬರುವುದು.

"ಹೇಳಿ ಏನು ಪ್ರಯೋಜನ? ಆ ಯಮ ಮೆಟ್ಲ ಹತ್ರಾನೇ ಇರ್ತಾನಲ್ಲ?"

"ದೊಡ್ಡ ಮಾವ ಹೋದ್ರಲ್ಲಾ?"

ಯಾರನ್ನುದ್ದೇಶಿಸಿ ತಾನು ಯಮ ಅಂದಿದ್ದರೋ ಅದು ಅವಳಿಗೆ ತಿಳಿದದ್ದು ಕಂಡು ಅವರಿಗೆ ಹೇಗೆ ಹೇಗೋ ಆಯಿತು.

"ನಿಂಗೆ ನಿಜವಾಗಿಯೂ ಗೊತ್ತಾ?"

"ಹೌದಜ್ಜಿ. ಅಮ್ಮಿಣಿ ಅಕ್ಕನೂ ದೊಡ್ಡತ್ತೆಯೂ ಜೊತೇಲಿ ಹೋದ್ರು. ಇನ್ನು ನಾಡಿದ್ದು ಬರೋದು."

"ಅವ್ನ ಹೋದ್ರೆಷ್ಟು–ಬಂದ್ರೆಷ್ಟು ನನಗೆ"

ಅವರು ಆಲೋಚಿಸಿದರು. ಅಪ್ಪುಣ್ಣಿಯನ್ನು ಒಮ್ಮೆ ಕಂಡು ಅಲ್ಲಿಯ ಸುದ್ದಿಯನ್ನೆಲ್ಲ ತಿಳಿದರೇನು ಎಂದು.

ಕುಂಞಿಕಾಳಿಗೆ ಅದು ಇಷ್ಟವಾಗುವುದಿಲ್ಲ. ಆದರೆ ಅವಳ ಇಷ್ಟಾನಿಷ್ಟಗಳನ್ನು ಕಟ್ಟಿಕೊಂಡು ಆಗಬೇಕಾಗಿರುವುದಾದರೂ ಏನು?

ಕುಂಞಿಕಾಳಿ ಚಿಕ್ಕವಳಾಗಿದ್ದಾಗ ಹೀಗಿರಲಿಲ್ಲ. ಮೂವರು ಹೆಣ್ಣು ಮಕ್ಕಳಲ್ಲಿ ಎಲ್ಲರಿಗಿಂತ ಪ್ರೀತಿಯವಳಾಗಿದ್ದವಳು. ನಂಬೂದಿರಿಯ ಸಂಬಂಧವಾದ ಮೇಲೆ ಅವಳ ಸ್ವಭಾವವೇ ಬದಲಾಯಿಸಿತು. ಅವಳಿಗಿಷ್ಟವಾಗಿರಲಿಲ್ಲ ಆ ಸಂಬಂಧ. ತಾಯಿಯೂ ಅಜ್ಜಿಯೂ ನಿರ್ಬಂಧಿಸಿದಾಗ ಎದುರು ಮಾತಾಡಲಿಲ್ಲ ಅಷ್ಟೆ. ಅದರಿಂದಾಗಿ ಅಂತಸ್ತು ತೋರಿಸಿಕೊಂಡು ಮೆರೆಯುತ್ತಿದ್ದಾಳೆ. ಅಡಕೆ ಕಾಯಿ ಮರವಾದ ಮೇಲೆ ಮಡಿಲಿನಲ್ಲಿಟ್ಟುಕೊಳ್ಳುವುದಕ್ಕಾದೀತೇ ಎಂದು ಅವರು ಸಮಾಧಾನಪಟ್ಟುಕೊಳ್ಳುತ್ತಿದ್ದರು.

"ಮಾಳೂ"

ಮಾಳು ಅಡಿಗೆ ಮನೆಗೆ ಹೋಗಿ ಆಗಿತ್ತು. ಕರೆದದ್ದನ್ನು ಕೇಳಿ ಅವಳು ಹಿಂದಿರುಗಿ ಬಂದಳು.

"ಏನಜ್ಜೀ"

"ಅಣ್ಣನಮ್ಮ ಎಲ್ಲೀ"

"ಅಣ್ಣನಮ್ಮನೂ ತಂಗಕ್ಕನೂ ಕೊಳದ ಹತ್ತಿರಕ್ಕೆ ಹೋದರು."

ಅವರು ಮೆಲ್ಲನೆ ಎದ್ದು ನಿಂತರು.

"ನೀನು ನನ್ನ ಜೊತೇಲಿ ಬಾ. ಅಂಗಳದಂಚಿನ ಹತ್ರಕ್ಕೆ ಸ್ವಲ್ಪ ಹೋಗೋಣ."

ಅಪ್ಪಣ್ಣಯನ್ನು ಕಾಣಬೇಕೆಂದು ಹೇಳಲು ಅಳುಕುತ್ತಿದ್ದರು.

"ಮೆಟ್ಟಿಲಿಳಿಯೋದಕ್ಕಾಗುತ್ತಾ ಅಜ್ಜೀ?"

"ಇರ್ಲಿ ನಡಿಯೇ"

ಮಾಳುವಿನ ಸಹಾಯವನ್ನು ಪಡೆದು ಮೆಲ್ಲಮೆಲ್ಲನೆ ಮೆಟ್ಟಿಲನ್ನಿಳಿದರು. ತೆಂಗಿನ ಗುಂಡಿಗಳ ಹತ್ತಿರ ನಡೆಯುವುದು ಸ್ವಲ್ಪ ಕಷ್ಟವಾಗಿತ್ತು. ದೃಷ್ಟಿ ಸ್ವಲ್ಪ ಮಂದವಾಗಿತ್ತು. ದಿಂಡಿನ ಹತ್ತಿರ ಹೋಗಿ ನಿಂತುಕೊಂಡರು.

ಮಾಳು ಗದ್ದೆ ಬಯಲಿನ ಆಚೆಯ ಅಂಚಿನ ವರೆಗೂ ಕಣ್ಣೋಡಿಸಿದಳು. ಯಾರೂ ಕಾಣಿಸುತ್ತಿಲ್ಲ. ಸ್ವಲ್ಪ ಹೊತ್ತು ನಿಂತಾಗ ಮರಗೆಣಸು ನೆಟ್ಟಿದ್ದರ ಆಚೆ ಕಡೆಯಿಂದ ಒಂದು ಬಿಳಿ ಬಣ್ಣ ಕಾಣಿಸಿತು. ತುಂಬ ಹತ್ತಿರ ಬಂದಾಗ ಮಾಳು ಹೇಳಿದಳು.

"ಅದೋ ಅಪ್ಪಣ್ಣ ಅಣ್ಣ"

ಆದರೆ ಅಪ್ಪಣ್ಣ ಬೇಲಿಯ ಹತ್ತಿರದ ದಾರಿಯಲ್ಲಿ ಬರದೆ ಗದ್ದೆ ಬಯಲಿನ ಮಧ್ಯದ ದಾರಿಯಲ್ಲಿ ಹೋಗುತ್ತಿದ್ದ.

"ಈ ಕಡೆಗೆ ಕರಿಯೇ, ಅಜ್ಜಿ ನಿಂತುಕೊಂಡಿದ್ದಾರೆ ಅನ್ನೇ." ಎಂದರು.

ಅಲ್ಲಿಂದಲೇ ಕರೆದರೆ ಅಪ್ಪಣ್ಣ ಅಣ್ಣನಿಗೆ ಕೇಳಿಸದಿದ್ದರೋ?

ಅವಳು ಬೇಲಿಯ ಕಂಡಿಯಲ್ಲಿ ಇಳಿದು ಗದ್ದೆ ಬಯಲಿಗೆ ಓಡಿದಳು.

ಅಪ್ಪಣ್ಣ ಬೆವರಿನ ಸ್ನಾನ ಮಾಡಿ ಪುಸ್ತಕಗಳನ್ನು ಕಂಕುಳಲ್ಲಿಟ್ಟುಕೊಂಡು ನಿಧಾನವಾಗಿ ನಡೆಯುತ್ತಿದ್ದ.

ಬೇಗ ಓಡಿಹೋಗಿ ಹೇಳಿದಳು:

ಅಪ್ಪಣ್ಣ ಅಣ್ಣಾ, ಕರೀತಾರೆ."

ಅವನು ನಡೆಯುತ್ತಲೇ ಕೇಳಿದ:

"ಯಾರು?"

"ಅಜ್ಜಿ, ಅಗೋ ಅಲ್ಲಿ ನಿಂತಿದ್ದಾರೆ."

"ನಾನಲ್ಲಿಗೆ ಬರೋದಿಲ್ಲ."

"ಅಜ್ಜಿ ಹೇಳಿ ಕಳಿಸಿದ್ದು ಅಪ್ಪಣ್ಣ ಅಣ್ಣ. ಅಲ್ಲಿ ನೋಡು ಅಜ್ಜಿ ನಿಂತು—"

"ನಾನಲ್ಲಿಗೆ ಬರೋದಿಲ್ಲ ಅಂತ ಅನ್ನಲಿಲ್ಲವಾ?"

ಅವನು ಬೇಗ ಬೇಗ ಹೆಜ್ಜೆ ಹಾಕಿದ.

ಅವಳು ನಿರಾಶೆಯಿಂದ ಹಿಂದಿರುಗಿದಳು. ಹತ್ತಿರ ಬಂದಾಗ ಅಜ್ಜಿ ಕೇಳಿದರು.

"ಎಲ್ಲೇ"

"ಬರಲಿಲ್ಲ ಕಣಜ್ಜಿ"

"ನಾನು ಕರೀತಿದ್ದೀನಿ ಅಂತ ಹೇಳಕ್ಕಾಗಲಿಲ್ಲವೇನೇ?"

"ಹೇಳ್ದೆ ಕಣಜ್ಜಿ. ನಾನಲ್ಲಿಗೆ ಬರೋದಿಲ್ಲ ಅಂತ ಹೇಳಿ ಹೋ:ದ."

ಅವರು ಮೌನವಾಗಿ ಏನನ್ನೋ ಆಲೋಚಿಸಿದ ಬಳಿಕ ಒಂದು ನಿಟ್ಟುಸಿರು ಬಿಡುತ್ತ ಹೇಳಿದರು.

"ಅವನು ಬರೋದಿಲ್ಲ. ಹ್ಯಾಗೆ ಬಂದಾನು?"

# 4

ಮಾರನೆಯ ದಿನ ತಿರುವಾದಿರ.* ಯೂಸೂಫನ ಅಂಗಡಿಯಲ್ಲಿ ಎಂದಿಗಿಂತ ಹೆಚ್ಚಾಗಿ ಗಲಾಟೆಯಿತ್ತು. ಐದು ತೊಲ ಮೆಣಸಿನ ಕಾಯಿ ಬೇಕಾಗಿತ್ತು. ಅದನ್ನು ಕೊಂಡುಕೊಳ್ಳ ಬೇಕೆಂದು ನಂಬೂದಿರಿಯ ಮನೆಗೆಲಸ ಕಳೆದು ಶಂಕರನ್ ನಾಯರ್ ರಸ್ತೆಗೆ ಬಂದದ್ದು.

ವಾಪ್ಪುವಿನ ಅಂಗಡಿಯಲ್ಲಿ ಸಾಮಾನು ಏನೂ ಪ್ರಯೋಜನವಿಲ್ಲ. ಅಲ್ಲಿ ಸಿಕ್ಕುವುದೆಲ್ಲ ಹಳೆಯ ಸಾಮಾನು. ಯೂಸೂಫನ ಅಂಗಡಿಯಿಂದಲೇ ಏನನ್ನಾದರೂ ಕೊಂಡುಕೊಳ್ಳು ವುದು. ಜಗಲಿಯ ಮೇಲೆ ಕೆಲಸವಿಲ್ಲದವರು, ಎಂದಿನಂತೆ ಅಲ್ಲಿಗೆ ಬರುತ್ತಿದ್ದವರು, ಮಾಮೂಲು ಜನರು—ಎಲ್ಲರೂ ಇದ್ದಾರೆ. ದರ್ಜಿಯವನ ಸುತ್ತ ಮೂರು ನಾಲ್ಕು ಹುಡುಗರಿದ್ದಾರೆ.

ಮೊಳೆಯಂಗಾವಿನ ಉತ್ಸವದ ವಿಷಯವಾಗಿ ಅವರು ಮಾತನಾಡುತ್ತಿದ್ದದ್ದು. ಕಳೆದ ವರ್ಷ ಮೊಳೆಯಂಗಾವಿಗೆ ಹೋಗಿ ಉತ್ಸವವನ್ನು ನೋಡಿ ಬಂದ ಒಬ್ಬ ಮನುಷ್ಯ ನಿದ್ದಾನೆ, ಆ ಗುಂಪಿನಲ್ಲಿ. ವೇಲಪ್ಪನ್, ಪಾಲತ್ತಿಂಗಲ್ ಕುಂಜುವೂ ಊಕ್ಕನ್ ಬಾಪೂ ಟ್ಟಿಯೂ ತಮ್ಮ ಎಲೆ ವ್ಯಾಪಾರದ ಲೆಕ್ಕ ಹಾಕುತ್ತಿದ್ದಾರೆ.

ಶಂಕರನ್ ನಾಯರ್ ಅಂಗಡಿಗೆ ಬಂದಾಗ ಮೊಳೆಯಂಗಾವಿನ ಉತ್ಸವದ ಮಾತುಕತೆ ನಿಂತಿತು.

ರಾವುಣ್ಣಿ ಕೇಳಿದ: "ತಿರುವಾದಿರ ಎಲ್ಲಿಗೆ ಬಂತು ಶಂಕರ ನಾಯರೇ?"

"ನಮಗೆಲ್ಲ ಎಂಥ ತಿರುವಾದಿರ" ಎಂದು ಹೇಳಿ ಆತ ಗುಂಪಿನಲ್ಲಿ ನುಗ್ಗಿ ಮುಂದೆ ಹೋದ.

ಐದು ತೊಲ ಮೆಣಸಿನ ಕಾಯಿ ಬೇಕು ಎಂದು ಹೇಳಿದ.

"ಯಾಕೆ ಶಂಕರ ನಾಯರೇ ಇಷ್ಟು ಕಡಿಮೆ?"

ಮುಂಸಲಿಯಾರ್ ಕೇಳಿದ.

"ಅಷ್ಟು ಸಾಕು."

ವೇಲಪ್ಪನೂ ರಾವುಣ್ಣಿಯೂ ಹಸನ್‌ಕುಟ್ಟಿಯೂ ಅದರ ಮಧ್ಯೆ ಕಣ್ಣುಗಳಲ್ಲೇ ಮಾತಾಡಿಕೊಂಡರು. ಹಸನ್‌ಕುಟ್ಟಿ ಬೀಡಿ ಹೊತ್ತಿಸಿ ಯೂಸೋಫನ ಮೇಜಿನ ಮೇಲಕ್ಕೆ ಹಿಂದಿರುಗಿಸುತ್ತ ಒಂದು ಸಲ ನಗುತ್ತ ಹೇಳಿದ.

"ಶಂಕರ ನಾಯರ್‌ಗೆ ಈಗ ಸ್ವಲ್ಪ ಖರ್ಚಿನ ಕಾಲ ಅಲ್ವಾ?"

---

* ಪತ್ನಿ ಪತಿಗೆ ಶ್ರೇಯಸ್ಸನ್ನು ಕೋರಲು ಆಚರಿಸುವ ಹಬ್ಬ.

"ಅದೇನೋ ಹಂಗಂತೀಯಾ?"

"ಅವರ ಹತ್ರ ಕೇಳಿ ನೋಡು."

"ನಂಗೆಲ್ಲೋ ಹುಚ್ಚು. ಅಂಥಾದ್ದೇನಾದರೂ ಇದ್ರೆ ನಾಯರು ನನ್ನ ಜೊತೇಲಿ ಹೇಳ್ತಾರೆ."

"ಪುತ್ರನ್ ತಿರುವಾದಿರಕ್ಕೆ ಹಿಂಗೆ ಖರ್ಚು ಮಾಡಿದರೆ ಸಾಲ್ದು ನಾಯರೇ?"

ಶಂಕರನ್ ನಾಯರಿಗೆ ಉಗುರಿನ ತುದಿಯಿಂದ ಸಿಟ್ಟು ಏರಿ ಬಂತು. ಏನನ್ನೂ ಮಾತಾಡಲಿಲ್ಲ.

ಮುಸಲಿಯಾರ್ ಇನ್ನೂ ಮೆಣಸಿನ ಕಾಯಿ ತೂಕ ಮಾಡಿರಲಿಲ್ಲ. ಎಲೆ ವ್ಯಾಪಾರದ ವಿಷಯ ಮಾತನಾಡುತ್ತಿದ್ದ ಊಕ್ಕನ್ ಬಾಪೂಟಿಯೂ ಆ ಮಾತು ಕಥೆಯಲ್ಲಿ ಬೆರೆತ.

"ಏನ್ ಈಸೂ ಕಾಕಾ ಶಂಕರ ನಾಯರಿಗೆ ಹೊಸ ಹಬ್ಬ ಏನಾದ್ರೂ ಉಂಟಾ?"

"ನಂಗೊತ್ತಿಲ್ಲ. ರಾವುಣ್ಣಿ ಹತ್ರ ಕೇಳು. ಅವನಿಗೆ ಗೊತ್ತಿರಬಹುದು."

"ಯಾಕೆ ನಾಯರೇ ನಮ್ಮ ಹತ್ರ ಏನೂ ಹೇಳೇ ಇಲ್ಲವಲ್ಲ ನೀವು?" ;

ಶಂಕರ ನಾಯರ ತಾಳ್ಮೆ ಮಿತಿ ಮೀರುತ್ತಿತ್ತು. ಮೆಲ್ಲಗೆ ಊಕ್ಕನ್ ಬಾಪೂಟ್ಟಿ ಹೇಳಿದ.

"ಅಂತು ಸಂಗ್ತಿ ಪರವಾಯಿಲ್ಲ ನಾಯರೇ ಅಮ್ಮುಕುಟ್ಟಿ ಈಗ್ಲೂ ಪರಮಾಶಿಯಾಗಿ ದ್ದಾರೆ."

ಕಂಬವನ್ನೂ ಒರಗಿಕೊಂಡು ಅರೆಗಣ್ಣು ಒಟ್ಟುಕೊಂಡು ಒದ್ದೆಯಾದ ಕೋಳಿಯಂತೆ ನಿಂತಿದ್ದ ಶಂಕರನ್ ನಾಯರ್ ತಿರುಗಿ ನೋಡಿದ. ಜಗಲಿಯ ಮೇಲೆ ತುಟಿ ಕೂಡಿಸಿ ಕೊಂಡು ಬೀಡಿ ಎಳೆಯುತ್ತ ಕಳ್ಳ ನಗು ನಗುತ್ತ ಕುಳಿತಿದ್ದ ಬಾಪ್ಪುಟ್ಟಿಯ ಕೆನ್ನೆಯ ಮೇಲೆ ತೆಗೆದು ಒಂದು ಬಿಗಿದ.

ಜನರ ಮಾತು, ನಗೆ, ಥಟ್ಟನೆ ನಿಂತುವು. ಅಷ್ಟು ಬೇಗ ಏಟು ಬಿದ್ದದ್ದು. ಸುತ್ತ ಮುತ್ತ ಒಂದು ನಿಮಿಷದ ವರೆಗೆ ನಿಶ್ಶಬ್ದವುಂಟಾಗಿತ್ತು. ಸಾಮಾನು ತೆಗೆದುಕೊಳ್ಳಲು ಬಂದವರು ಪಕ್ಕಕ್ಕೆ ಸರಿದು ನಿಂತರು.

ಜನರು ಬಾಪೂಟ್ಟಿಯ ಕಡೆಗೆ ವಿಷಾದದಿಂದ ನೋಡಿದರು. ಅವನ ಕಣ್ಣುಗಳು ಕೆಂಡದಂತಾಗಿದ್ದುವು. ಅವನು ಯಾವ ಕೆಲಸಕ್ಕೂ ಹೇಸದ ಮನುಷ್ಯ. ಮೂರು ಸಲ ಕ್ರಿಮಿನಲ್ ಕೇಸಿನಲ್ಲಿ ಸಿಕ್ಕಿದ್ದ ಅಪರಾಧಿ. ಜೈಲಿಗೆ ಒಂದು ಸಲ ಹೋಗಿಯೂ ಇದ್ದಾನೆ. ಕಣ್ಣಾನೂರು ಜೈಲಿರುವುದು ಗಂಡಸರಿಗೆ ಎಂದು ಅವನಿಗೆ ಗೊತ್ತಿದೆ.

ಅವನು ಮೈ ಕೊಡವಿಕೊಂಡು ಎದ್ದು ನಿಂತ. ನೋಡಿದರೆ ಸೊಂಟದ ಪಟ್ಟಿಯಲ್ಲಿ ಮಡಿಸಿಟ್ಟಿದ್ದ ಚಾಕು ಬಿಚ್ಚಿ ಕೈಯಲ್ಲಿ ಹಿಡಿದುಕೊಂಡಿದ್ದಾನೆ.

"ಬೇಡ ಕಣೋ ಬಾಪೂಟ್ಟೀ" ಯೂಸೂಫ್ ಎದೆಯ ಮೇಲೆ ಕೈಯಿಟ್ಟುಕೊಂಡ.

ಆದರೆ ಶಂಕರನ್ ನಾಯರ್ ಹೊಳೆಯುತ್ತಿದ್ದ ಚೂರಿಯನ್ನೂ ಆ ಕೈಯನ್ನೂ ನೋಡುತ್ತ ಅಲುಗಾಡದೆ ನಿಂತಿದ್ದ......

ಚಾಕು ಹಿಡಿದಿದ್ದ ಕೈಯನ್ನು ಮೇಲಕ್ಕೆತ್ತಿದ ತಕ್ಷಣ ಮೈತುಂಬ ರೋಮವಿದ್ದ ಗಟ್ಟಿಯಾದ ಒಂದು ಕೈ ತಡೆಯಿತು. ನೋಡಿದರೆ ಸೈದಾಲಿಕುಟ್ಟಿ.

"ಬಿಡಿ ಸೈದಾಲಿ ಕುಟ್ಟಿ ಕಾಕಾ"

"ಚೂರಿ ಮಡಿಸು ಬಾಪ್ಪೂಟ್ಟೀ"

"ಈ ನಾಯರ ಕರುಳು ಬಗೀದಿದ್ರೆ ನಮ್ಮಪ್ಪ ಊಕ್ಕನ್ ಅಂದ್ರೂಮಾನ್ ಅಲ್ಲ."

"ನಾ ಹೇಳ್ತಿರೋದು ಚೂರಿ ಮಡಿಸು ಅಂತ. ಮಿಸುಗಾಡಿದೆ, ನೋಡು ನನ್ನ ಕೈಯಿಂದಲೂ ತಿನ್ತೀಯೆ?"

ಬಾಪ್ಪುಟ್ಟಿ ಮನಸ್ಸಿಲ್ಲದ ಮನಸ್ಸಿನಿಂದ ಕೈ ಹಿಂದಕ್ಕೆ ತೆಗೆದುಕೊಂಡ. ಏದುಸಿರು ಬಿಡುತ್ತ ನಿಂತಿದ್ದ ಅವನ ಕೈಯಲ್ಲಿದ್ದ ಚೂರಿ ಕಿತ್ತುಕೊಂಡು ಮಡಿಸಿ ಸೊಂಟದ ಪಟ್ಟಿಯಲ್ಲಿ ಇಟ್ಟುಕೊಟ್ಟು ಸೈದಾಲಿ ಕುಟ್ಟಿ ಹೇಳಿದ.

"ಅಸಂಬದ್ಧ ತೋರಿಸ್ತೀ ಅಲ್ಲ್ವೇನೋ ಬಾಪ್ಪುಟ್ಟೀ"

ಅವನು ಮುಖ ಕೆಂಪಗೆ ಮಾಡಿಕೊಂಡು ತುಟಿ ಪಿಟಕ್ ಅನ್ನದೆ ನಿಂತಿದ್ದ.

"ಇನ್ನು ಹೋಗಿ ನಾಯರೇ......"

ಪ್ರಮಾದವೇನೂ ನಡೆದಿಲ್ಲದ ರೀತಿಯಲ್ಲಿ ಶಂಕರನ್ ನಾಯರ್ ಇಳಿದು ಹೋದ.

ರಸ್ತೆಯಲ್ಲಿ ನಡೆಯುತ್ತಿದ್ದಾಗ ಆತನ ಹೃದಯವನ್ನು ಜೇನು ಹುಳು ಕಚ್ಚಿದಂತಾಗುತ್ತಿತ್ತು.

"ನಾಯಿಗಳು......ಅವರ ಕೆಟ್ಟ ಸ್ವಭಾವಾನೇ ಹೇಳುತ್ತೆ."

ಅದನ್ನು ನೆನಸಿಕೊಂಡಾಗ ಆತನಿಗೆ ತಾನೇ ತಪ್ಪಿತಸ್ಥ ಎನ್ನಿಸಿತು. ಈಗ ಕೇಳಿದ ಸುದ್ದಿ ಒಂದು ಅಪವಾದ ನಿಜ. ಅದಕ್ಕೆ ಕಾರಣ ತಾನೇ ಅಲ್ಲವೇ. ಅಲ್ಲಿಗೆ ಹೋಗುವುದನ್ನೂ ಮಾತನಾಡುವುದನ್ನೂ ಜನರು ನೋಡುತ್ತಿದ್ದಾರೆ. ಇದಾವುದೂ ಬೇಡವಾಗಿತ್ತು.

ನಾನು ಯಾವ ತಪ್ಪನ್ನೂ ಮಾಡಿಲ್ಲ. ಯಾರೂ ಗತಿಯಿಲ್ಲದ ಒಂದು ಕುಟುಂಬಕ್ಕೆ ಒಂದೆರಡು ಸಣ್ಣ ಪುಟ್ಟ ಸಹಾಯ ಮಾಡಿದೆ ಅಷ್ಟೆ. ಅದಕ್ಕಾ ಅವರ ಮೇಲೆ......

ಶಂಕರನ್ ನಾಯರ ರಕ್ತ ತಿಳಿಯಾಯಿತು. ಆತ ವೇಗವಾಗಿ ಹೆಜ್ಜೆ ಹಾಕಿದ.

ಅಚ್ಚು ಮಾನನ ಅಂಗಡಿಯ ಹತ್ತಿರ ಬಂದಾಗ ಮೇಲಿನಿಂದ ಕರೆದ ಶಬ್ದ.

"ಶಂಕರಾ"

"ಹಾಳಾಯ್ತು." ಆತ ಗೊಣಗಿದ, ಇನ್ನು ಅಲ್ಲಿ ಹೋಗದಿದ್ದರೆ ಚೆನ್ನಾಗಿರುವುದಿಲ್ಲ.

"ಇಲ್ಲಿ ಸ್ವಲ್ಪ ಬಂದು ಹೋಗು."

ಅಚ್ಚುಮಾನ್ ಮತ್ತೂ ಕರೆಯುತ್ತಿದ್ದ.

ಶಂಕರನ್ ನಾಯರ್ ಅಲ್ಲಿಗೆ ಹೋದ.

"ಏನು ಯಜಮಾನ್ರೇ"

ಅದಕ್ಕೆ ಆತ ಏನನ್ನೂ ಮಾತನಾಡಲಿಲ್ಲ.

"ತಗೋ ಈ ಎಲೆ ಅಡಿಕೆ ಸ್ವಲ್ಪ ಜಜ್ಜಿ ಕೊಡು" ಎಂದು ಹೇಳಿ ಎಲೆ ಅಡಿಕೆ ಕುಟ್ಟುವ ಕಲ್ಲನ್ನು ಮುಂದಕ್ಕೆ ನೂಕಿದ.

ಶಂಕರನ್ ನಾಯರ್ ಪ್ರಪಂಚದ ಮೇಲೆ ತನಗಿರುವ ದ್ವೇಷವನ್ನೆಲ್ಲ ತೋರಿಸಿಕೊಂಡು ಎಲೆ ಅಡಿಕೆ ಕುಟ್ಟುತ್ತಿದ್ದ.

"ಕಲ್ಲು ಒಡೆದು ಹಾಕಬೇಡ ಕಣೋ"

ಶಂಕರನ್ ನಾಯರ್ ಅದನ್ನು ಕೇಳಿಸಿಕೊಳ್ಳಲಿಲ್ಲವೆಂಬಂತೆ ಕುಟ್ಟುತ್ತಿದ್ದ.

ಕುಟ್ಟಿದ ಎಲೆ ಅಡಕೆಯನ್ನು ತೆಗೆದು ಅಚ್ಯುಮಾನನ ಕೈಯಲ್ಲಿ ಕೊಟ್ಟ.

ಅಚ್ಯುಮಾನ್ ಅದನ್ನು ಬಾಯಿಗೆ ಹಾಕಿಕೊಂಡ. ಅಡಕೆ ಹಾಳೆಯಿಂದ ಗಾಳಿ ಬೀಸಿ ಕೊಂಡ. ಕುರ್ಚಿಯನ್ನು ಒರಗಿ ಕುಳಿತ.

"ಪುತ್ತನ್ ಜಮೀನಿನ ಕೆಲಸವೆಲ್ಲ ನೀನೇ ನೋಡಿಕೊಳ್ತಿದ್ದೀಯ ಅಂತ ಕೇಳಿದ್ನೆಲ್ಲ ಶಂಕರಾ ನಿಜವಾ?"

ಶಂಕರನ್ ನಾಯರ ನಾಲಿಗೆ ಕಟ್ಟಿದ ಹಾಗಾಯಿತು.

"ನಿಜವೇನೋ"

ಆತ ಒಂದು ಸಲ "ಹ್ಞೂಂ" ಎಂದ.

ಪರಿಹಾಸ್ಯದ ನಗುವಿನಿಂದ ಅಚ್ಯುಮಾನ್ ಮತ್ತೂ ಕೇಳಿದ.

"ಇದು ಯಾವಾಗ್ಲಿಂದ?"

ಒಳ್ಳೆ ಅಚ್ಯುಮಾನ್ ! ಶಂಕರನ್ ನಾಯರ್ ಸಿಟ್ಟನ್ನು ತಡೆದುಕೊಂಡು ಹೇಳಿದ.

"ಸ್ವಲ್ಪ ದಿನದಿಂದ."

"ತಪ್ಪಿಲ್ಲ. ಅದೆಲ್ಲ ಆಗಬೇಕಾದದ್ದೇ. ಆ ಹೆಣ್ಣಿಗೂ ಗಂಡ ಇಲ್ಲ; ಮತ್ತೊಬ್ಬರಿಲ್ಲ."

ಕಿಟಕಿಯ ಕಂಬಿಗಳ ಮಧ್ಯೆ ಎಲೆ ಅಡಿಕೆ ರಸವನ್ನು ಉಗಿದು ಅಚ್ಯುಮಾನ್ ಮತ್ತೂ ಹೇಳಿದ.

"ಆದ್ರೆ ಕೆಟ್ಟ ಮಾತು ಕೇಳಬಾರದು. ನಾಲ್ಕು ಜನ ಕರೆದು ಒಂದು ಮರ್ಯಾದಿಯಿಂದ ಮಾಡಿಕೋಬಾರದಾ?"

ಶಂಕರನ್ ನಾಯರ್‌ಗೆ ಇನ್ನು ಅಲ್ಲಿ ಕುಳಿತಿರುವುದು ಸಾಧ್ಯವಿಲ್ಲವೆನ್ನಿಸಿತು.

"ಸ್ವಲ್ಪ ತೋಟದ ಕೆಲಸವಿದೆ. ನಾಮತ್ತೆ ಕಾಣ್ತೇನೆ" ಎಂದು ಹೇಳಿ ಪ್ರತ್ಯುತ್ತರವನ್ನು ಕಾಯದೆ ಹೊರಟು ಹೋದ.

ಆ ರಾತ್ರಿ ಆತ ಮಲಗಲಿಲ್ಲ. ಒಂದು ತೀರ್ಮಾನಕ್ಕೆ ಬಂದ ಬಳಿಕ ಪುತ್ತನ್ ಜಮೀನಿನ

ಕಡೆ ಹೊರಟ. ಎಲ್ಲರಿಗೂ ಗೊತ್ತಾಗಲಿ ಎನ್ನುವ ದೃಢ ನಿರ್ಧಾರದಿಂದ ಆತ ಆ ಮನೆಯ ಮೆಟ್ಟಿಲು ಹತ್ತಿದ.

ಸೂರ್ಯಾಸ್ತವಾಗಿತ್ತಾದರೂ ಕತ್ತಲಾಗಿರಲಿಲ್ಲ. ಅಂಗಳದ ಹತ್ತಿರಕ್ಕೆ ಹೋದಾಗ ಬಾಗಿಲು ತೆರೆದು ಸಂಧ್ಯಾದೀಪವನ್ನು ಹಿಡಿದುಕೊಂಡು ಪಾರುಕುಟ್ಟಿ ಅಮ್ಮ ಅಂಗಳಕ್ಕೆ ಬರುತ್ತಿದ್ದಳು.

ದೀಪ !......ದೀಪ !......

ಆ ಸಣ್ಣ ದೀಪದ ಬೆಳಕು ಅವರ ಮುಖದ ಮೇಲೆ ಬೀಳುತ್ತಿತ್ತು. ನಂಬೂದಿರಿ ಮನೆಯ ಒರಳು ಕಲ್ಲಿನ ಹಜಾರದಲ್ಲೋ ಪರಿಸರಣದಲ್ಲಿ ಕಾಣುವ ಕೆಲಸದ ಹೆಣ್ಣೆಂದು ಹೇಳಲಾಗುವುದಿಲ್ಲ. ಸ್ನಾನ ಮಾಡಿದ್ದಾಳೆ. ತಲೆ ಮುಡಿ ಬೆನ್ನಿನ ಮೇಲೆ ಹರಡಿಕೊಂಡಿದೆ. ಹಣೆಯಲ್ಲಿ ಭಸ್ಮಧಾರಣೆ ಮಾಡಿಕೊಂಡಿರುವುದು ಎದ್ದು ಕಾಣಿಸುತ್ತಿದೆ. ದೀಪದ ಮಂದ ಪ್ರಕಾಶ ಬೀಳುವ ಆ ಮುಖದಲ್ಲಿ ವೇದನೆಯನ್ನುಂಟು ಮಾಡುವ ಮತ್ತಾವುದೋ ಒಂದು ಕಾಣಿಸುತ್ತಿದೆ.

ಅಂಗಳಕ್ಕೆ ಆತ ಬಂದಾಗ ಆತನನ್ನು ಒಂದು ತಪ್ಪು ಭಾವನೆ ಭಾಧಿಸಿತು. ಆದರೂ ಒಂದು ಸಲ ಕೇಳಿ ಬಿಡಬೇಕು ಎಂದು ಕೇಳಿದ.

"ದೀಪ ಹಚ್ಚೋ ಹೊತ್ತಾಯ್ತಾ?"

ಪಾರುಕುಟ್ಟಿ ಎಡಗೈಯಲ್ಲಿ ದೀಪವನ್ನು ಹಿಡಿದುಕೊಂಡು ಬಲದ ಕೈ ತೋರು ಬೆರಳಿನಿಂದ ಬತ್ತಿಯನ್ನು ನೂಕುತ್ತ ಹೇಳಿದಳು.

"ಆಗಿದೆ ಅಂದುಕೊಂಡೆ. ಶಂಕರ ನಾಯರ್ ಈಗ ಬಂದದ್ದಾ?"

"ನಂಬೂದಿರಿ ಮನೆಯಿಂದ ಮಧ್ಯಾಹ್ನಕ್ಕೇ ಬಂದೆ. ಎರಡು ಕೊಟ್ಟು ನೀರೆತ್ತ ಬೇಕಾಗಿತ್ತು. ಕೊಟ್ಟು ಮತ್ತೆ ಸಿಕ್ಕಬೇಕಲ್ಲ?" ಆತ ಜಗಲಿಯ ಮೇಲೆ ಕುಳಿತುಕೊಂಡು ಕೇಳಿದ:

"ಅಪ್ಪುಣ್ಣಿ ಎಲ್ಲಿ?"

"ಮೀಯೋದಕ್ಕೆ ಹೋಗಿದ್ದಾನೆ"

ಅಲ್ಲಿಗೆ ಸಂಭಾಷಣೆ ನಿಂತಿತು.

ದೀಪವನ್ನು ಕೆಳಗಿಟ್ಟು ಬಾಗಿಲಿನ ಹತ್ತಿರಕ್ಕೆ ಹೋಗಿ ಗೋಡೆಯನ್ನು ಒರಗಿಕೊಂಡು ನಿಂತಳು.

ಅವನ ಮನಸ್ಸಿನಲ್ಲಿ ಸುಳಿಗಾಳಿಯಂತೆ ಮಾತುಗಳು ಸುತ್ತಾಡುತ್ತಿದ್ದುವು.

ಹೇಳಬೇಕು......ಹೇಳಬೇಕು......

ಮೆಟ್ಟಿಲಿನ ಹತ್ತಿರ ಬರುವ ವರೆಗೂ ಮಾತುಗಳು ಗಂಟಲಿನ ತುಂಬ ಇದ್ದುವು. ಈಗ ಎಲ್ಲವೂ ಹಾಗೆ ತಡೆದು ನಿಂತವು. ತುಂಬ ಕಷ್ಟಪಟ್ಟು ಮುಖವೆತ್ತದೆ ಕರೆದ.

"ಪಾರುಕುಟ್ಟಿ ಅಮ್ಮ"

ಅವಳು ತಲೆ ಎತ್ತಿದಳು.

"ನಾನಿಲ್ಲಿಗೆ ಬರ್‍ತ್ತಿರೋದು ಕಂಡು ಜನರು ಅದು ಇದು ಮಾತಾಡ್ತಾರೆ"

ತುಂಬ ಶಾಂತಳಾಗಿ ಪಾರುಕುಟ್ಟಿ ಅಮ್ಮ ಹೇಳಿದಳು:

"ಜನರು ಹೇಳೋದೇನು?"

ಆತನಿಗೆ ಸ್ವಲ್ಪ ಧೈರ್ಯ ಬಂದ ಹಾಗಾಯಿತು.

"ನನ್ನಿಂದಾಗಿ ನಿಮಗೊಂದು ಕೆಟ್ಟ ಹೆಸರು ಬರೋದು ನಂಗಿಷ್ಟವಿಲ್ಲ."

ಪಾರುಕುಟ್ಟಿ ಅಮ್ಮ ಗಾಬರಿಯಾಗಿ ಆತನನ್ನು ನೋಡಿದಳು. ಆಮೇಲೆ ಹೇಳಿದಳು:

"ನನಗೊಬ್ಬರು ಸಹಾಯಕರು ಅಂತ ಇರೋರು ನೀವೊಬ್ಬರು."

ಶಂಕರನ್ ನಾಯರ್‌ಗೆ ಮತ್ತೂ ಸ್ವಲ್ಪ ಆತ್ಮ ವಿಶ್ವಾಸವುಂಟಾಯಿತು.

"ಪಾರುಕುಟ್ಟಿ ಅಮ್ಮ ಏನೂ ತಿಳಕೊಳ್ಳಬೇಡಿ. ಒಂದು ವಿಷಯ ಕೇಳೋವಕ್ಕೆ ಬಂದೆ.

"ಏನು ಹೇಳಿ ಶಂಕರನ್ ನಾಯರೇ"

"ನಿಮಗೆ...ನಿಮಗೆ......ಸಹಾಯಕ್ಕೆ ಯಾರೂ ಇಲ್ಲ. ನಾನು......ನಾನೂ ಒಂಟಿಯಾಗಿ ಎಷ್ಟೋ ದಿನದಿಂದ ಕಾಲ ಕಳೀತಿದ್ದೀನಿ. ಪಾರುಕುಟ್ಟಿ ಅಮ್ಮನಿಗೆ ಅಸಮಾಧಾನವಿಲ್ಲದಿದ್ದರೆ ಹೀಗೊಂದು ಸಂಬಂಧ......"

"ಇಲ್ಲ ಶಂಕರನಾಯರೇ"

ಸ್ಪಷ್ಟವಾದ ಮಾತಿನಲ್ಲಿ ಪಾರುಕುಟ್ಟಿ ಅಮ್ಮ ಹೇಳಿದಳು.

ಶಂಕರ ನಾಯರಿಗೆ ತಲೆ ಎತ್ತಲಾಗಲಿಲ್ಲ.

"ನಾನು ಆ ಭಾಗ್ಯ ಕಳಕೊಂಡೆ. ಇನ್ನು ನಾನು ಅದ್ಯಾವುದನ್ನೂ ಯೋಚ್ನೆ ಮಾಡೋದಿಲ್ಲ. ನೀವೂ ಆಲೋಚನೆ ಮಾಡಬೇಡಿ."

ಆತ ನಿಶ್ಶಬ್ದವಾಗಿದ್ದ. ಆತನ ಮನಸ್ಸು ಆಂಧೋಲನಕ್ಕೊಳಗಾಗಿತ್ತು. ಆಗ ಅಂಗಳದಲ್ಲಿ ಹೆಜ್ಜೆಯ ಶಬ್ದ ಕೇಳಿಸಿತು. ಅಂಗಳದ ಕಡೆಗೆ ನೋಡಿದ. ಅಪ್ಪುಣ್ಣಿ. ಅವನು ಎರಡು ಕಡೆಗೂ ನೋಡದೆ ನೀದ ಒಳಕ್ಕೆ ಹೋದ.

ಆತ ಎದ್ದು ನಿಂತ.

"ಪಾರುಕುಟ್ಟಿ ಅಮ್ಮ, ನಾನು ಹೇಳಿದ್ದು ಮರೆತು ಬಿಡಿ. ತಪ್ಪು ನನ್ನದು."

ಪಾರುಕುಟ್ಟಿ ಅಮ್ಮ ತಲೆಬಾಗಿ ನಿಂತುಕೊಂಡಿದ್ದಳು.

"ಪಾರುಕುಟ್ಟಿ ಅಮ್ಮ ಏನೂ ತಿಳಕೊಳ್ಳಬೇಡಿ. ನನ್ನ ಕೈಲಾಗೋ ಸಹಾಯ ಮಾಡೋದಕ್ಕೆ ಮುಂದೂ ನಾನು ಸಿದ್ಧವಾಗಿದ್ದೀನಿ. ಮೊದಲು ನಾನು ಹೇಳಿದ ವಿಷಯ ಮರೆತು ಬಿಡಿ." ಪಾರುಕುಟ್ಟಿ ಅಮ್ಮನ ಕಣ್ಣುಗಳು ತೇವಗೊಂಡಿದ್ದುವು. ಆತ ಮೆಲ್ಲನೆ ಎದ್ದು ನಡೆದು ಹೋದ.

ಅಪ್ಪುಣ್ಣಿ ಒಳಗೆ ಚಿಮ್ಮಣಿ ಬೆಳಕಿನ ಮುಂದೆ ಪಾಠ ಓದಿಕೊಳ್ಳುತ್ತಿದ್ದ. ಪುಸ್ತಕದಲ್ಲಿ ಕಣ್ಣು ನಟ್ಟು ನೆಲದಲ್ಲಿ ಕಮುಚಿಕೊಂಡು ಕುಳಿತ ಅಪ್ಪುಣ್ಣಿಯನ್ನು ಎವೆಯಿಕ್ಕದೆ ನೋಡುತ್ತ ಪಾರುಕುಟ್ಟಿ ಬಾಗಿಲನ್ನು ಹಿಡಿದುಕೊಂಡು ನಿಂತಿದ್ದಳು.

ಅವನು ಬೆಳೆಯುತ್ತಿದ್ದಾನೆ. ಹದಿನೈದು ವರ್ಷದ ಹುಡುಗನ ಬೆಳವಣಿಗೆಗಿಂತಲೂ ಹೆಚ್ಚು ಬೆಳೆದಿದೆ ಅವನ ಶರೀರ. ಆದರೆ ಅವನು ಬೆಳೆಯುವುದರ ಜೊತೆಗೇ ನನ್ನಿಂದ ದೂರವಾಗಿ ಬಿಡುತ್ತಾನೋ!

ಹಿಂದಿನ ಹಾಗೆ ಹೆಚ್ಚಿಗೆ ಮಾತನಾಡುವುದಿಲ್ಲ. ಕೇಳಿದ್ದಕ್ಕೆ ಮಾತ್ರ ಉತ್ತರ ಕೊಡುತ್ತಾನೆ. ಸ್ಕೂಲು ಬಿಟ್ಟು ಬಂದರೆ ಹೆಚ್ಚು ಸಮಯ ಮನೆಯಲ್ಲಿರುವುದಿಲ್ಲ. ಜಮೀನಿನಲ್ಲಿ ಅಲ್ಲಿ ಇಲ್ಲಿ ತಿರುಗಾಡುತ್ತಾನೆ. ಮುತ್ತಜ್ಜಿಯ ಕೊಟ್ಟಿಗೆಯಲ್ಲಿ ಹೋಗಿ ಕುಳಿತುಕೊಳ್ಳುತ್ತಾನೆ. ಅವನು ನಡೆಯುವುದನ್ನು ನೋಡಿದಾಗ ಅವನ ಮನಸ್ಸು ಈ ಲೋಕದಲ್ಲಿ ಸಂಚರಿಸುತ್ತಿಲ್ಲ ಎನ್ನಿಸುತ್ತದೆ. ಬೇಗ ಸಿಟ್ಟು ಮಾಡಿಕೊಳ್ಳುತ್ತಾನೆ. ಅವನು ಬದಲಾಯಿಸುತ್ತಿದ್ದಾನೇನೋ!

ಊಟಕ್ಕೆ ಕರೆಯುವ ಹೊತ್ತಿನ ವರೆಗೂ ಓದುತ್ತಾ ಕುಳಿತಿರುತ್ತಾನೆ. ಊಟ ಮಾಡಿದ ಮೇಲೆ ಮತ್ತೆ ಓದುತ್ತಾ ಕುಳಿತುಕೊಳ್ಳುತ್ತಾನೆ. ನಿದ್ದೆ ಬಂದಾಗ ದೀಪ ಆರಿಸಿ ಮಲಗುತ್ತಾನೆ. ಅವನಿಗೆ ತಾಯಿಯ ಹತ್ತಿರ ಹೇಳಬೇಕಾದದ್ದು ಏನೂ ಇರುವುದಿಲ್ಲವೆ?

"ಏನು ಅಪ್ಪುಣ್ಣೀ ಯೋಚನೆ ಮಾಡ್ತಿದ್ದೀ"

"ಏನೂ ಇಲ್ಲ."

"ಏನು ಬೇಜಾರು ಮಾಡಿಕೊಂಡಿದ್ದೀಯಲ್ಲ?"

"ಏನೂ ಇಲ್ಲ."

"ಏನೂ ಇಲ್ಲ" ಎನ್ನುವ ಉತ್ತರವೇ ಅವನಿಂದ ಬರುವುದು. ಅದನ್ನು ಮತ್ತೆ ಮತ್ತೆ ಕೇಳಿದಾಗ ಅವಳ ಅಸಮಾಧಾನ ಹೆಚ್ಚುತ್ತದೆ. "ಭಗವತೀ ಅವನಿಗೆ ಒಳ್ಳೆಯದಾಗಲಿ."

* * * * *

ಅಲ್ಲಿ ಹೊಳೆ ಬಳಸಿ ಹರಿಯುತ್ತದೆ. ಆ ತಿರುವಿನಲ್ಲಿ ಬೇಸಗೆಯ ಕಾಲದಲ್ಲಿಯೂ ತುಂಬ ಆಳವಿರುತ್ತದೆ. ಹೊಳೆ ಈಗ ಬತ್ತಿಹೋಗಿ ಒಂದು ಹಳ್ಳದ ಹಾಗೆ ಹರಿಯುತ್ತದೆ. ಆ ತಿರುವಿನಲ್ಲಿ ಅಯ್ಯಪ್ಪನ್ ಮಡುವಿನ ಸುತ್ತಮಾತ್ರ ನೀರು ಅಲೆಗಳಿಂದ ವಿಶಾಲವೂ ಗಂಭೀರವೂ ಆಗಿ ಕಾಣಿಸಿಕೊಳ್ಳುತ್ತದೆ.

ಅಪ್ಪುಣ್ಣಿ ಒಂದು ಎತ್ತರವಾದ ದಿಣ್ಣೆಯ ಮೇಲೆ ಹತ್ತಿ ಕುಳಿತ.

ಮಡುವಿನ ಗಾಂಭೀರ್ಯ ಭಯ ಪಡಿಸುವಂತಿತ್ತು. ಅಲೆಗಳು ದಡಕ್ಕೆ ಬಂದು ತಗುಲಿ ಮಾಯವಾಗುತ್ತಿದ್ದುವು.

ಅಂದು ರಜಾದಿನ. ಆದರೆ ಮನೆಯಲ್ಲಿ ಕಾಲ ಕಳೆಯಲು ಬೇಸರ. ಆಡುವುದಕ್ಕೆ ಜೊತೆಗಾರರಿಲ್ಲ. ಆಗ ಮನೆಯಿಂದ ಹೊರಟ. ಬಂದದ್ದು ಅಲ್ಲಿಗೆ.

ಅಯ್ಯಪ್ಪನ್ ಮಡುವಿನಲ್ಲಿ ನೀರಿನ ಅಲೆಗಳನ್ನು ನೋಡುತ್ತಾ ಕುಳಿತಿದ್ದ. ಆ ಮಡುವಿನಲ್ಲಿ ಇಳಿದವರು ಮತ್ತೆ ಮೇಲಕ್ಕೆ ಬಂದದ್ದಿಲ್ಲ. ಹುಡುಗನಾಗಿದ್ದಾಗ ಆ ಮಡುವಿನ ಕೆಳಗೆ ಅಯ್ಯಪ್ಪನ ಮಾಳಿಗೆಯಿದೆ ಎಂದು ಹೇಳುವುದನ್ನು ಕೇಳಿದ್ದ. ಮಳೆಗಾಲದಲ್ಲಿ ದೋಣಿಯಲ್ಲಿ ಕುಳಿತು ಹೊಳೆ ದಾಟುವವರು ಆ ಮಡುವಿನಲ್ಲಿ ಕಾಸು ಹಾಕುವುದುಂಟು, ಕೇಡು ಸಂಭವಿಸದಿರಲಿ ಎಂದು. ಮಡುವಿನ ತಳದಲ್ಲಿ ಮಾಳಿಗೆಯೂ ದೈವವೂ ಇರುವುದು ಸಾಧ್ಯವಿಲ್ಲ. ಅವೆಲ್ಲ ಕೇವಲ ಕಥೆಗಳು ಅಷ್ಟೆ!

ಹಿಂದಿನ ದಿನ ರಾಮಕೃಷ್ಣನ್ ಮಾಸ್ಟರ್ ಕ್ಲಾಸಿನಲ್ಲಿ ಹೇಳಿದ್ದು ನೆನಪಾಯಿತು.

"ಕಲ್ಲಿನಲ್ಲಿ ಕೆತ್ತಿ ಮಾಡಿದ ದೇವತೆಗಳು. ಅವುಗಳಲ್ಲಿ ಕೆಲವು ವರ್ಗಗಳಿವೆ. ಕೆಲವು ದೈವಗಳಿಗೆ ಮಧ್ಯ ಮಾಂಸಗಳು ಸಾಕು. ಕೆಲವಕ್ಕೆ ಹಾಲು ಹಣ್ಣು ಬೇಕು. ನಮ್ಮ ದೇಶದ ಸ್ಥಿತಿ ಇದೇ ಅಲ್ಲವೆ?"

ರಾಮಕೃಷ್ಣನ್ ಮಾಸ್ಟರ್ ಹೊಸದಾಗಿ ವರ್ಗವಾಗಿ ಬಂದಿರುವವರು. ಚೆನ್ನಾಗಿ ಮಾತನಾಡುತ್ತಾರೆ. ಕ್ಲಾಸು ಒಂದು ರೀತಿಯ ಭಾಷಣದಲ್ಲಿ ಕಳೆಯುತ್ತದೆ. ಕೆಲವು ಸಲ ಅವರು ಹೇಳುವುದು ಪಾಠಕ್ಕೆ ಸಂಬಂಧಿಸಿರುವುದೇ ಇಲ್ಲ. ಆದರೂ ಕೇಳುವುದಕ್ಕೆ ಸಂತೋಷವಾಗುತ್ತದೆ.

ರಜದ ದಿನ ಬರುವುದೆಂದರೆ ಅಪ್ಪುಣ್ಣಿಗೆ ಒಂದು ಶಾಪವೆನ್ನಿಸುತ್ತಿತ್ತು. ಸ್ಕೂಲಿಗೆ ಹೋಗುವ ದಿನಗಳಲ್ಲಿ ಬೆಳಗ್ಗೆ ಹೋದರೆ ಸಾಯಂಕಾಲ ಬರಬಹುದಾಗಿತ್ತು.

ಮನೆಯಲ್ಲಿ ಕಾಲ ಕಳೆಯುವುದು ತುಂಬ ಕಷ್ಟ.

ತಾಯಿಯನ್ನು ಕಾಣುವಾಗ ಮುತ್ತಜ್ಜಿ ಹೇಳಿದ ಮಾತುಗಳು ನೆನಪಾಗುತ್ತವೆ. ಆಗ ಅವನಿಗೆ ಸಿಟ್ಟು ಬರುತ್ತದೆ.

ಮುತ್ತಜ್ಜಿ ಹೇಳುವುದು ಸರಿಯೆಂದು ಅವನಿಗೆ ಮತ್ತೆ ಮತ್ತೆ ಅನ್ನಿಸಿದೆ.

ಕೊಳದ ಹತ್ತಿರ ಜನರು ಅವನನ್ನು ಕಾಣುವಾಗ ಗುಸುಗುಸು ಮಾತನಾಡುತ್ತಿಲ್ಲವೆ? ಕಂಡ ಕಂಡವರು ಪರಿಹಾಸ್ಯದಿಂದಲ್ಲವೆ ತನ್ನನ್ನು ನೋಡುತ್ತಿರುವುದು? ಅವನಿಗೆ ಅರ್ಥವಾಗುತ್ತಿದೆ......

ಅವನು ಏತಕ್ಕೆ ಅಲ್ಲಿಗೆ ಬರುವುದು? ಮಾತನಾಡುತ್ತಾ ಕುಳಿತುಕೊಳ್ಳುವುದೇತಕ್ಕೆ?..

ಜನರು ಹೇಳುವುದನ್ನು ಕೇಳಿದಾಗ ಮೈ ಉರಿದು ಹೋಗುತ್ತಿತ್ತು.

ಅವನು — ಅವನು, ತಾಯಿಯನ್ನು ಮದುವೆ ಮಾಡಿಕೊಳ್ಳುತ್ತಾನೋ ಎಂದು!

ನಿನ್ನೆ ಸಂಜೆ ಸ್ನಾನ ಮಾಡಲು ನಂಬೂದಿರಿ ಮನೆಯ ಮೇಲ್ಭಾಗದಲ್ಲಿರುವ ದೇವಸ್ಥಾನದ ಕೊಳಕ್ಕೆ ಹೋದಾಗ ಗಂಡಸರು ಸ್ನಾನ ಮಾಡುವ ಕಡವಿನಲ್ಲಿ ತುಂಬ

ಗಲಾಟೆಯಿತ್ತು. ಸ್ವಲ್ಪ ಹತ್ತಿರದಲ್ಲೇ ಆನೆ ಕಡವು. ಅದರಲ್ಲಿ ಮೆಟ್ಟಿಲುಗಳಿರಲಿಲ್ಲವಾದ್ದರಿಂದ ಯಾರೂ ಅಲ್ಲಿ ಸ್ನಾನ ಮಾಡುತ್ತಿರಲಿಲ್ಲ. ಅಲ್ಲಿ ಇಳಿದು ಸ್ನಾನ ಮಾಡತೊಡಗಿದ.

ಅದಕ್ಕೆ ತೀರ ಹತ್ತಿರದಲ್ಲಿ ಸ್ತ್ರೀಯರು ಸ್ನಾನ ಮಾಡುವ ಸ್ಥಳ. ಸ್ನಾನ ಮಾಡುತ್ತಿದ್ದ ಒಬ್ಬಳು ಮತ್ತೊಬ್ಬಳನ್ನು ಪ್ರಶ್ನಿಸಿದ್ದು ಕೇಳಿಸಿತು.

"ಆ ಹುಡುಗ ಯಾರು?"

"ಅದೇ ಆ ಪಾರುಕುಟ್ಟಿ ಹುಡುಗ"

ಮತ್ತೆ ಅವರು ಆ ಮಾತನ್ನು ಮುಂದುವರಿಸಿದ್ದಾಗ ದುಃಖ ಒತ್ತರಿಸಿ ಬರುತ್ತಿತ್ತು.

ಕೇಳಿಸಿಕೊಳ್ಳಬಾರದು ಎನ್ನಿಸಿತು. ಆದರೆ ಕೇಳಿಸಿಕೊಳ್ಳಲೇಬೇಕಾಯಿತು. "ತೆಂಗು ಪೊಟ್ಟಯಿಲ್ ಶಂಕರ ನಾಯರು ಅಲ್ಲಿಗೆ ಹೋಗದೆ ಇರೋ ದಿನವೇ ಇಲ್ಲ."

ಸ್ನಾನ ಮಾಡಿದ್ದು ಬಟ್ಟೆ ಉಟ್ಟುಕೊಂಡದ್ದು ಎಲ್ಲವೂ ಯಾಂತ್ರಿಕವಾಗಿಯೇ ನಡೆಯಿತು. ಮನೆಯ ಕಡೆಗೆ ನಡೆದದ್ದೂ ಯಾಂತ್ರಿಕವಾಗಿ.

ಮನೆ ತಲಪಿದಾಗ ಕಂಡದ್ದೇನನ್ನು?

ಜಗಲಿಯ ಮೇಲೆ ಆತ ಕುಳಿತಿದ್ದಾನೆ. ಅದೇ ಶಂಕರನ್ ನಾಯರ್! ತಾಯಿಯ ಹತ್ತಿರ ಮಾತನಾಡುತ್ತ ಕುಳಿತಿದ್ದಾನೆ......

ಅಲ್ಲಿಂದ ಅವನನ್ನು ಬಡಿದಟ್ಟಬೇಕು ಎನ್ನಿಸಿತು. ಅದು ಅವನ ತಂದೆಯ ಮನೆ. ತಾಳತ್ತಿಲ್ ಕೋಂದುಣ್ಣಿ ನಾಯರ ಮನೆ. ಅಲ್ಲಿಗೆ ಬಂದು ಏನೋ ರಹಸ್ಯ ಮಾತನಾಡುತ್ತಾ ಕುಳಿತಿದ್ದಾನೆ.

ಜನರು ಹೇಳುವುದು ನಿಜ. ಅವನು ಮತ್ತೂ ಅಲ್ಲಿಗೆ ಬರುತ್ತಾನೆ. ಅಮ್ಮನ ಯಜಮಾನನಾಗುತ್ತಾನೆ. ನೆರೆ ಬಂದು ಎದೆಯ ವರೆಗೆ ನೀರು ತುಂಬಿದ್ದ ಗದ್ದೆಯಿಂದ ಹೆಗಲ ಮೇಲೆ ಹೊತ್ತುಕೊಂಡು ಬಂದದ್ದು ತಂದೆ. ಆದರೆ ಅವರು ತೀರಿಕೊಂಡರು ಎಂದು ಈಗ ಶಂಕರನಾಯರನ್ನು......

ದಡದಲ್ಲಿ ಬಂದು ಬಡಿಯುವ ಸಣ್ಣ ಸಣ್ಣ ಅಲೆಗಳನ್ನು ನೋಡುತ್ತಾ ನೋಡುತ್ತಾ ಆಯಾಸಗೊಂಡಿದ್ದ. ಆಳವಾದ ನೀರಿನ ಮಧ್ಯಕ್ಕೆ ಹೋಗಿ ಬೀಳುವಂತೆ ಒಂದು ಕಲ್ಲನ್ನು ಎತ್ತಿ ಎಸೆದ.

ಆತ ಅಮ್ಮನನ್ನು ಕೈಹಿಡಿಯುತ್ತಾನೆ. ಆ ಮನೆಯಲ್ಲಿ ತಾನು ಯಾರೂ ಅಲ್ಲದವನಾಗಿ ಬಿಡುತ್ತೇನೆ......

ಅವನಿಗೆ ಸ್ವಂತವಾದ ಯಾವ ಅವಕಾಶವೂ ಇರುವುದಿಲ್ಲ. ಎಲ್ಲರೂ ಶತ್ರುಗಳು. ಶಂಕರನ್ ನಾಯರು, ಭಾಸ್ಕರ, ದೊಡ್ಡ ಮಾವ—ಎಲ್ಲರೂ. ಈಗ ತಾಯಿಯೂ ಅವರ ಜೊತೆ ಸೇರಿಕೊಂಡು ನಿಂತಿದ್ದಾಳೆ.

ಸ್ನೇಹಿತರ ಮುಂದೆ ತಲೆಯೆತ್ತಿ ನಿಲ್ಲುವಂತಿಲ್ಲ. ನಂಬೂದಿರಿಗಳ ಮನೆಯಲ್ಲಿ ಭತ್ತ ಕುಟ್ಟುವವಳ ಮಗ. ತೆಂಗು ಪೊಟ್ಟಯಿಲ್ ಶಂಕರನ್ ನಾಯರ ಹೆಂಡತಿ—ಅಮ್ಮ.

ಅವನು ಮತ್ತೊಂದು ಒಂದು ಕಲ್ಲನ್ನೆತ್ತಿ ಮಡುವಿನಲ್ಲಿ ಹಾಕಿ ತಕ್ಷಣ ಎದ್ದು ನಿಂತ. ಹೊಳೆಯ ಪಕ್ಕದಲ್ಲಿ ಅದನ್ನೇ ನೆನಸಿಕೊಳ್ಳುತ್ತಾ ನಡೆಯುತ್ತಿದ್ದಾಗ ಹಿಂದಿನಿಂದ ಯಾರೋ ಕರೆದದ್ದು ಕೇಳಿಸಿತು.

"ಯಾರು ಅಪ್ಪುಣ್ಣೀನಾ?"

ಧ್ವನಿಯನ್ನು ಅವನು ಗುರುತಿಸಿದ. ಆತ ಇನ್ನೂ ಹತ್ತಿರಕ್ಕೆ ಬಂದಿದ್ದ. ಹಗೆಯಂತೆ ಅವನು ಶಂಕರ ನಾಯರನ್ನು ನೋಡಿದ್ದು.

"ಇದೇನಿಲ್ಲಿ ಹೊಳೆ ಹತ್ರ?"

"ಏನೂ ಇಲ್ಲ."

"ಸುಮ್ನೆ ತಿರುಗಾಡೋದಕ್ಕೆ ಬಂದೆಯಾ?"

"ಹ್ಞುಂ."

ಅವನು ಮುಂದೆ ನಡೆಯುತ್ತಿದ್ದ. ಭುಜದ ಮೇಲೆ ನೀರೆತ್ತುವ ಕೊಟ್ಟನ್ನು ಇಟ್ಟು ಕೊಂಡು ಆತ ಹಿಂದೆ ಬರುತ್ತಿದ್ದ. ದಾರಿ ಅಗಲವಾಗಿದ್ದ ಸ್ಥಳಕ್ಕೆ ಬಂದ ಮೇಲೆ ಆತ ಭುಜ ತಾಗುವಷ್ಟು ಹತ್ತಿರಕ್ಕೆ ಬಂದ.

ಮನಸ್ಸು ಕ್ರೋಧದಿಂದ ಹೊಗೆಯಾಡುತ್ತಿತ್ತು.

—ನೀವು ನನಗೆ ಯಾರೂ ಅಲ್ಲ.

ನಾನು ಕೆಳಮನೆ ಕೋಂದುಣ್ಣಿ ನಾಯರ ಮಗ.

ನಾನು ನಿಮ್ಮನ್ನು ದ್ವೇಷಿಸುತ್ತೇನೆ.

ಅಪ್ಪುಣ್ಣಿಯು ಹಣೆಬೆವತಿತ್ತು. ಬೇಗ ಬೇಗ ಹೆಜ್ಜೆ ಹಾಕಿದ. ಅವನೂ ಹತ್ತಿರದಲ್ಲೇ ಬರುತ್ತಿದ್ದಾನೆ, ಏನನ್ನೂ ಮಾತನಾಡದೆ.

ಆಗಲೇ ಎದುರಿನಲ್ಲಿ ಹೊಸ ಪಂಚೆ ಉಟ್ಟು ದುಂಡು ಕತ್ತಿನ ಬನಿಯನ್ ಧರಿಸಿ ತಲೆಯ ಮೇಲೆ ಗಂಟು ಹೊತ್ತಿದ್ದ ಊಕ್ಕನ್ ಬಾಪೂಟ್ಟಿ ಬಂದದ್ದು. ಹತ್ತಿರಕ್ಕೆ ಬಂದಾಗ ಆತ ನಿಂತು ಕೊಂಡ. ಶಂಕರನ್ ನಾಯರೂ ಅಪ್ಪುಣ್ಣಿಯೂ ನಿಂತುಕೊಂಡರು. ಊಕ್ಕನ್ ಬಾಪ್ಪೂಟ್ಟಿಯ ಕಣ್ಣುಗಳು ಶಂಕರ ನಾಯರನ್ನು "ಗೊತ್ತುಂಟು" ಎನ್ನುವ ರೀತಿಯಲ್ಲಿ ನೋಡಿದುವು.

"ಅಪ್ಪನೂ ಮಗನೂ ಯಾವ ಕಡೆ ಹೊರಟಿರಿ?"

ಎಂದು ಅವನು ಪ್ರಶ್ನೆಯನ್ನು ಹಾಕಿ ಹೊರಟು ಹೋದ. ಅಪ್ಪುಣ್ಣಿ ಸ್ತಬ್ಧನಾಗಿ ನಿಂತುಕೊಂಡ. ಮನಸ್ಸು ಸಮಾಧಾನಗೊಂಡ ಬಳಿಕ ಕೊಲ್ಲಬೇಕಾದ ಶತ್ರುವನ್ನು ನೋಡು ವಂತೆ ಶಂಕರ ನಾಯರನ್ನು ಒಂದು ಸಲ ನೋಡಿದ. ಆತ ನೆಲದ ಬಿರುಕುಗಳಲ್ಲಿ ದೃಷ್ಟಿ ಯನ್ನು ನಟ್ಟು ನಿಂತಿದ್ದ, ಅಲುಗಾಡದೆ.

ಒಂದು ಆಪತ್ತಿನಿಂದ ತತ್ಕಾಲಕ್ಕೆ ಪಾರಾದಂತೆ ಅವನು ಮುಂದೆ ಹೆಜ್ಜೆ ಹಾಕಿದ.

ಮನೆಗೆ ಬಂದಾಗ ಯಾರಿಗೂ ತಿಳಿಯದಂತೆ ಒಂದು ಸಲ ಅತ್ತು ಬಿಡಬೇಕು ಎನ್ನಿಸಿತು. ಮಲಗುವ ಕೋಣೆಯಲ್ಲಿ ಸುತ್ತಿಟ್ಟಿದ್ದ ಹಾಸಿಗೆಯಲ್ಲಿ ಮುಖ ಅಡಿಮಾಡಿಕೊಂಡು ಬಿದ್ದುಕೊಂಡ.

ಸಾಯಂಕಾಲ ಅಮ್ಮ ಬಂದು ಕರೆದಾಗ ಅಪ್ಪುಣ್ಣಿ ಏಳಲಿಲ್ಲ.

ಊಟಕ್ಕೆ ಬಡಿಸಿ ಪಾರುಕುಟ್ಟಿ ಹತ್ತಿರಕ್ಕೆ ಬಂದು ಮತ್ತೂ ಕರೆದಳು. "ಅಪ್ಪುಣ್ಣಿ ......ಅಪ್ಪುಣ್ಣೀ......"

ಉತ್ತರವಿಲ್ಲ.

"ತಲೆ ನೋಯುತ್ತಾ?"

ಅದಕ್ಕೂ ಉತ್ತರವಿಲ್ಲ.

"ಊಟಕ್ಕಿಟ್ಟಿದ್ದೀನಿ ಅಪ್ಪುಣ್ಣೀ"

ಅವನು ಮಾತಾಡಲಿಲ್ಲ.

ಬಾಗಿ ಬೆನ್ನಿನ ಮೇಲೆ ಕೈಯಿಟ್ಟಾಗ ಅವನು ಕೈ ಕೊಸರಿಕೊಂಡು—ಹುಚ್ಚನ ಹಾಗೆ ಹೇಳಿದ.

"ನನ್ನ ಮುಟ್ಟಬೇಡ......ನನ್ನ ಮುಟ್ಟಬೇಡ"

ಪಾರುಕುಟ್ಟಿ ತತ್ತರಿಸಿ ಹೋದಳು. ಗಂಟಲು ಸರಿಮಾಡಿಕೊಂಡು ಅವಳು ಕೇಳಿದಳು:

"ನನ್ನ ಕಂದಾ ನಿನಗೇನಾಯ್ತು?"

ಆಗಲೂ ಅವನು ಬುಸುಗುಟ್ಟುತ್ತಿದ್ದ;

"ನನ್ನ ಮುಟ್ಟಬೇಡ. ನನ್ನ ಮುಟ್ಟಬೇಡ"

ಮಗ ಊಟಮಾಡಲಿಲ್ಲ.

ತಾಯಿಯೂ ಊಟಮಾಡಲಿಲ್ಲ.

ಹತ್ತಿರ ಹತ್ತಿರ ಮಲಗಿದ್ದರೂ ಒಬ್ಬರೂ ಮಾತಾಡಲಿಲ್ಲ. ರಾತ್ರಿಯ ನಿಶ್ಶಬ್ದತೆಯಲ್ಲಿ ತಾಯಿ ಮೆಲ್ಲಗೆ ಬಿಕ್ಕಿ ಬಿಕ್ಕಿ ಅಳುವುದು ಕೇಳಿಸುತ್ತಿತ್ತು.

ಇನ್ನೂ ಸರಿಯಾಗಿ ಬೆಳಗಾಗಿರಲಿಲ್ಲ. ಅವನು ಮೇಲೆದ್ದ.

ಆಗ ಅಮ್ಮ ಚಾಪೆಯ ಮೇಲೆ ಒಂದು ಕಡೆಗೆ ಹೊರಳಿಕೊಂಡು ಮಲಗಿದ್ದಳು.

ನಿದ್ದೆ ಮಾಡುತ್ತಿರಲಿಲ್ಲ. ಬೇಗ ಷರಟನ್ನೂ ಲುಂಗಿಯನ್ನೂ ಬದಲಾಯಿಸಿದ. ಗಣೆಯ ಮೇಲಿದ್ದ ಷರಟನ್ನೂ ಲುಂಗಿಯನ್ನೂ ಸುತ್ತಿ ಪುಸ್ತಕದ ಚೀಲದಲ್ಲಿ ತುರುಕಿಕೊಂಡ. ಬಾಗಿಲನ್ನು ದಾಟುವಾಗ ತಾಯಿ ಕಣ್ಣು ಬಿಟ್ಟು ನೋಡಿದಳು. ತುಂಬ ಕಷ್ಟಪಟ್ಟು ಎದ್ದು ಕುಳಿತುಕೊಂಡು ಭಾರವಾದ ಧ್ವನಿಯಲ್ಲಿ ಕೇಳಿದಳು:

"ಇಷ್ಟು ಬೇಗ ಎಲ್ಲಿಗೆ ಹೋಗ್ತೀ ಅಪ್ಪುಣ್ಣೀ?"

"ನಾನು ಹೋಗ್ತೀನಿ"
"ಮಗಾ" ಗದ್ಗದ ಕಂಠದಲ್ಲಿ ಅವಳು ಕರೆದದ್ದು.
"ಎಲ್ಲಿಗೆ ಹೋಗ್ತೀಯಪ್ಪಾ"
"ಎಲ್ಲಿಗಾದರೂ"
"ನನ್ನ ಕಂದಾ, ನೀನಲ್ಲದೆ ನನಗ್ಯಾರು ದಿಕ್ಕು?"
"ನಿನಗೆ—ನಿನಗೆ—ಶಂಕರ ನಾಯರಿಲ್ಲವಾ?"
ಮುಂಬಾಗಿಲನ್ನು ದಡಾರನೆ ತೆರೆದು ಅವನು ಹೊರಗೆ ಹೋದ.
"ಅಪ್ಪುಣ್ಣೀ......"
ಹಿಂದಿರುಗಿ ನೋಡಲಿಲ್ಲ.
ಭಾರವಾದ ಹೃದಯದಿಂದ ಅವಳು ಪೆಟ್ಟೆಯಿರಿಸಿದ ಹಿಂದಿನಿಂದ ಅಮ್ಮ ಕರೆಯುತ್ತಿದ್ದದ್ದು ಕೇಳಿಸುತ್ತಲೇ ಇತ್ತು.

* * * * *

ನರಿವಾಳ ಗುಡ್ಡದ ಕೆಳಗೆ ಕಣ್ಣಾನ್ ತಳಿಪೊದೆಗಳ ನಡುವೆ ಎದ್ದು ನಿಂತಿದ್ದ ಬಂಡೆಯ ಮೇಲೆ ಅವನು ಕುಳಿತಿದ್ದಾನೆ.
ಬೆಳಗ್ಗೆಯೇ ಬಂದಿರುವುದು. ಸ್ಕೂಲಿಗೆ ಹೋಗುವ ದಾರಿಯಲ್ಲಿ ಕುಳಿತರೆ ಜೊತೆಗಾರರಲ್ಲಿ ಯಾರಾದರೂ ಕಂಡರೆ ಅವರು ನೂರಾರು ಪ್ರಶ್ನೆಗಳನ್ನು ಕೇಳುತ್ತಾರೆ. ಯಾರೂ ತನ್ನನ್ನು ಕಾಣಬಾರದು; ತನ್ನನ್ನು ಹುಡುಕಬಾರದು ಎಂದು.
ಗುಡ್ಡದ ಪಕ್ಕದಲ್ಲಿ ಜನರ ಸುಳಿವಿಲ್ಲ. ದೂರದ ಹುಲ್ಲುಗಾವಲಿನ ಮಧ್ಯೆ ಸುತ್ತು ಗೊಂಬಿನ ಒಂದು ಆಳಗ ಆಡು ಮೇಯುತ್ತಿದೆ.
ಬಿಸಿಲು ತುಂಬ ಚುರುಕಾಗಿತ್ತು. ಬೆನ್ನಿನಲ್ಲೂ ಎದೆಯಲ್ಲೂ ಬೆವರು ಹರಿಯುತ್ತಿತ್ತು. ಷರಟು ಬೆವರಿನಿಂದ ಒದ್ದೆಯಾಗಿ ಮೈಗಂಟಿಕೊಂಡಿತ್ತು.
ತಲೆಯ ಮೇಲೆ ಸೌದೆ ಪುಳ್ಳೆಯನ್ನು ಹೊತ್ತುಕೊಂಡು ಒಬ್ಬ ಹೊಲೆಯ ಕೆಳಗಿನ ಕಾಲುದಾರಿಯಲ್ಲಿ ಅಲ್ಲಿಗೆ ಬಂದ. ಯಾವನೋ ಹೊಲೆಯ. ಅಂತು ಅವನು ಕೇಳಿಯೇ ಬಿಟ್ಟ.
"ಯಾಕೆ ಚಿಕ್ಕ ಸ್ವಾಮಿ ಇಲ್ಲಿ ಕೂತುಗೊಂಡಿದ್ದೀರಿ?"
"ಯಾಕೂ ಇಲ್ಲ."
ದೂರದಲ್ಲಿ ಇನ್ನೂ ಯಾರು ಯಾರೋ ನಡೆದು ಬರುತ್ತಿದ್ದುದನ್ನು ಕಂಡಾಗ ಅಪ್ಪುಣ್ಣಿ ಎದ್ದು ನಿಂತು ಪಶ್ಚಿಮ ದಿಕ್ಕಿನ ದಾರಿಯಲ್ಲಿ ಹೊರಟ.

* * * * *

ಮುಚ್ಚಿದ್ದ ಆ ಪಡಸಾಲೆಯ ಬಾಗಿಲನ್ನು ಬಲವಾಗಿ ತಳ್ಳಿದ. ಬಾಗಿಲು ತೆರೆಯಿತು.

ಮೇಲು ಭಾಗವನ್ನು ಕೆತ್ತಿಸಿ ಹಾಕಿಸಿದ್ದ ಸಾಲು ಸಾಲು ಮೆಟ್ಟಿಲುಗಳು. ಒಂದು ಕಡೆ ಪಾಚಿ ಬೆಳೆದು ಒಣಗಿ ಹಸಿರುಗಟ್ಟಿ ಅಲ್ಲಲ್ಲಿ ಬಿರುಕು ಬಿಟ್ಟಿರುವ ಹಳೆಯ ಗೋಡೆ. ಎತ್ತರ ವಾದ ಆ ಹಳೆಯ ತೊಟ್ಟಿ ಮನೆಯನ್ನೂ ಮುಂದುಗಡೆ ಬಿಲ್ವಪತ್ರೆ ಮರದ ಕಟ್ಟೆಯನ್ನೂ ತೆಂಕು ಭಾಗದಲ್ಲಿದ್ದ ಬತ್ತಾಯದ ಮನೆಯನ್ನೂ ನೋಡುತ್ತ ನಿಂತಿದ್ದ.

ಒಂದು ನಿಮಿಷ ಅವನು ಅನುಮಾನಿಸುತ್ತಿದ್ದು ಆಮೇಲೆ ಮೆಟ್ಟಿಲನ್ನು ಹತ್ತಿ ಅಂಗಳಕ್ಕೆ ಬಂದ. ಯಾರೂ ಇಲ್ಲ.

ದೊಡ್ಡ ಮಾವ ಬತ್ತಾಯದ ಮನೆಯ ಮೇಲೆ ಕುಳಿತುಕೊಂಡು ನೋಡುತ್ತಾ ಇರ ಬೇಕು. ನೋಡು, ಬಡಿದು ಓಡಿಸಿದ. ಅಪ್ಪಣ್ಣ ಮತ್ತೂ ಬಂದಿದ್ದಾನೆ.

ಪಡಸಾಲೆಗೆ ಬಂದ.

ಹಜಾರದ ಕಡೆಗಿರುವ ಒಂದು ತಲೆ ಕಾಣಿಸಿದ ಹಾಗಾಯಿತು. ಮತ್ತೆ ನೋಡಿದಾಗ ಆ ತಲೆ ಮರೆಯಾಗಿತ್ತು.

ಅಪ್ಪಣ್ಣ ಪಡಸಾಲೆಗೆ ಬಂದು ಹತ್ತಿರದ ಮರದ ಮೆಟ್ಟಿಲಿನ ಮೇಲೆ ಪುಸ್ತಕದ ಚೀಲ ವನ್ನಿಟ್ಟ.

"ಯಾರೋ ಅದು?"

"ನಾನು"

ಮನಸ್ಸು ಆಲೋಚಿಸುತ್ತಿತ್ತು. ಈಗ ಚುರುಕಾಗಿರಬೇಕು. ಧೀರನಾದ ತಂದೆಯ ಮಗ.

ದೊಡ್ಡಮ್ಮ ಹೊರಗೆ ಬಂದರು. ಭಾಸ್ಕರನ ತಾಯಿ ಯಾವ ಕನಿಕರವೂ ಇಲ್ಲದ ರೀತಿಯಲ್ಲಿ ಕೇಳಿದರು:

"ಏನು?"

ತಕ್ಷಣ ಉತ್ತರ ಕೊಡಲಾಗಲಿಲ್ಲ. ಒಂದು ನಿಮಿಷ ಆಲೋಚನೆ ಮಾಡಿದ ಬಳಿಕ ಅವನು ಹೇಳಿದ:

"ಅಜ್ಜಿ ನೋಡಬೇಕು."

ಆಗ ಮೂಳು ಬಾಗಿಲಿನ ಹತ್ತಿರ ಬಂದು ನೋಡಿ ಒಳಕ್ಕೆ ಹೋದಳು.

"ಅಪ್ಪಣ್ಣೋ......"

ತೆಂಕು ಭಾಗದಿಂದ ಅಜ್ಜಿ ಬರುತ್ತಿದ್ದರು.

ಯಾವ ಅಳುಕೂ ಇಲ್ಲದೆ ಚಿತ್ರ ಕೆಲಸ ಮಾಡಿದ ಬಾಗಿಲಿನ ಮೂಲಕ ಅವನು ತೆಂಕು ಪಾರ್ಶ್ವದ ಕೋಣೆಗೆ ಹೋದ.

ಅಜ್ಜಿಯನ್ನು ಕಾಣುವ ವರೆಗೆ ತುಂಬ ಬೇಸರಗೊಂಡಿದ್ದ. ಅವನ ತಲೆಯನ್ನೂ ಭುಜಗಳನ್ನೂ ನೇವರಿಸುತ್ತಾ ಅಜ್ಜಿ ಹೇಳಿದರು.

"ಎಷ್ಟು ದಿನದಿಂದ ನಿನ್ನನ್ನು ನೋಡಬೇಕು ಅನ್ನಿಸಿತ್ತು ಅಂತೀ".

ಅಪ್ಪುಣ್ಣಿ ಅಜ್ಜಿಯ ಜೊತೆಯಲ್ಲಿ ಒಳಕ್ಕೆ ಹೋದ. ಬಡಗು ಭಾಗಕ್ಕೆ ಬರುವುದ ರೊಳಗೆ ತಂಗಕ್ಕ ಅವನನ್ನು ನೋಡಿದಳು. ಅದೇತಕ್ಕೆ ಅವರು ಹಾಗೆ ನೋಡುತ್ತಿರು ವುದು? ಇದೇನು ಮೆರವಣಿಗೆಯಾ?

ದೊಡ್ಡಮ್ಮ ಒಂದು ಸಲ ಸಿಟ್ಟಿನಿಂದ ಹಿಮ್ಮಡಿಯಲ್ಲಿ ನೆಲವನ್ನು ತುಳಿದು ಅಲ್ಲಿಂದ ಹೊರಟು ಹೋದಳು. ಕೇಳಿಸಿಕೊಳ್ಳುವುದಿದ್ದರೆ ಕೇಳಿಸಿಕೊಳ್ಳಲಿ ಎನ್ನುವ ಭಾವನೆಯಿಂದ ಹೇಳಿದ:

"ಮಾವ ಬಂದ ಮೇಲಲ್ಲವೇ ಮೆರವಣಿಗೆ ಕಾಣೋದು?"

ಅದಕ್ಕೆ ಯಾರೂ ಪ್ರತ್ಯುತ್ತರವನ್ನು ಹೇಳುವುದುದಿಲ್ಲ ಎಂದು ತೋರಿದಾಗ ಅವರು ಅಪ್ಪುಣ್ಣಿಯ ಕಡೆಗೆ ತಿರುಗಿ ಧ್ವನಿಯನ್ನು ಬದಲಾಯಿಸಿ ಹೇಳಿದರು:

"ನಂಗೊತ್ತಿಲ್ಲ ಅಂತ ಹೇಳ್ತಾ ಇದ್ದೀಯಾ? ಹಿಂದೆ ಬಡಿದಟ್ಟಿದ್ದನ್ನೂ ಗಲಾಟೆ ಆದ ದ್ದನ್ನೂ ಇಷ್ಟು ಬೇಗ ಮರೆತು ಬಿಟ್ಟೆಯಾ?"

"ನೆನಪುಂಟು."

"ಮಾವ ಯಾವಾಗ ಬರ್ತಾರೋ ಗೊತ್ತಿಲ್ಲ. ನೀನಿಲ್ಲಿಂದ ಬೇಗ ಹೋಗಿಬಿಡು."

"ನಾನು ಹೋಗೋದಿಲ್ಲ."

"ಏಯ್."

"ನಾನು ಹೋಗೋದಿಲ್ಲಾಂದೆ."

ತಲೆ ಕೊಡವಿಕೊಂಡು ಸಿಡಿಗುಟ್ಟುತ್ತ ದೊಡ್ಡಮ್ಮ ಅಲ್ಲಿಂದ ಹೋದರು.

ಅಪ್ಪುಣ್ಣಿ ಅಜ್ಜಿಯ ಹತ್ತಿರಕ್ಕೆ ಹೋದ.

ಆ ಸುಕ್ಕುಗಟ್ಟಿದ ಮುಖವನ್ನೂ ಕಣ್ಣು ರೆಪ್ಪೆಗಳನ್ನೂ, ಪ್ರೀತಿಯ ನೋಟವನ್ನೂ ನೋಡಿದಾಗ ಅವನ ಸ್ವರ ತಗ್ಗಿತು.

"ನಾನಿಲ್ಲೇ ಇರ್ತೀನಿ ಅಜ್ಜಿ."

ಪ್ರಶ್ನೆ ಕೇಳಿ ಬೇಸರಪಡಿಸಬಹುದೆಂದು ಅವನು ಭಾವಿಸಿದ್ದ. ಆದರೆ ಅವರು ಒಂದೇ ಒಂದು ಶಬ್ದ ಉಚ್ಚರಿಸಿದ್ದು:

"ಇರು."

ಅಜ್ಜಿಯ ಸುಕ್ಕುಗಟ್ಟಿದ ಶರೀರವನ್ನು ತಬ್ಬಿಕೊಂಡು ಒಂದು ಸಲ ಅತ್ತುಬಿಡಬೇಕು ಅನ್ನಿಸಿತು.

ದೊಡ್ಡ ಮಾವ ಹಿಂದಿನ ದಿನ ಹೆಂಡತಿಯ ಮನೆಗೆ ಹೋಗಿದ್ದರು. ಯಾವ ಹೊತ್ತಿ ನಲ್ಲಿ ಬೇಕಾದರೂ ಬರಬಹುದು. ಬಂದರೆ ಏನೇನು ಸಂಭವಿಸುತ್ತದೋ ಎನ್ನುವ ಭಯ ಒಬ್ಬೊಬ್ಬರಿಗೂ ಒಂದೋದು ವಿಧವಾಗಿತ್ತು. ಆ ಭಯ ಭೀತಿ ಮನೆಯೊಳಗೆಲ್ಲ ಆವರಿಸಿದಂತೆ ತೋರುತ್ತಿತ್ತು.

ಮಾಳು, ಕೃಷ್ಣ ಕುಟ್ಟಿಯ ಮೇಲೆ ಕಣ್ಣಿಟ್ಟು ಗಮನಿಸಿದ್ದಳು. ದೊಡ್ಡ ಮಾವ ಬಂದ ತಕ್ಷಣ ಎಲ್ಲವನ್ನೂ ಹೇಳಿಬಿಡುವವನು ಅವನೇ. ದೊಡ್ಡ ಮಾವನ ಹತ್ತಿರ ಅವನಿಗೆ ಸಲುಗೆಯಿದೆ. ದೊಡ್ಡ ಮಾವನಿಗೂ ಅವನನ್ನು ಕಂಡರೆ ತುಂಬ ಇಷ್ಟ. ಬಡಗು ಭಾಗ ದಲ್ಲಿ "ಮಾವನಿಗೆ ಗೊತ್ತಾಗುವುದೂ ಬೇಡ" ಎಂದು ಒಂದು ತೊಂಡೆಕಾಯಿ ಕಿತ್ತರೂ ಕೂಡಲೇ ಆ ಸುದ್ದಿ ಬತ್ತಾಯದ ಮನೆಗೆ ಮುಟ್ಟುತ್ತಿತ್ತು.

ಅಪ್ಪುಣ್ಣಿಗೆ ಸ್ವಲ್ಪ ಹೊತ್ತು ಕಳೆದ ಮೇಲೆ ತನ್ನಲ್ಲಿಯೇ ಒಂದು ಉತ್ಸಾಹ ಮೂಡಿತು. ಸುಲಭವಾಗಿ ತಾನು ಇಲ್ಲಿಂದ ಹೋಗುವುದಿಲ್ಲ – ಎಂದು. ಬರಲಿ, ಕರೆಯಲಿ, ಬಯ್ಯಲಿ, ಹಿಂದಿನ ಹಾಗೆ ಕುತ್ತಿಗೆ ಹಿಡಿದು ನೂಕಲಿ. ಏನು ಮಾಡಿದರೂ ಹೋಗುವು ದಿಲ್ಲ.

ದೊಡ್ಡ ಮಾವ ಯಾಕೆ ಬಂದಿಲ್ಲ?

ಅಂತು ದೊಡ್ಡ ಮಾವ ಬಂದರು. ಸಾಯಂಕಾಲದ ಹೊತ್ತಿಗೆ ಜೊತೆಯಲ್ಲಿ ಅಮ್ಮಿಣಿ ಅಕ್ಕನೂ ಇದ್ದಳು. ಅಪ್ಪುಣ್ಣಿ ಮನೆಯೊಳಗಿರುವ ವಿಷಯ ಸ್ವಲ್ಪ ಹೊತ್ತಾದ ಮೇಲೆ ತಿಳಿಯಿತು.

"ಯಾವೋಳೇ ಅವಳು ಒಳಗೆ?"

ಹೊರಗಿನಿಂದಲೆ ಗರ್ಜಿಸಿದರು.

ಎಲ್ಲರೂ ಪಡಸಾಲೆಗೆ ಓಡಿದರು. ಅಜ್ಜಿ, ದೊಡ್ಡಮ್ಮ, ಮೀನಾಕ್ಷಕ್ಕ, ತಂಗಕ್ಕ, ಮಾಳು–ಎಲ್ಲರೂ.

"ಯಾವಳೇ ನಡತೆ ಕೆಟ್ಟವಳು? ನನ್ನ ಮಾತು ಮೀರಿ ನಡೆಯೋ ಧೈರ್ಯ ಇರೋಳು?"

ಯಾರೂ ಮಾತನಾಡಲಿಲ್ಲ.

"ಎಲ್ಲೇ ಅವನು?"

ಆಗ ಅಪ್ಪುಣ್ಣಿ ಮೆಲ್ಲನೆ ಪಡಸಾಲೆಗೆ ಬಂದ.

ಮೈ ನಡುಗುತ್ತಿತ್ತು.

ಅವನನ್ನು ಕಂಡಾಗ ಪಾದರಕ್ಷೆಯನ್ನು ಕಳಚಿ, ದೊಡ್ಡ ಮಾವ ಪಡಸಾಲೆಗೆ ಧಾವಿಸಿ ಬಂದರು. "ನಿನ್ನ ಹತ್ರ ನಾನು—"

ದೊಡ್ಡ ಮಾವನಿಗೂ ಅವನಿಗೂ ಮಧ್ಯೆ ಅಜ್ಜಿ ಅಡ್ಡ ಬಂದು ನಿಂತಕೊಂಡರು.

"ಕುಂಞಿಕೃಷ್ಣಾ"

"ದಾರಿ ಬಿಡು. ನಾನಿವನ್ನ ಒದ್ದು ಕರುಳು ಒಡೆದು......"

ಅಜ್ಜಿಯನ್ನು ಆ ಕಡೆಗೆ ತಳ್ಳಿ, ದೊಡ್ಡ ಮಾವ ಅವನ ಮುಂದೆ ಬಂದಾಗ ಅವನು ತನ್ನ ಧೈರ್ಯವನ್ನೆಲ್ಲ ಒಟ್ಟುಗೂಡಿಸಿ ಹೇಳಿದ:

"ನನ್ನ ಮುಟ್ಟಬೇಡಿ"

"ಏನಂದೆಯೋ ಬಡವಾ?"

ಆ ಕೈ ಅವನ ಕೆನ್ನೆಯ ಮೇಲೆ ಬಿದ್ದಿತು......ಮತ್ತೂ ದೊಡ್ಡ ಮಾವನ ಕೈ ಮೇಲೆದ್ದಾಗ ತೆಂಕು ಮನೆಯಿಂದ ಒಂದು ದೊಡ್ಡ ಶಬ್ದ ಕೇಳಿಸಿತು.

"ಆ ಹುಡುಗನ್ನ ಹೊಡೀಬೇಡಿ"

ದೊಡ್ಡ ಮಾವ ತಿರುಗಿ ನೋಡಿದರು. ಉದ್ವೇಗದಿಂದಲೂ ಸಿಟ್ಟಿನಿಂದಲೂ ಬುಸು ಗುಟ್ಟುತ್ತಿದ್ದ ಅವರ ಕಣ್ಣುಗಳನ್ನು ನೋಡಿದಾಗ ಕಾಣಿಸಿದ್ದು ಅಳಿಯನೇ. ಕುಟ್ಟಿ ಮಾವ ಪಡಸಾಲೆಗೆ ಬಂದು ಹೇಳಿದರು.

"ಆ ಹುಡುಗನ್ನ ಹೊಡಿಬೇಡಿ ಅಂತ ನಾನು ಹೇಳ್ತಿರೋದು"

ದೊಡ್ಡ ಮಾವನ ಕೈ ಕೆಳಗಿಳಿಯಿತು.

"ನೀನು ಯಾರೋ ನನಗೆ ಹೇಳೋದಕ್ಕೆ?

"ಯಾರಾದ್ರೂ ಆಗಿಲ್ಲಿ. ಅವನ್ನ ಹೊಡಿಬೇಡಿ ಅಂತ ನಾನು ಹೇಳಿದ್ದು. ಹೊಡೆದರೆ ಆ ಮೇಲೆ ಗೊತ್ತಾದೀತು."

ದೊಡ್ಡ ಮಾವ ಅಳಿಯನ ಕಡೆಗೆ ತಿರುಗಿದರು.

"ಥೂ ! ನಿಂಗಿಷ್ಟು ಧೈರ್ಯ ಬಂತಾ?"

ಆಗಲೂ ಕುಟ್ಟಿ ಮಾವ ಗಟ್ಟಿಯಾದ ಧ್ವನಿಯಲ್ಲಿ ಹೇಳಿದರು.

"ಮಾವನಿಗೆ ವಯಸ್ಸಾಗಿರೋದು ಕೂಡ ನೆನಪಿಲ್ಲ."

ಬುಸುಗುಟ್ಟುತ್ತ ನಿಂತುಕೊಂಡಿದ್ದ ಮಾವ ತಣ್ಣಗಾದರು.

ದೊಡ್ಡಮ್ಮನೂ, ಮೀನಾಕ್ಷಕ್ಕನೂ ತಂಗಕ್ಕನೂ ಪರಸ್ಪರ ನೋಡುತ್ತ ನಿಂತಿದ್ದರು.

ಏನು ಮಾಡಬೇಕೆಂದು ತಿಳಿಯದೆ ಸ್ವಲ್ಪ ಹೊತ್ತು ನಿಂತಿದ್ದು ಆ ಮೇಲೆ ದೊಡ್ಡ ಮಾವ ಅಂಗಳದ ಕಡೆಗೆ ಹೋದರು.

"ಈ ತರವಾಡಿನಲ್ಲಿ ಮೊದ್ಲೆಲ್ಲ ಹೀಗಿರಲಿಲ್ಲ" ಎಂದು ತಮ್ಮಷ್ಟಕ್ಕೆ ತಾವೇ ಗೊಣಗಿ ಕೊಂಡು ದೊಡ್ಡ ಮಾವ ಬತ್ತಾಯದ ಮನೆಗೆ ಹೋದರು.

ಸಾಯಂಕಾಲ ಅವನು ಪೂರ್ವ ದಿಕ್ಕಿನ ಪಡಸಾಲೆಗೆ ಹೋಗಿ ಕುಳಿತುಕೊಂಡ. ಅಂಗಳದ ದೊಡ್ಡ ದೀಪದ ಬೆಳಕು ಆ ಕಡೆಗೆ ಬೀಳುತ್ತಿರಲಿಲ್ಲ. ಒಬ್ಬನೇ ಕುಳಿತಿದ್ದಾಗ ಆ ದಿನ ಹಗಲಿನಲ್ಲಿ ನಡೆದ ಘಟನೆಗಳನ್ನು ಒಂದೊಂದನ್ನಾಗಿ ಆಲೋಚಿಸುತ್ತ ಕುಳಿತಿದ್ದ. ಒಂದು ಹಗಲು ಕಳೆದದ್ದು ಒಂದು ವರ್ಷ ಕಳೆದಂತಾಗಿತ್ತು.

ಬೆಳಕಿನ ಮಂದ ಪ್ರಕಾಶದಲ್ಲಿ ಒಂದು ನೆರಳು ತನ್ನ ಕಡೆಗೆ ಬೀಳುತ್ತಿರುವುದನ್ನು ಕಂಡ.

"ಅಪ್ಪುಣ್ಣೀ !"

ಅವನಿಗೆ ಅದು ಯಾರೆಂದು ತಿಳಿಯಿತು. ಅಮ್ಮಿಣ್ಣಿ ಅಕ್ಕ. ಅವನು ಎಡದ ಕೆನ್ನೆಯ ನ್ನೊಂದು ಸಲ ತಡವಿಕೊಂಡ. ಆಗಲೂ ನೋಯುತ್ತಿತ್ತು.

"ಅಪ್ಪಣ್ಣೀ ತುಂಬ ನೋವಾಯ್ತಾ?"

ಸಿಟ್ಟು ಬಂದಿತು. ಅಪ್ಪ ಹೊಡೆದ. ಮಗಳು ಕೇಳುವುದಕ್ಕೆ ಬಂದಿದ್ದಾಳೆ!

"ಯಾಕೆ ಅಪ್ಪಣ್ಣೀ ಮಾತಾಡೋದಿಲ್ಲ?"

ಆಗ ಒಳಗಿನಿಂದ ದೊಡ್ಡಮ್ಮ ಕರೆದದ್ದು ಕೇಳಿಸಿತು.

"ಅಮ್ಮಿಣಿ ಕುಟ್ಟೀ......"

ಅಮ್ಮಿಣಿ ಅಕ್ಕ ಕೂಡಲೇ ಒಳಕ್ಕೆ ಹೋದಳು.

ಕುಟ್ಟಿ ಮಾವನಿಗೂ, ಭಾಸ್ಕರನಿಗೂ ಕೃಷ್ಣನ್ ಕುಟ್ಟಿಗೂ ಚಿಕ್ಕಪ್ಪನಿಗೂ ಎಲೆ ಹಾಕಿದಾಗ ಮಾಳು ಬಂದು ಅವನನ್ನು ಕರೆದಳು.

ನಡು ಮನೆಯಲ್ಲಿ ನಾಲ್ಕು ಮೊಸೆ ಬಾಳೆ ಎಲೆ ಹಾಸಿತ್ತು. ಜೊತೆಯಲ್ಲಿ ಒಂದು ತುಂಡು ಎಲೆಯನ್ನೂ ಹಾಕಿತ್ತು. ಅದು ಅವನಿಗೆ—

ಬಡಗು ಕೋಣೆಗಂಟಿದಂತೆ ಮೇಲಕ್ಕೆ ಹೋಗುವ ಒಂದು ಸಣ್ಣ ಏಣಿಯ ಕೋಣೆ. ಅವನು ಅಲ್ಲಿ ಮಲಗುವುದು ಎಂದಾಯಿತು. ಬರೀ ಒಂದು ಚಾಪೆ.

ಆ ತೊಟ್ಟಿ ಮನೆ ಕತ್ತಲೆಯ ನಿಶ್ಶಬ್ದದಲ್ಲಿ ಮುಳುಗಿತ್ತು. ಏಣಿಯ ಕೋಣೆಯಲ್ಲಿ ಒಂಟಿಯಾಗಿ ಮಲಗಿದಾಗ ಭಯವುಂಟಾಯಿತು. ಆ ಮನೆಯಲ್ಲಿ ತೀರಿಕೊಂಡ ಹಿರಿಯರ ಪ್ರೇತಗಳು ಕತ್ತಲೆಯಲ್ಲಿ ಸಂಚರಿಸುತ್ತಿರಬಹುದೇ?

ಆಲೋಚಿಸಿ ಆಲೋಚಿಸಿ ಮನಸ್ಸು, ಶರೀರ ದಣಿದಾಗ ನಿಧಾನವಾಗಿ ನಿದ್ದೆ ಬಂದಿತು.

ಬೆಳಗ್ಗೆ ಭಾಸ್ಕರನೂ, ಕೃಷ್ಣನ್ ಕುಟ್ಟಿಯೂ ಗಂಜಿ ಊಟ ಮಾಡುವುದಕ್ಕೆ ಹೋಗಿ ಕುಳಿತುಕೊಂಡಿದ್ದಾಗ ಅಜ್ಜಿ ಅವನನ್ನೂ ಕರೆದರು. ಕಾಲಿಲ್ಲದ ಒಂದು ಮಣೆ ಹಾಕಿಕೊಂಡು ಅವನೂ ಒಂದು ತಟ್ಟೆಯ ಮುಂದೆ ಕುಳಿತುಕೊಂಡ.

ಅಪ್ಪಣ್ಣಿ ಸ್ಕೂಲಿಗೆ ಹೊತ್ತಿಗೆ ಮುಂಚೆ ಹೊರಟ. ಒಂಟೆತ್ತಿನ ಬಂಡಿಯಲ್ಲಿ ಬರುವವರ ವಿಷಯ ಅವನಿಗೆ ಬೇಕಾಗಿರಲಿಲ್ಲ. ಹೋಗುವಾಗ ಅಜ್ಜಿಯಿದ್ದ ಕೊಠಡಿಯ ಬಾಗಿಲಿನ ಹತ್ತಿರ ಹೋಗಿ ಹೇಳಿದ.

"ಅಜ್ಜೀ, ನಾನು ಸ್ಕೂಲಿಗೆ ಹೋಗ್ತೀನಿ"

ಮುಂಭಾಗದ ಮೆಟ್ಟಿಲು ಇಳಿದು ಹೋಗುವಾಗ ಅನ್ನಿಸಿತು. ಗೊನೆ ಕತ್ತರಿಸಿದ ನೇಂದ್ರ ಬಾಳೆ ತೋಟದ ಮೂಲಕ ಪೂಮಾನ್ ತೋಟ ದಾಟಿದರೆ ಯಜ್ಞೇಶ್ವರ ದೇವಾಲಯದ ಹತ್ತಿರಕ್ಕೆ ಬೇಗ ಹೋಗಿ ತಲಪಬಹುದು. ಆ ದಾರಿ ಹತ್ತಿರದ ದಾರಿ.

ಸಾಯಂಕಾಲ ಸ್ಕೂಲು ಬಿಟ್ಟು ಬರುವಾಗ ಅಂಗಳದಲ್ಲಿ ದೊಡ್ಡ ಮಾವ ತಿರುಗಾಡು

ತ್ತಿದ್ದರು. ಅವನನ್ನು ನೋಡಿದ್ದರು. ಆದರೆ ನೋಡದ ರೀತಿಯಲ್ಲಿ ನಟಿಸಿ ಮುಖವನ್ನು ತಿರುಗಿಸಿಕೊಂಡು ಪಶ್ಚಿಮದ ಕಳದ ಅಂಗಳದ ಕಡೆಗೆ ನೋಡುತ್ತಿದ್ದರು.

ತೆಂಕು ಕೋಣೆಯ ಹತ್ತಿರ ಬಂದಾಗ ದೊಡ್ಡ ಮಾವ ಹೊರಗಡೆ ಮಾತನಾಡು ತ್ತಿದ್ದುದು ಕೇಳಿಸಿತು.

"ಇನ್ನು ಈ ತರವಾಡಿನ ಕಥೆ ಮುಗಿಯತ್ತೆ. ಒಂದು ಮುಟ್ಟಿಲ್ಲ ಕಟ್ಟಿಲ್ಲ......ಅಟ್ಟದ ಮೇಲೆ ನಿಷ್ಠೆಯ ಭಗವತಿ ಇರೋದು ಕೂಡ ಗೊತ್ತಿಲ್ಲ."

ಆ ದಿನ ಮೀನಾಕ್ಷಕ್ಕ ಅವನಿಗೆ ತಿಳಿವಳಿಕೆ ನೀಡಿದರು. ಸ್ಕೂಲ್ ಬಿಟ್ಟು ಬರುವಾಗ ಬಡಗು ಕೋಣೆಗಾಗಿಯೇ ಬಾ. ಸ್ನಾನ ಮಾಡದೆ ಅಟ್ಟದ ಮುಂದುಗಡೆ ಬರಬಾರದು ಎಂದು.

ರಾತ್ರಿಯ ಹೊತ್ತು ಭಾಸ್ಕರನೂ ಕೃಷ್ಣನ್ ಕುಟ್ಟಿಯೂ ಮೇಲೆ ಅವರ ರೂಮಿನಲ್ಲಿ ಕುಳಿತುಕೊಂಡು ಓದಿಕೊಳ್ಳುತ್ತಾರೆ. ಊಟದ ಹೊತ್ತಾದಾಗಲೇ ಅವರು ಕೆಳಗಿಳಿದು ಬರುತ್ತಿದ್ದದ್ದು. ತೆಂಕು ಕೋಣೆಯ ಬಾಗಿಲಿನ ಹತ್ತಿರ ಇರುತ್ತಿದ್ದ ದೀಪದ ಮುಂದೆ ಹೋಗಿ ಕುಳಿತು ಪುಸ್ತಕ ತೆರೆದ. ಆದರೆ ಪುಸ್ತಕದಲ್ಲಿ ಮನಸ್ಸು ನಾಟುತ್ತಿಲ್ಲ. ಒಬ್ಬೊಬ್ಬರೂ ಒಂದೊಂದು ಮಾತನಾಡುತ್ತಾರೆ.

ಬೆಳಗ್ಗೆ ಬತ್ತಾಯದ ಬಾಗಿಲು ತೆರೆದು ಭತ್ತ ಅಳೆದು ಕೊಡಬೇಕಾಗಿದ್ದ ದಿನ ಅದು. ವಾರದಲ್ಲಿ ಒಂದು ದಿನ ಮನೆಯ ಖರ್ಚಿಗೆ ಬೇಕಾಗುತ್ತಿದ್ದ ಭತ್ತವನ್ನು ಅಳೆದುಕೊಡುತ್ತಿದ್ದದ್ದು. ಮೀನಾಕ್ಷಕ್ಕ ಎಂದಿನಂತೆ ಕುಕ್ಕೆ ತೆಗೆದುಕೊಂಡು ಹೋದಾಗ ದೊಡ್ಡ ಮಾವ ಹೇಳಿದರು:

"ಇಲ್ಲಿ ಕೆಲಸ ಹೇಳೋದಕ್ಕೆ ಒಬ್ಬ ಅವ್ನಲ್ಲಾ ಅವ್ನೇ ಭತ್ತ ತಂದು ಕೊಡಲಿ."

ಮೀನಾಕ್ಷಕ್ಕನಿಗೆ ಏನು ಮಾಡಬೇಕೆಂದು ತಿಳಿಯದೆ ನಿಂತುಕೊಂಡಿದ್ದಾಗ ದೊಡ್ಡ ಮಾವ ಮತ್ತೂ ಹೇಳಿದರು:

"ಒಂದೇ ಒಂದು ಕಾಳು ಭತ್ತ ಕೊಡೋದಿಲ್ಲ. ನಿಮಗೆಲ್ಲ ಪಾಠ ಕಲಿಸೋಕಾಗತ್ತೋ ಇಲ್ಲವೋ ನೋಡ್ತೀನಿ."

ಒಳಗೆ ದೊಡ್ಡಮ್ಮನಿಗೆ ಅಳು ಬರುವ ಹಾಗಾಗಿತ್ತು.

"ನಾನೂ ನನ್ನ ಮಕ್ಕಳೂ ಕಷ್ಟಕ್ಕೆ ಸಿಕ್ಕಿ ಹಾಕಿಕೊಂಡೆವಲ್ಲಪ್ಪಾ."

ಕುಟ್ಟಿ ಮಾವ ಬಂದಾಗ ಅವನಿಗೆ ವಿಷಯ ತಿಳಿಯಿತು. ಮಾಳು ತಂದೆಯ ಹತ್ತಿರ ಹೇಳಿದ್ದಳು.

ಕುಟ್ಟಿ ಮಾವ ನೀದ ಬತ್ತಾಯದ ಮನೆಗೆ ಹತ್ತಿ ಹೋಗುತ್ತಿದ್ದಾಗ ಅಜ್ಜಿ ಬಂದು ತಡೆದರು. ಆಗ ಕುಟ್ಟಿ ಮಾವ ಹೇಳಿದರು:

"ಇಷ್ಟು ದಿನ ನಾನೂ ಮಾತಾಡ್ದೇ ಇದ್ದೆ. ನನಗೂ ಇಲ್ಲಿ ಅಧಿಕಾರ ಇದೆಯೋ ಇಲ್ಲವೋ ನೋಡಿಯೇ ಬಿಡ್ತೀನಿ."

ಬತ್ತಾಯದ ಮನೆಯ ಮಹಡಿಯಲ್ಲಿ ಜಗಳ ನಡೆಯುತ್ತಿತ್ತು.

"ನಾನು ತೆಗೆಯೋದಿಲ್ಲ. ಬತ್ತಾಯದ ಬಾಗಿಲು ತೆಗೆಯೋದಿಲ್ಲ. ನೀನು ಯಾರೋ ನನಗೆ ಹೇಳೋದಕ್ಕೆ?"

ಮಾಳುವೂ ದೊಡ್ಡಮ್ಮನೂ ತಂಗಕ್ಕನೂ ಮುಂಭಾಗದ ಪಡಸಾಲೆಯಲ್ಲಿ ನಿಂತು ಕೇಳಿಸಿಕೊಳ್ಳುತ್ತಿದ್ದರು.

"ನಾನು ಯಾರಾ? ನಾನು ಈ ತರವಾಡಿನ ಒಬ್ಬ ಮನುಷ್ಯ. ಹಗಲು ರಾತ್ರಿ ಜಮೀನಿನಲ್ಲಿ ಬೆವರು ಸುರಿಸಿ ಭತ್ತ ಬೆಳೆಯೋನು."

ಆ ಮೇಲೆ ಕುಟ್ಟಿ ಮಾವ ದೊಡ್ಡ ಮಾವನ ಹೆಂಡತಿಯ ಮನೆಯ ವಿಷಯವಾಗಿ ಮಾತನಾಡಿದರು.

ದೊಡ್ಡ ಮಾವ ಬತ್ತಾಯದ ಬಾಗಿಲು ತೆರೆಯಲಿಲ್ಲ. ಕುಟ್ಟಿ ಮಾವ ಕೆಳಗಿಳಿದು ಬಂದು ಬತ್ತಾಯದ ಹಜಾರದಲ್ಲಿದ್ದ ದೊಡ್ಡ ತಡಿಕೆಯಿಂದ ಬೀಜದ ಭತ್ತವನ್ನು ತೆಗೆದು ಅಳೆದು ಕೊಟ್ಟರು. ಮೀನಾಕ್ಷಕ್ಕ ಅದನ್ನು ತೆಗೆದುಕೊಂಡು ಹೋಗಲು ಅನುಮಾನಿಸುತ್ತ ನಿಂತಿದ್ದಾಗ ಮೀನಾಕ್ಷಕ್ಕನ ಮೇಲೆ ರೇಗಿದರು.

"ತಕ್ಕೊಂಡು ಹೋಗು ಅಂತ ಹೇಳಲಿಲ್ಲವಾ?"

ಎಂದು ಗಟ್ಟಿಯಾಗಿ ಕೇಳಿದಾಗ ಅಳೆದಿಟ್ಟಿದ್ದ ಕೆಂಪು ಭತ್ತವನ್ನು ಕುಕ್ಕೆಯಲ್ಲಿ ತುಂಬಿ ಕೊಂಡು ಮಾಳುವಿನ ಸಹಾಯದಿಂದ ಮೀನಾಕ್ಷಕ್ಕ ತೆಗೆದುಕೊಂಡು ಹೋದರು.

ಬೀಜದ ಭತ್ತವನ್ನೇ ಊಟಕ್ಕೆ ಉಪಯೋಗಿಸಬೇಕಾದಂತಹ ಕಾಲ ಬಂದದ್ದನ್ನು ನೋಡಿ ಅಜ್ಜಿಗೆ ತುಂಬ ಸಂಕಟವುಂಟಾಯಿತು.

ಕುಟ್ಟಿ ಮಾವ ಅಜ್ಜಿಯ ಹತ್ತಿರ ಹೇಳಿಯೂ ಇದ್ದರು. "ಇದಕ್ಕೊಂದು ವ್ಯವಸ್ಥೆ ಯಾಗಬೇಕು; ಇಲ್ಲ ನನಗೆ ನನ್ನ ಪಾಲು ಕೊಡಬೇಕು. ನಾನು ನಿರ್ಧಾರ ಮಾಡಿದ್ದೀನಿ."

* * * * *

ಒಂದು ಮುಕ್ತಾಯಕ್ಕೆ ಬಂದೇ ಬರುತ್ತದೆ ಎನ್ನುವುದು ಕುಟ್ಟಿ ನಾಯರ ತೀರ್ಮಾನ ವಾಗಿತ್ತು. ಆದರೆ ಅಷ್ಟು ಬೇಗ ಆಗುವುದೆಂದು ಭಾವಿಸಿರಲಿಲ್ಲ.

ಹದಿನೈದೋ ಹದಿನಾರೋ ವರ್ಷದಲ್ಲಿ ಜಮೀನಿನಲ್ಲಿ ಕೆಲಸ ಮಾಡುವುದಕ್ಕೆ ತೊಡ ಗಿದ್ದ ಆತ. ಇಪ್ಪತ್ತು ವರ್ಷಗಳಿಗೂ ಹೆಚ್ಚಾಯಿತು, ದುಡಿಯುವುದಕ್ಕಾರಂಭಿಸಿ. ಆದರೆ ಈಗಲೂ ಸುತ್ತಿಕೊಳ್ಳುವುದಕ್ಕೆ ಒಂದು ಒಳ್ಳೆಯ ಪಂಚೆಯಿಲ್ಲ. ಹೊರಗೆ ಒಂದು ಲೋಟ ಟೀ ಕುಡಿಯಬೇಕು ಅನ್ನಿಸಿದರೆ ಕೈಯಲ್ಲಿ ಒಂದು ಕಾಸಿಲ್ಲ. ವರ್ಷದಲ್ಲಿ ನಾಲ್ಕು ಪಂಚೆ, ಎರಡು ಧೋತ್ರ, ಐದು ಪರೆ ಭತ್ತ ಕೂಲಿ. ಗದ್ದೆ ಕೆಲಸ ಮಾಡುವ ಹೊಲೆಯರಿಗೂ

ಓಣಂ, ವಿಶು, ತಿರುವಾದಿರ ಬಂದಾಗ “ಪಡಿ”[1] ಕೊಡುವುದುಂಟು. ತಾನು ಅವರಿಗಿಂತಲೂ ಕಡೆ ಎನ್ನಿಸಿತು.

ಸಿಟ್ಟಿನಿಂದ ಕುಟ್ಟ ನಾಯರ್ ಕ್ಯಾಕರಿಸಿ ಉಗುಳಿದ.

ದೊಡ್ಡ ತರವಾಡು ಅನ್ನುವ ಹೆಸರು ಮಾತ್ರ ಇದೆ, ಹೆಸರಿದ್ದರೇನು ಫಲ?

ಮಾಳುವಿನ ವಿಷಯ ಆಲೋಚಿಸಿದಾಗ ಆತನಿಗೆ ಸಂಕಟವಾಗುತ್ತದೆ. ಎರಡು ಮೂರು ವರ್ಷ ಕಳೆಯುವುದರಲ್ಲಿ ಅವಳು ಯೌವನಕ್ಕೆ ಕಾಲಿರಿಸುತ್ತಾಳೆ. ಕತ್ತಿನಲ್ಲಾಗಲೀ ಕಿವಿಯಲ್ಲಾಗಲೀ ಒಂದು ಚೂರು ಚಿನ್ನವಿಲ್ಲ. ಅವಳನ್ನು ಮನೆಯಲ್ಲಿ ಒಂದು ಕೆಲಸದ ಆಳಿನಂತೆ ನೋಡಿಕೊಳ್ಳುತ್ತಿರುವುದು. ಅವಳು ಪ್ರತಿದಿನ ಬೆಳಗ್ಗೆ ಸಾಯಂಕಾಲ ಹೊರಲಾರದ ಪಾತ್ರೆಯಲ್ಲಿ ನೀರು ಹೊರುವುದನ್ನು ನೋಡುತ್ತಿದ್ದ. ಅವಳು ಅಲ್ಲಿರುವುದೇ ಕುಂಞ ಅಕ್ಕನಿಗೆ ಇಷ್ಟವಿಲ್ಲ. ಮಾವನ ಮಗಳು ಅಲ್ಲಿದ್ದಾಳೆ. ಆದರೆ ಅವಳು ಬತ್ತಾಯದ ಮನೆಯಿಂದ ಕೆಳಕ್ಕಿಳಿಯುವುದೇ ಇಲ್ಲ. ಕುಂಞ ಅಕ್ಕನಿಗೂ ಒಬ್ಬಳು ಮಗಳಿದ್ದಾಳೆ. ಅವಳಿಗೆ ಹಲಸಿನೆಲೆಚ್ಚುಚ್ಚುವುದಕ್ಕೆ ಕೂಡ ಬರುವುದಿಲ್ಲ. ಮನೆಗೆಲಸದ ಹೊರೆಯೆಲ್ಲ ಮೀನಾಕ್ಷಿ ಮತ್ತು ಮಾಳುವಿನ ತಲೆಯ ಮೇಲೆ.

ಇದನ್ನು ಕಂಡು ಸಹಿಸದಂತಾಗಿತ್ತು. ಕಡೆಗೆ ಅದು ಆ ದಿನ ಸ್ಫೋಟಗೊಂಡಿತು.

ಅಪ್ಪುಣ್ಣಿ ಬಂದದ್ದು ಆತನಿಗೆ ಗೊತ್ತಿರಲಿಲ್ಲ.

ಅಪ್ಪುಣ್ಣಿಯ ಮೇಲೆ ಆತನಿಗೆ ಅಂಥ ಪ್ರೀತಿಯೂ ಇಲ್ಲ ದ್ವೇಷವೂ ಇಲ್ಲ. ಆದರೆ ಹಿಂದೆ ಒಂದು ಸಲ ಅವನನ್ನು ಕುತ್ತಿಗೆ ಹಿಡಿದು ನೂಕಿದಾಗ ಸ್ವಲ್ಪ ಬೇಸರವಾಯಿತು. ಎಷ್ಟಾದರೂ ಒಬ್ಬ ಮನುಷ್ಯ ಜೀವಿಯಲ್ಲವೇ? ವಡಕ್ಕೇಪಾಟ್ ತರವಾಡಿನ ಗಂಡು ಮಗ ಅವನು. ಹೇಳುವವರು ಕೇಳುವವರು ಯಾರೂ ಇಲ್ಲವೆಂದ ಮಾತ್ರಕ್ಕೆ—

ಆಗ ಪುನಃ ಮಾಳುವಿನ ವಿಷಯ ನೆನಪಾಯಿತು. ಮನುಷ್ಯನ ಸ್ಥಿತಿ ಯಾವಾಗ ಹೇಗಿರುತ್ತದೆ ಎಂದು ಹೇಳಲು ಯಾರಿಗೂ ಸಾಧ್ಯವಿಲ್ಲ. ಈವತ್ತು ನಾನು ಕಣ್ಣು ಮುಚ್ಚಿದರೆ ನಾಳೆ ಮಾಳುವಿನ ಸ್ಥಿತಿ ಏನು? ಅವಳಿಗೂ ಇದೇ ಗತಿ ಆಗುವುದು. ಅವಳನ್ನು ಕುತ್ತಿಗೆ ಹಿಡಿದು ನೂಕುತ್ತಾರೆ. ಅವಳಿಗೆ ಅಲ್ಲಿ ಯಾವ ಅಧಿಕಾರವೂ ಇರುವುದಿಲ್ಲ.

ಒಂದು ಸಾಯಂಕಾಲ ಮನೆಗೆ ಬಂದಾಗ ಅವನ್ನು ಕಂಡದ್ದು. ಆ ಹುಡುಗನ ಮೂಳೆ ಮುರಿದು ಹಾಕಿಬಿಡುತ್ತಾರೆ ಎನ್ನಿಸಿತು. ಆಗ ಅದು ವರೆಗೆ ತಡೆದು ಹಿಡಿದಿದ್ದ ಸಿಟ್ಟೆಲ್ಲ ಒಮ್ಮೆಲೇ ಹೊರ ಹೊಮ್ಮಿತು. ಶಬ್ದ ಏರಿತು.

ತೊಂದರೆ ಪ್ರಾರಂಭವಾಗುತ್ತಿದೆ ಎನ್ನಿಸಿತು ಕುಟ್ಟ ನಾಯರಿಗೆ—

---

1 ಮುಂಡು (ಲುಂಗಿ), ಭತ್ತ, ತೆಂಗಿನಕಾಯಿ, ಎಣ್ಣೆ ಇವುಗಳನ್ನು ಕೊಡುವ ಸಂಪ್ರದಾಯ. 'ಪಡಿ' ಈಸಿಕೊಳ್ಳುವ ಹೊಲೆಯನಿಗೆ ಮತ್ತೊಂದು ಕಡೆ ಕೆಲಸಕ್ಕೆ ಹೋಗುವುದಕ್ಕೆ ಅಧಿಕಾರವಿಲ್ಲ.

ಭತ್ತ ಅಳೆದು ಕೊಡುವುದಿಲ್ಲ ಎನ್ನುವ ಮತ್ಸರವೂ ಇದೆ ಈಗ.

ಬತ್ತಾಯದ ಬೀಗ ಹಾಕಿಕೊಂಡು ಬೀಗದ ಕೈಯನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು ದೊಡ್ಡ ಮಾವ ತಿರುಗಾಡುತ್ತಿರುವುದು. ಬಂಡಿಯವರಿಗೆ ಭತ್ತ ಮಾರುವುದಕ್ಕೆ ಹೊರಟಿದ್ದಾರೆ ಎನ್ನುವ ಸುದ್ದಿ ತಿಳಿಯಿತು. ಬರಲಿ, ಊಟಕ್ಕಿಟ್ಟಿರುವ ಭತ್ತ ಬಂಡಿಯವರಿಗೆ ಮಾರಲಿ......

ವಡಕ್ಕೇಪಾಟ್ ತರವಾಡಿನಲ್ಲಿ ಹಕ್ಕು ಇರುವುದು ಒಬ್ಬನಿಗೆ ಮಾತ್ರವೇ ಅಲ್ಲವಲ್ಲ?

# 5

ಮಳೆ ಬೀಳುವುದಕ್ಕೆ ಪ್ರಾರಂಭವಾಗಿ ನಾಲ್ಕೈದು ದಿನಗಳಾಗಿದ್ದುವು. ಗಾಳಿ, ಗುಡುಗು ಇರಲಿಲ್ಲ. ಜೋರಾದ ಮಳೆ ಮಾತ್ರ. ಒಂದು ಮೋಡದ ಗುಂಪು ಕೂಡಿದರೆ ಸಾಕು; ಮಳೆ ಸುರಿಯುತ್ತಿತ್ತು. ಅದು ನಿಲ್ಲುವಷ್ಟರಲ್ಲಿ ಮತ್ತೆ ಆಕಾಶ ಕಪ್ಪಾಗು ತ್ತಿತ್ತು.

ನೀರು ತುಂಬಿ ನಿಂತಿದ್ದ ಅಂಗಳದಲ್ಲಿ ಮಳೆ ಹನಿಗಳು ಬೀಳುವಾಗ ಗುಳ್ಳೆಗಳು ಏಳು ತ್ತಿದ್ದುದನ್ನೂ ಒಡೆಯುತ್ತಿದ್ದುದನ್ನೂ ನೋಡುತ್ತಾ ಇದ್ದಳು.

ನಂಬೂದಿರಿ ಮನೆಯಲ್ಲಿ ಕೆಲಸವಿಲ್ಲ. ಇನ್ನು ಮಳೆ ನಿಂತ ಮೇಲೆ ಭತ್ತ ಕುಟ್ಟುವುದು ಎಂದು ಕುಂಞಾತ್ತೋಲು ಹೇಳಿದ್ದಾಳೆ.

ಒದ್ದೆಯಾಗಿ ನಿಂತ ಗದ್ದೆಯ ಮುಖವನ್ನು ಒರೆಸಿಕೊಂಡು ಬರುವ ಗಾಳಿಯಲ್ಲೂ ನೀರಿನ ಹನಿಗಳಿವೆ.

ಚೆಲನಿ ಗಿಡಗಳು ಬೇಲಿಯಂತೆ ಬೆಳೆದು ನಿಂತಿದ್ದ ಅಂಚಿನ ದಾರಿಯಲ್ಲೆಲ್ಲ ಮಣ್ಣು ತುಂಬಿಕೊಂಡಿದೆ. ಆ ದಾರಿಯ ಕಡೆಗೆ ಹಾಯ್ದಾಗ ಪಾರುಕುಟ್ಟಿ ಅಪ್ಪುಣ್ಣಿಯನ್ನು ನೆನಸಿ ಕೊಳ್ಳುತ್ತಾ ನಿಂತಿದ್ದಳು. ಅಪ್ಪುಣ್ಣಿ ಇನ್ನೂ ಬಂದಿಲ್ಲ. ಅವನು ಬರುವುದಿಲ್ಲವೆ? ಅವನು ಒಮ್ಮೆಯೂ ಬರುವುದಿಲ್ಲವೆ?

ಮನೆಯ ಮೆಟ್ಟಿಲಿಳಿದು ಹೋದಾಗ ಬೇಸರ ಕಳೆದುಕೊಂಡು ಸಾಯಂಕಾಲ ಹಿಂದಿ ರುಗಿ ಬರಬಹುದೆಂದು ಭಾವಿಸಿದ್ದಳು. ಕತ್ತಲಾದರೂ ಬರಲಿಲ್ಲ. ಎಲ್ಲರ ಹತ್ತಿರವೂ ಕೇಳಿದ್ದಾಯಿತು. ಅವನನ್ನು ಕಂಡವರಿಲ್ಲ. ಸಾಯಂಕಾಲ ಸ್ವಲ್ಪ ದೂರದ ವರೆಗೆ ಅಳುತ್ತಾ ಓಡಿದಳು. ಅಡಕೆ ಸುಲಿಯುವ ಸ್ಥಳದಲ್ಲಿರುವ ಅಂಗಡಿಗಳ ಆಚೆಗೆ......ಹುಣಿಸೆ ಮರದ ಮನೆಯ ಕಾದ್ರಿ ಮಾಪಿಳ್ಳೆಯ ಮಗನೂ ಅಪ್ಪುಣ್ಣಿಯ ಕ್ಲಾಸಿನಲ್ಲಿ ಓದುತ್ತಿದ್ದಾನೆಂದು ಕೇಳಿದ್ದಳು. ಅವನನ್ನು ಕೇಳಿದರೆ ಗೊತ್ತಾಗಬಹುದು ಎಂದುಕೊಂಡಳು. ಕತ್ತಲಾಗು ತ್ತಿತ್ತು. ತುಂಬ ಕತ್ತಲಾದರೆ ಮತ್ತೆ ಮುಂದೆ ಹೋಗುವುದಕ್ಕಾಗುವಂತಿರಲಿಲ್ಲ. ಅಷ್ಟು ಓಡಿದಳು. ಎಡವುತ್ತಾ ಬೀಳುತ್ತಾ ಆ ದಾರಿಯಲ್ಲಿ ಅವಳು ಓಡಿದುದು !

ಕಾದ್ರಿ ಮಾಪಿಳ್ಳೆಯ ಮನೆಯಲ್ಲಿ ಕೇಳಿದಾಗ ಮುಹಮ್ಮದ್ ಆ ದಿನ ಅಪ್ಪುಣ್ಣಿ ಯನ್ನು ಕ್ಲಾಸಿನಲ್ಲಿ ನೋಡಲಿಲ್ಲವೆಂದ. ಎದೆಯ ಮೇಲೆ ಕೈಯಿಟ್ಟುಕೊಂಡು "ನನ್ನ ಮಗನೇ" ಎಂದಳು.

ಮನೆಗೆ ಹಿಂದಿರುಗಿ ಬಂದು ದೀಪ ಹಚ್ಚಿಟ್ಟು ಮತ್ತೆ ಮೆಟ್ಟಿಲಿನ ಹತ್ತಿರವೇ ಕಾದು

ನಿಂತಳು. ಶಂಕರ ನಾಯರಾದರೂ ಬಂದಿದ್ದರೆ ನೋಡುವುದಕ್ಕೆ ಕಳುಹಿಸಬಹುದಾಗಿತ್ತು. ಆದರೆ ಶಂಕರನ್ ನಾಯರ್ ಆ ದಾರಿಯಲ್ಲಿ ಈಗ ಬರುತ್ತಿಲ್ಲ. ಆತ ಆಮೇಲೆ ಮನೆಗೂ ಬಂದಿಲ್ಲ. ಇನ್ನು ಬರುವುದಿಲ್ಲ. ನಂಬೂದಿರಿಯ ಮನೆಯಲ್ಲಿ ಆತನ ಮುಖಕ್ಕೆ ಮುಖ ಕೊಟ್ಟು ನೋಡಲಾಗುತ್ತಿರಲಿಲ್ಲ. ಯಾರ ಹತ್ತಿರವೂ ತನ್ನ ದುಃಖವನ್ನು ಹೇಳಿಕೊಳ್ಳು ವಂತಿಲ್ಲ. ಆ ದಿನ ಮುತ್ತಜ್ಜಿಯೂ ಕೊಟ್ಟಿಗೆಯಲ್ಲಿರಲಿಲ್ಲ. ದೀಪ ಹಚ್ಚಿಟ್ಟು ಇಡೀ ರಾತ್ರಿ ಎಚ್ಚರವಾಗಿದ್ದಳು. ಇನ್ನು ಅವನು ಬರುವುದಿಲ್ಲವೇ?

ಹೇಗೆ ಬೆಳಕು ಹರಿಸಿದಳು ಎಂದು ಈಗ ನೆನಪಿಲ್ಲ.

ಇದ್ದಕ್ಕಿದ್ದ ಹಾಗೆ ಮುತ್ತಜ್ಜಿ ಬಂದಳು. ಮುತ್ತಜ್ಜಿ ಬಂದಾಗ ಅಪ್ಪುಣ್ಣಿ ತರವಾಡಿಗೆ ಹೋಗಿದ್ದಾನೆ ಎಂದು ತಿಳಿಯಿತು. ಮುತ್ತಜ್ಜಿಯ ಹತ್ತಿರ ಹೇಳಿದವಳು ಚಕ್ಕಮ್ಮ. ಚಕ್ಕಮ್ಮನ ಹತ್ತಿರ ಹೇಳಿದ್ದು ಸೈದಾಲಿ ಕುಟ್ಟಿ.

ಅಪ್ಪುಣ್ಣಿ ತರವಾಡಿನಲ್ಲೇ ಇದ್ದುಬಿಡುತ್ತಾನೋ. ಅವನನ್ನು ಅವಮಾನ ಮಾಡಿ ಕಳಿಸಿದ್ದು ಅಲ್ಲಿಂದಲೇ ಅಲ್ಲವೇ?

ಅವನು ಅಲ್ಲಿ ನಿಲ್ಲುವುದಿಲ್ಲ.

ಪಾರುಕುಟ್ಟಿ ಕಾದಿದ್ದಳು. ನನ್ನ ಮಗ ಬರುತ್ತಾನೆ—ಬೇಗ ಬರುತ್ತಾನೆ ಎಂದು.

ನಂಬೂದಿರಿ ಮನೆಗೆ ಹೋದಾಗ ಇರಿಕ್ಕಣ್ಣಮ್ಮ ಕೇಳಿದಳು:

"ಮಗ ಬಂದನಾ ಪಾರುಕುಟ್ಟೀ"

"ಬರ್ತಾನೆ" ಎಂದು ಮಾತ್ರ ಉತ್ತರ ಹೇಳಿದ್ದು. ಆಗಲೇ ಜನರಿಗೆ ಗೊತ್ತಾಗಿದೆಯೋ, ಮಗ ಮನೆಬಿಟ್ಟು ಹೋಗಿರುವ ವಿಷಯ.

ರಾತ್ರಿಯ ಹೊತ್ತಿನಲ್ಲಿ ತುಂಬ ದುಃಖವುಂಟಾಗುತ್ತಿತ್ತು. ಘಳೆಗಾಲ ಪ್ರಾರಂಭ ವಾದ ಮೇಲೆ ಬೇಗ ಕತ್ತಲೆಯಾಗುತ್ತದೆ. ದರೆ[1]ಯ ತುಂಬ ನೀರು, ಅವ್ಯಕ್ತವಾದ ಭೀತಿ ಮನಸ್ಸಿನಲ್ಲಿ ಮೂಡುತ್ತದೆ. ರಾತ್ರಿಯ ಹೊತ್ತು ಮುತ್ತಜ್ಜಿ ಜೊತೆಯಲ್ಲಿ ಬಂದು ಮಲಗುತ್ತಾಳೆ. ಚಾಪೆ ಕಂಡ ಕೂಡಲೇ ಮುತ್ತಜ್ಜಿ ನಿದ್ದೆ ಮಾಡಿಬಿಡುತ್ತಾಳೆ. ಬಾಗಿಲು ಹಾಕಿದ ಮೇಲೆ ನಿದ್ದೆ ಬರುವುದಿಲ್ಲ. ಹೊರಗೆ ಅಂಗಳದಲ್ಲಿ ಸ್ವಲ್ಪ ಶಬ್ದ ಕೇಳಿದರೂ ಸಾಕು ಅವಳು ಕಿವಿಕೊಟ್ಟು ಕೇಳುತ್ತಿದ್ದಳು. ರಾತ್ರಿಯ ಕಾಲದಲ್ಲಿ ಅಪ್ಪುಣ್ಣಿ ಬರುವುದಿಲ್ಲ ಎಂದು ಕೊಂಡಿದ್ದರೂ ಒಂದು ಸಣ್ಣ ಶಬ್ದ ಕೇಳಿದರೂ ಸಾಕು ಕಿವಿ ನೆಟ್ಟಗಾಗುತ್ತಿತ್ತು.

ಈ ಮಳೆ ಬೀಳುತ್ತಿರುವಾಗಲೂ ಅವನು ಸ್ಕೂಲಿಗೆ ಹೋಗುತ್ತಿದ್ದಾನೆಯೆ? ಹೊಳೆ ತುಂಬಿ ಹರಿಯುತ್ತಿದೆ. ಆಮಿನುಮ್ಮ ಹೇಳಿದ್ದಳು ದೋಣಿ ನಿಲ್ಲಿಸಿ ಮೂರು ದಿನ ಆಯ್ತು ಎಂದು.

---

1 ಹಿತ್ತಿಲಿನ ಸುತ್ತ ಇರುವ ಗೋಡೆ.

ಎರಡು ದಿನ ಹೀಗೇ ಇದ್ದರೆ ನೆರೆ ಬರುತ್ತದೆ ಎಂದು ಆಮಿನುಮ್ಮ ಅಂಗಡಿಯಿಂದ ಬರುವಾಗ ಹೇಳಿದ್ದು ನೆನಪಾಯಿತು. ರಸ್ತೆ ಇರುವುದು ಹೊಳೆಯ ಅಂಚಿನಲ್ಲಿ. ಹೊಳೆಯ ನೀರು ರಸ್ತೆಯ ಎತ್ತರಕ್ಕೆ ಬಂದಿದೆ. ಈಗ ಎಚ್ಚರಿಕೆಯಿಂದ ನಡೆಯದಿದ್ದರೆ ದಡ ಕುಸಿಯುತ್ತದೆ ಎಂದು. ದೇವರೇ, ಅದೇ ದಾರಿಯಲ್ಲಲ್ಲವೇ ಸ್ಕೂಲಿಗೆ ಹೋಗುವುದು.

"ಭಗವತೀ, ಕಾಪಾಡು" ಎಂದು ಭಗವತಿಯನ್ನು ಪಾರುಕುಟ್ಟಿ ಒಂದು ಸಲ ಪ್ರಾರ್ಥಿಸಿಕೊಂಡಳು.

ಮನೆಯಲ್ಲಿದ್ದ ಅಕ್ಕಿ ಮುಗಿದಿದೆ. ಮಧ್ಯಾಹ್ನ ಆಮಿನುಮ್ಮನ ಮನೆಯಿಂದ ಒಂದು ಪಾವು ಅಕ್ಕಿ ಈಸಿ ತಂದದ್ದು. ಅದರಲ್ಲಿ ಒಂದು ಓಡಿ ಅಕ್ಕಿ ಬಾಕಿಯಿದೆ. ನಾಳೆ ಬೆಳಗಿನ ಗಂಜಿಗಾಗುತ್ತದೆ. ಆಮೇಲೆ?

ಈ ಮಳೆ ನಿಲ್ಲುವುದಿಲ್ಲ.

ಮಳೆ ಪ್ರಾರಂಭವಾದ ನಂತರ ಮುತ್ತಜ್ಜಿ ಪಾರುಕುಟ್ಟಿಯ ಮನೆಯಲ್ಲೇ ಇರುವುದು. ಕಂಬಳಿ ಹೊದೆದುಕೊಂಡು ಕಾಲು ತಡವಿಕೊಳ್ಳುತ್ತ ಕುಳಿತಿರುತ್ತಿದ್ದಳು. ಮಧ್ಯೆ ಮಧ್ಯೆ ಮಳೆಯನ್ನು ಶಪಿಸುತ್ತಿದ್ದಳು.

"ಈ ಸಲ ನಾಕು ಕೊಳಗ ಮಳೆ. ನೆಟ್ಟಗೇ ಬೀಳ್ತದೆ."

ತಣ್ಣನೆಯ ಗಾಳಿ ಬೀಸಿ ಬಂದು ಶರೀರಕ್ಕೆ ತಾಗಿದಾಗ ಮುತ್ತಜ್ಜಿ ಮತ್ತೂ ಶಪಿಸುತ್ತಿದ್ದಳು.

"ಇದು ಹಾಳು ಮಾಡೋ ಮಳೆ. ಹಾಳು ಮಾಡೋದಕ್ಕೇ ಬೀಳ್ತಿರೋದು. ಕಲಿಗಾಲ......ಕಲಿಗಾಲ......ಕಲಿಗಾಲದಲ್ಲಿ ಪ್ರಳಯ ಆಗತ್ತಂತೆ ಪಾರುಕುಟ್ಟೀ"

ಒಂದು ಟೊಪ್ಪಿ ಕೊಡೆಯೂ ಕೂಡಿ ಹಿಂದಿನ ಬೇಲಿಯನ್ನು ದಾಟಿ ಆಮಿನುಮ್ಮ ಮೆಟ್ಟಿಲು ದಾಟಿ ಅಂಗಳಕ್ಕೆ ಬಂದಳು.

"ಕೇಳಿದೆಯಾ ಪಾರುಕುಟ್ಟೀ"

ಮಳೆಯ ಹನಿಯ ಶಬ್ದದಿಂದಾಗಿ ಪಾರುಕುಟ್ಟಿಗೆ ಕೇಳಿಸಲಿಲ್ಲ.

"ಪೂಮಾನ್ ಜಮೀನಿಗೆ ನೀರು ನುಗ್ಗಿದೆ. ಅಪಾಯವಾದರೇನು ಮಾಡೋದು ದೇವರೇ"

ಮುತ್ತಜ್ಜಿ ಒಳಕ್ಕೆ ಕರೆದಳು. "ಇತ್ತಲಾಗಿ ಬಂದು ಕೂತುಕೊಳ್ಳಿ ಉಮ್ಮಾ".

ಸೂರು ಕಟ್ಟಿನ ನೀರು ತಲೆಯ ಮೇಲೆ ಬೀಳದಂತೆ ಉಮ್ಮ ಕೊಡೆ ತೆಗೆದು ಹಿಡಿದುಕೊಂಡು ಪಡಸಾಲೆಗೆ ಬಂದಳು.

"ಇಪ್ಪತ್ತ ನಾಕರ[1]ನೆರೆ ನಿಮಗೆ ಗೊತ್ತಾ ಉಮ್ಮ".

---

1 1924ನೇ ಇಸವಿಯಲ್ಲಿ ಬಂದ ನೆರೆ.

"ಗೊತ್ತುಂಟಲ್ಲ. ನಾವೆಲ್ಲೂ ಸೈದಾಲಿ ಕಾಕನ ಮನೆಗಲ್ಲವಾ ಓಡಿದ್ದು! ಅಯ್ಯೋ ದೇವರೇ ಆಗಲೇ ಅಲ್ಲವಾ ನಮ್ಮ ದೊಡ್ಡ ಹಲಸಿನ ಮರ ಮನೆ ಮೇಲೆ ಬಿದ್ದದ್ದು."

ಮುತ್ತಜ್ಜಿಗೆ ಆ ಪ್ರವಾಹವನ್ನು ಕುರಿತು ಹೇಳಬೇಕಾದದ್ದು ಎಷ್ಟೋ ಇದೆ.

ಆ ದಿನ ಕೊಟ್ಟಿಗೆಯೊಳಕ್ಕೆ ನೀರು ನುಗ್ಗಿತು.

ಮುತ್ತಜ್ಜಿಯ ಹಸುವಿನ ಕರು ಕೊಚ್ಚಿಕೊಂಡು ಹೋಯಿತು. ಬಡಗು ಕೊಲ್ಲಿಯವಳೊಬ್ಬಳು ನೀರಿನಲ್ಲಿ ಕೊಚ್ಚಿಹೋಗದಂತೆ ಹಲಸಿನ ಮರದ ಕೊಂಬೆಯ ಮೇಲೆ ಹತ್ತಿ ಕುಳಿತ ಕತೆಯನ್ನು ಮುತ್ತಜ್ಜಿ ವಿವರಿಸಿದಳು.

"ವಡಕ್ಕೇಪಾಟ್‌ನ ತೋಟ ಮುಳುಗ್ತು. ಹಾವಿನ ಮರಿ ಬಂದ ಹಾಗಲ್ಲವೇ ನೀರು ಬಂದದ್ದು?"

ನೆರೆ ತುಂಬ ದಿನ ಇರಲಿಲ್ಲ. ಬೇಗ ಇಳಿದು ಹೋಯಿತು.

ಪಾರುಕುಟ್ಟಿಗೆ ಆ ಪ್ರವಾಹವನ್ನು ಕುರಿತು ಒಂದು ಅಸ್ಪಷ್ಟವಾದ ನೆನಪು ಮಾತ್ರ ಯಾವಾಗಲೋ ಕಂಡ ಸ್ವಪ್ನದ ಹಾಗೆ ಉಳಿದಿದೆ. ಪ್ರಾಣ ಉಳಿಸಿಕೊಳ್ಳಲು ಎಷ್ಟೋ ಜನರು ಮನೆ ಮಠ ಬಿಟ್ಟು ಓಡಿ ಬಂದದ್ದು ತರವಾಡಿಗೆ. ಮನೆಯಿರುವುದು ಗದ್ದೆಯ ಪಕ್ಕದಲ್ಲಾದರೂ ಎತ್ತರವಾದ ಸ್ಥಳದಲ್ಲಿ ಅದಿರುವುದು. ಅಲ್ಲಿಗೆ ನೀರು ಹತ್ತಲಿಲ್ಲ. ಕೈಯಾಲೆಯಲ್ಲೂ ಪಡಸಾಲೆಯಲ್ಲೂ ಎಷ್ಟೋ ಜನರು ಮೂರು ದಿವಸಗಳ ವರೆಗೆ ಅಡಿಗೆ ಮಾಡಿಕೊಂಡು ಊಟ ಮಾಡುತ್ತ ಕಾಲ ಕಳೆದರು. ಹಸುಗಳ ಕೊಟ್ಟಿಗೆಯ, ಎತ್ತಿನ ಕೊಟ್ಟಿಗೆಯ ಹಜಾರದಲ್ಲಿ ಹೊಲೆಯರು ಬಂದು ತುಂಬಿಕೊಂಡರು. ಮೂರನೆಯ ದಿನ ನೀರು ಇಳಿಯತೊಡಗಿತು.

ಮುತ್ತಜ್ಜಿ, ಆನೆ ಕೊಚ್ಚಿಕೊಂಡು ಹೋದದ್ದನ್ನೂ ಕರುಣೂರ್ ಸೇತುವೆಯ ಹತ್ತಿರ ಒಬ್ಬ ಮಾಪಿಳ್ಳೆ ಹಗ್ಗ ಹಾಕಿ ಎಳೆದು ತಂದದ್ದನ್ನೂ ಕಣ್ಣಾರೆ ಕಂಡವಳ ಹಾಗೆ ಹೇಳುತ್ತಿದ್ದಳು. ಅಮ್ಮಿಣಿಯಮ್ಮ ಆಶ್ಚರ್ಯದಿಂದ ಕೇಳಿಸಿಕೊಳ್ಳುತ್ತಿದ್ದಳು. ಕೆಲವರಿಗೆ ನೆರೆ ಇಳಿದಾಗ ತೇಲಿ ಬಂದ ಹಣದ ಪೆಟ್ಟಿಗೆಗಳು, ಪಾತ್ರೆಗಳು ಸಿಕ್ಕಿದ ಕಥೆಗಳು—ನೀರು ತುಂಬಿಕೊಂಡಿದ್ದ ಮನೆಗಳಿಗೆ ತಿರುಗಿ ಹೋಗಿ ನೋಡಿದಾಗ ಅಡಿಗೆ ಮನೆಯಲ್ಲೂ ಕಂಬದಲ್ಲೂ ಹಾವುಗಳು ಹೆಡೆಬಿಚ್ಚಿ ಆಡುತ್ತಿದ್ದ ಘಟನೆಗಳು—ಮುತ್ತಜ್ಜಿಗೆ ಹೇಳುವುದಕ್ಕೆ ಇಂತಹವು ಎಷ್ಟೋ ಇವೆ.

ಊರಿನ ಜನರಿಗೆಲ್ಲ ಗಾಬರಿಯಾಗಿತ್ತು. ಕೆಲವರು ಹೊಳೆ ಪಕ್ಕದಲ್ಲೇ ಕಾದಿದ್ದರು, ನೀರು ಮೇಲೇರುತ್ತದೊ ಎಂದು ತಿಳಿಯಲು. ಹೊಳೆ ಕರ್ಕಟಮಾಸದಲ್ಲೂ ತುಲಾ ಮಾಸದಲ್ಲೂ ತುಂಬುವುದುಂಟು. ಆದರೆ ಇಂಥ ಅಪಾಯ ಸ್ಥಿತಿಗೆ ಬರುವುದಿಲ್ಲ. ಕಳೆದ ವರ್ಷ ಪೂಮಾನ್ ಜಮೀನಿಗೆ ಇನ್ನೇನು ನೀರು ನುಗ್ಗುತ್ತದೆ ಎನ್ನುವಷ್ಟಕ್ಕೆ ಬಂದಿತ್ತು. ಆಗ ಮಳೆ ನಿಂತಿತು. ಬಿಸಿಲು ಬಂದಿತು.

ಗದ್ದೆಯಲ್ಲಿ ಭತ್ತ ಹೊಡೆಯುವ ಕಾಲ. ರಸ್ತೆ ಕೊರೆದು ಹೋದರೆ ಗದ್ದೆಯೆಲ್ಲ ನೀರಿ

ನೊಳಗೆ. ಬೇಗ ನೀರು ಸಿಂಹ ಮಾಸದಲ್ಲಿ ಕೊಯ್ದು ಹಾಕಿ, ಕಳ[1]ದಲ್ಲಿ ತಂದು ಹಾಕಿದ ಭತ್ತ ವೆಲ್ಲ ಹೊಡೆದಾಗಿರುತ್ತಿತ್ತು. ಹೊಳೆ ಪಕ್ಕದ ಗದ್ದೆಗಳಲ್ಲಿ ಮರಳು ತುಂಬಿಕೊಳ್ಳದೆ ಇರುವುದೇ ಇಲ್ಲ. ಒಂದು ಬೆಳೆ ತೆಗೆಯಬೇಕಾಗಿದ್ದರೆ ಮರಳು ತೆಗೆದುಹಾಕಿ ಬೆಳೆ ಬೆಳಸ ಬೇಕಾಗಿತ್ತು.

ರಸ್ತೆಯಲ್ಲೂ ಅಂಗಡಿಗಳಲ್ಲೂ ಜನರು ಗಾಬರಿಗೊಂಡಿದ್ದಾರೆ.

ಮಧ್ಯಾಹ್ನ ಕಳೆದ ಮೇಲೆ ಮಳೆ ನಿಂತಿತು. ಆಕಾಶದಲ್ಲಿ ಸ್ವಲ್ಪ ಬೆಳಕು ಕಾಣಿಸಿತು. ಜನರಿಗೆ ಸ್ವಲ್ಪ ಧೈರ್ಯ ಬಂದಿತು. ಎರಡು ದಿನ ಮಳೆಯಿಲ್ಲದೆ ಬಿಸಿಲು ಬಂದರೆ ಸಾಕು ಅಪಾಯವಿಲ್ಲ.

ಆದರೆ ರಾತ್ರಿ ಎರಡು ಮೂರು ಗಂಟೆ ಕಳೆದಾಗ ಆಕಾಶದಿಂದ ಫಿರಂಗಿಯ ಹಾಗೆ ಸಿಡಿಲು ಕೇಳಿಸಿತು. ಒಂದು ಸಣ್ಣ ಮಳೆ ಬೀಳತೊಡಗಿತು. ಅದರ ಜೊತೆಗೆ ಗಾಳಿಯೂ.

ಮುತ್ತಜ್ಜಿ ಮಲಗಿಕೊಂಡು ಸ್ವಯಂ ಸಮಾಧಾನಪಟ್ಟುಕೊಳ್ಳಲು ಹೇಳಿದಳು.

"ಗಾಳಿ ಇದ್ದರೆ ಒಳ್ಳೆದು. ಮೋಡ ಚೆದರ್ತ್ವವೆ, ಮಳೆ ಜೋರಾಗಿ ಬೀಳೋದಿಲ್ಲ."

ಆದರೆ ಪಾರುಕುಟ್ಟಿ ಯೋಚಿಸುತ್ತಿದ್ದದ್ದು ಅದನ್ನಲ್ಲ. ಅಪ್ಪುಣ್ಣಿ. ಎಲ್ಲಿ ಮಲಗಿರ ಬಹುದು? ಮಳೆಗಾಳಿ ಇರುವ ಅಂಗಳದಲ್ಲಿ ಕುಳಿತಿದ್ದರೊ? ದೇವರೇ !

ಕಾಡು ಬೆಕ್ಕುಗಳ ಜಗಳದ ಶಬ್ದದಂತೆ ಆಕಾಶದಿಂದ ಶಬ್ದ ಕೇಳಿ ಬರುತ್ತಿತ್ತು. ಕಡೆ ಯಲ್ಲಿ ಕಣ್ಣು ಕೋರೈಸುವ ಮಿಂಚು. ಮತ್ತೂ ಒಂದು ಭಯಂಕರವಾದ ಸಿಡಿಲು ಬಡಿವ ಶಬ್ದ ಕೇಳಿಸಿತು.

"ನಾರಾಯಣ—ನಾರಾಯಣ".

ಮುತ್ತಜ್ಜಿ ನಾಮ ಜಪ ಮಾಡುವುದಕ್ಕೆ ತೊಡಗಿದಳು. ಪಾರುಕುಟ್ಟಿ ಎದ್ದು ನಿಂತು. ಒಂದು ಕಡೆಗೆ ನಿಲ್ಲಿಸಿದ್ದ ತಡಿಕೆಯನ್ನು ತಂದು ಕಿಟಿಕಿಯನ್ನು ಮುಚ್ಚಿದಳು. ಗಾಳಿ ಜೋರಾಗಿ ಬೀಸುತ್ತಿತ್ತು. ಬಾಳೆ ಮರಗಳು ಗಾಳಿಗೆ ಓಲಾಡುತ್ತಿದ್ದುವು.

ಸಣ್ಣಗೆ ಬೀಳುತ್ತಿದ್ದ ಮಳೆ ಜೋರಾಗಿ ಬೀಳತೊಡಗಿತು. ಗಾಳಿಯೂ ಮಳೆಯೂ ಮತ್ಸರಿಸುತ್ತಿದ್ದಂತೆ ತೋರಿತು. ಛಾವಣಿಯ ಮೇಲಿಂದ ಮಳೆ ಹನಿ ಬೀಳುವ ಶಬ್ದ ಜೋರಾಗಿ ಕೇಳಿಸುತ್ತಿತ್ತು.

ಕಿಟಿಕಿಯ ಮುಂದೆ ನಿಲ್ಲಿಸಿದ್ದ ತಡಿಕೆಯ ಪಕ್ಕದ ಸಂದಿನಿಂದ ನೋಡಿದಾಗ ಎಲ್ಲೆಲ್ಲಿಯೂ ಕತ್ತಲೆಯ ಕಡಲು. ಆಕಾಶದಲ್ಲಿ ಗುಡುಗುಟ್ಟುವ ಶಬ್ದ......ಮಳೆಯ ಶಬ್ದ...... ಬಾಳೆಯ ಮರಗಳನ್ನು ಅತ್ತಿತ್ತ ತೂಗಾಡಿಸುತ್ತ ಬೀಸುತ್ತಿದ್ದ ಗಾಳಿಯ ಶಬ್ದ ಎಲ್ಲವೂ ಒಟ್ಟುಗೂಡಿ ಅವಳಿಗೆ ವಿಪರೀತ ಗಾಬರಿಯನ್ನುಂಟುಮಾಡಿದುವು. ಹೊರಗೆ ಕವಿದಿದ್ದ

---

1 ಕಣ.

ಕತ್ತಲೆಯ ಕಡಲನ್ನು ಕಿಟಕಿಯ ಮೂಲಕ ನೋಡುತ್ತಿದ್ದಾಗ ಒಂದು ಮಿಂಚು ಥಳಾರನೆ ಹೊಳೆಯಿತು.

ಕಾಳರಾತ್ರಿಯ ಕಾವಲುಗಾರರಂತೆ ಮರಗಳ ಕರಿಯ ಆಕೃತಿ ಒಂದು ಕ್ಷಣ ಕಾಣಿಸಿತು. ಮತ್ತೆ ಕತ್ತಲೆ. ಕಣ್ಣಿನೊಳಗೂ ಕತ್ತಲೆ ಆವರಿಸಿದಂತಿತ್ತು.

"ಬಿರುಗಾಳಿ ಬೀಸುತ್ತೆ ಅಂತ ಕಾಣುತ್ತೆ ಪಾರುಕುಟ್ಟೀ. ಈ ಸಲ ಬಿರುಗಾಳಿ ಬೀಸುತ್ತೆ ಅಂತ ಜ್ಯೋತಿಷ್ಯದವ್ನು ಹೇಳಿದ್ದ" ಮುತ್ತಜ್ಜಿ ಕಣ್ಣು ಮುಚ್ಚಿಕೊಂಡೇ ಹೇಳಿದಳು.

ಪಾರುಕುಟ್ಟಿ ದೀಪಹಚ್ಚಿ ತಲೆಯ ಹತ್ತಿರ ಗಾಳಿ ಬೀಸದ ಕಡೆಗೆ ದೂರ ಸರಿಸಿಟ್ಟಳು.

ಮುತ್ತಜ್ಜಿ ಕಣ್ಣು ಮುಚ್ಚಿ ಮಲಗಿಕೊಂಡು ನಾಮ ಜಪ ಮಾಡುತ್ತಿದ್ದಳು.

ತೋಟದಲ್ಲಿ ಒಂದು ತೆಂಗಿನ ಗರಿ ಬಿದ್ದ ಶಬ್ದ ಕೇಳಿಸಿತು. ಸ್ವಲ್ಪ ಹೊತ್ತಿನಲ್ಲೇ ಪಪ್ಪಾಯಿ ಮರ ಮುರಿದು ಬಾಳೆಯ ಮರಗಳ ಮೇಲೆ ಬೀಳುವುದೂ ಕೇಳಿಸಿತು.

ಮುತ್ತಜ್ಜಿ ಕಣ್ಣು ತೆರೆದಳು. ಭಯದಿಂದ ಗಾಬರಿಗೊಂಡು ನೋಡುತ್ತಿದ್ದಳು.

"ಪಾರುಕುಟ್ಟೀ ಮನೆ ಮುರುಕೊಂಡು ನಮ್ಮ ಮ್ಯಾಲೆ ಬಿದ್ದರೂ?"

"ಹೆದರಿಕೋ ಬ್ಯಾಡಿ ಮುತ್ತಜ್ಜೀ"

"ನಾರಾಯಣ—ನಾರಾಯಣ—ನಾರಾಯಣ".

ಗಾಳಿ ಕಿಟಕಿಯ ಮೂಲಕ ಜೋರಾಗಿ ಬೀಸಿದಾಗ ದೀಪ ಆರಿ ಹೋಯಿತು. ಮುತ್ತಜ್ಜಿಯ ನಾಮಜಪ ಮತ್ತೂ ಗಟ್ಟಿಯಾಗಿ ಕೇಳಿಸತೊಡಗಿತ .

ಹೊರಗಿನ ಅಂಗಳದಿಂದ ಪ್ರತ್ಯೇಕವಾದ ಒಂದು ಶಬ್ದ ಕೇಳಿಸಿದ ಹಾಗಾಯಿತಲ್ಲಾ ಎಂದು ಪಾರುಕುಟ್ಟಿಗೆ ಸಂಶಯವುಂಟಾಯಿತು.

ಏನಿರಬಹುದು? ಅವಳು ಸರಿಯಾಗಿ ಕಿವಿಗೊಟ್ಟು ಕೇಳಿದಳು. ನಿಜ, ಯಾರೋ ಕರೆಯುತ್ತಿದ್ದಾರೆ—ಮತ್ತೂ ಅವಳು ಕಿವಿಗೊಟ್ಟು ಕೇಳಿದಳು. ಆ ಮೇಲೆ ದೀಪ ಹತ್ತಿಸಿ ಮುತ್ತಜ್ಜಿಯ ಹತ್ತಿರ ಹೇಳಿದಳು.

"ಯಾರೋ ಹೊರಗೆ ಕರೆಯೋ ಹಾಗಿದೆ ಮುತ್ತಜ್ಜಿ".

ಮುತ್ತಜ್ಜಿ ಕಣ್ಣು ಬಿಡದೆ, ನಾಮ ಜಪವನ್ನು ನಿಲ್ಲಿಸದೆ ಹಾಗೆಯೇ ಮಲಗಿದಳು.

ಹೊರಗಿನ ಭಯಂಕರವಾದ ಗಾಳಿಗಿಂತಲೂ ಹೆಚ್ಚಾಗಿ ಪಾರುಕುಟ್ಟಿಗೆ ಭಯವನ್ನುಂಟು ಮಾಡಿದುದು ಮುತ್ತಜ್ಜಿಯ ನಾಮಜಪವಾಗಿತ್ತು.

ಸಂಶಯ ಪಡುತ್ತ ಹೊರಗಿನ ಬಾಗಿಲನ್ನು ಸ್ವಲ್ಪ ತೆರೆದಳು. ಆಗ ಪಡಸಾಲೆಯಲ್ಲಿ ತೊಯ್ದು ಹೋಗಿದ್ದ ಆಮಿನುಮ್ಮ ಟೊಪ್ಪಿ ಕೊಡೆ, ಲಾಟೀನು ಹಿಡಿದುಕೊಂಡು ನಿಂತಿದ್ದಳು.

"ಒಳ್ಳೆ ಕಷ್ಟ ಬಂತಲ್ಲ ಪಾರುಕುಟ್ಟಿ ಅಮ್ಮ."

ಆಮಿನುಮ್ಮನ ಶರೀರದಿಂದ ನೀರು ಪಡಸಾಲೆಯಲ್ಲಿ ತೊಟ್ಟಿಕ್ಕುತ್ತಿತ್ತು. ಅವರು ನಡುಗುತ್ತಿದ್ದರು. ಅಳುತ್ತಲೂ ಇದ್ದರು.

"ಈಗ ಮಾಪಿಳ್ಳೆ ಬಂದದ್ದು. ರಸ್ತೆಲ್ಲ ಕೊಚ್ಚಿಕೊಂಡು ಹೋಗ್ತಾ ಅದೆ ಅಂದ್ರು. ಬೇಗನೆ ಮನೆಬಿಟ್ಟು ಹೋಗ್ಬೇಕು."

"ಎಲ್ಲಿಗೆ ಹೋಗೋದು ಉಮ್ಮಾ?"

"ಎಲ್ಲಿಗಾದ್ರೂ ಹೋಗ್ಬೇಕು. ಕುನ್ನಿನ್ ಪುರದ ಹತ್ರ ಯಾರದ್ದಾದ್ರೂ ಗುಡಿಸಿಲಿಗೆ ಹೋದರಾಯ್ತು. ನಮ್ಮ ಹುಡುಗ್ರೆಲ್ಲ ಸಾಮಾನು ಕಟ್ತಿದ್ದಾರೆ. ಕೋಳಿ ಆಡು ಏನು ಮಾಡೋದೋ ಕಾಣೆ."

ಪಾರುಕುಟ್ಟಿ ಯಾವ ಗಾಬರಿಯೂ ಇಲ್ಲದೆ ನಿಂತಿರುವುದನ್ನು ನೋಡಿ ಆಮಿನುಮ್ಮ ಅವಸರ ಮಾಡಿದಳು.

"ಬೇಗ ಹೊರಡಿ ಪಾರುಕುಟ್ಟೀ. ಇನ್ನು ಸ್ವಲ್ಪ ಹೊತ್ತು ಕಳೆದರೆ ಏನಾದೀತೋ ದೇವರಿಗೇ ಗೊತ್ತು.

"ನಾನೆಲ್ಲೂ ಬರೋದಿಲ್ಲ, ಉಮ್ಮ."

"ನಿಮಗೆಲ್ಲೋ ಹುಚ್ಚು. ಬೇಗ ಹೊರಡಿ. ಕುಂಡಂಗಲ್ಲಿನ ಹೆಂಗಸ್ರೂ ಮಕ್ಕಳೂ ಹೊಂಟ್ರು. ಗಂಡಸರು ದನಕರು ಹೊಡಕೊಂಡು ಹೋಗ್ತಿದ್ದಾರೆ."

ಬೇಲಿಯ ಆಚೆಯ ದಾರಿಯಲ್ಲಿ ಸುರಿಯುತ್ತಿರುವ ಮಳೆಯಲ್ಲಿ ಲಾಂದ್ರದ ಬೆಳಕಿನಲ್ಲಿ ಜನರು ಗಂಟು ಮೂಟೆ ಹೊತ್ತುಕೊಂಡು ಹೋಗುತ್ತಿದ್ದುದು ಕಾಣಿಸುತ್ತಿತ್ತು.

"ಯಾಕೆ ಪಾರುಕುಟ್ಟಿ ಅಮ್ಮ ಸುಮ್ಮಗೆ ನಿಂತುಕೊಂಡಿರಿ?

"ನಾನೆಲ್ಲಿಗೂ ಬರೋದಿಲ್ಲ ಉಮ್ಮ ನೀವು ಹೋಗಿ."

"ಬೇಗ ಬಾಮ್ಮ."

"ಪಾರುಕುಟ್ಟಿ ಅಮ್ಮ."

"ಉಮ್ಮ ಹೋಗಿ. ಮುತ್ತಜ್ಜೀನೂ ಕರಕೊಂಡು ಹೋಗಿ."

ಅಷ್ಟರಲ್ಲಾಗಲೇ ಮುತ್ತಜ್ಜಿ ಕಂಬಳಿ ಹೊದೆದುಕೊಂಡು ಬೆನ್ನು ಗೂನು ಮಾಡಿಕೊಂಡು ಮೆಟ್ಟಿಲಿಳಿದು ಅಂಗಳ ತಲಪಿ ಆಗಿತ್ತು.

"ನನ್ನ ಎಲೆ ಅಡಿಕೆ ಪೆಟ್ಟಿಗೆ ಕೊಟ್ಟಿಗೇಲೇ ಉಳೀತಲ್ಲ ಉಮ್ಮ."

"ಸುಮ್ಮನೆ ಬರಾಕಾಗೋದಿಲ್ಲಾ ಮುದುಕಿ? ಪ್ರಾಣ ಹೋಗ್ತಿರುವಾಗ ಎಲೆ ಅಡಿಕೆ ಪೆಟ್ಟಿಗೆ!"

ಗಾಳಿಯ ಶಬ್ದಕ್ಕಿಂತಲೂ ಹೆಚ್ಚು ಗಟ್ಟಿಯಾಗಿ ಆಮಿನುಮ್ಮನ ಗಂಡ ಆ ಕಡೆಯಿಂದ ಕರೆದ.

"ಹೋಗಿ ಉಮ್ಮ ನೀವು."

"ಅಮ್ಮ, ಕುಟ್ಟಿ ನಿಮಗಿಲ್ಲಿ ಯಾರು ದಿಕ್ಕು?"

"ದೇವರಿದ್ದಾನೆ ಉಮ್ಮ. ನಾನು ಬರೋದಿಲ್ಲ. ನೀವು ಹೋಗಿ."

"ಓ ಅಲ್ಲಾ !" ಎಂದು ಮಾತ್ರವೇ ಆಮಿನುಮ್ಮನಿಗೆ ಹೇಳಲು ಸಾಧ್ಯವಾಯಿತು.

ಮುತ್ತಜ್ಜಿಯೂ ಆಮಿನುಮ್ಮನೂ ಟೊಪ್ಪಿ ಕೊಡೆಯ ಅಡಿಯಲ್ಲಿ ಹೊರಟರು. ಮಳೆ ನೀರು ಬಿದ್ದು ಲಾಂದ್ರದ ಗಾಜು ಒಡೆಯಿತು. ನೀರು ಬಿದ್ದು ಬತ್ತಿಯೂ ಆರಿ ಹೋಯಿತು. ಆಮಿನುಮ್ಮ ಆಗಲಾರದರೂ ಪಾರುಕುಟ್ಟಿ ಬರಬಹುದೆಂದು ತಿರುಗಿ ನೋಡಿದಾಗ ಪಾರುಕುಟ್ಟಿ ಹೇಳಿದಳು.

"ಏನೂ ಚಿಂತೆ ಮಾಡಬೇಡಿ. ಬದುಕಿದರೆ ತಿರುಗಿ ಕಾಣ್ತೇವಂತೆ."

ಕತ್ತಲೆಯಲ್ಲಿ ಅವರು ಕಣ್ಣನ್ನು ಒರಸಿಕೊಂಡರು. ಅದನ್ನು ಪರಸ್ಪರ ನೋಡಲಿಲ್ಲ. ಆ ನೆಳಲುಗಳು ಕತ್ತಲೆಯಲ್ಲಿ ಮರೆಯಾಗುವ ವರೆಗೆ ಪಾರುಕುಟ್ಟಿ ಹೊರಗಡೆ ನಿಂತಿದ್ದಳು. ಆ ಮೇಲೆ ಒಳಗೆ ಬಂದು ಬಾಗಿಲು ಹಾಕಿದಳು.

ಸಂಕಟ, ಭಯ ಎಲ್ಲವೂ ಮಾಯವಾಗಿದ್ದುವು. ಏನು ಬೇಕಾದರೂ ಬರಲಿ ಎನ್ನುವ ವ್ಯಥ ನಿರ್ಧಾರ ಮಾತ್ರ ಅವಳಲ್ಲಿ ಉಳಿದಿತ್ತು.

ಊರೆಲ್ಲ ನೀರಿನಲ್ಲಿ ಮುಳುಗಿತು. ತೇಲಿ ಹೋಗುತ್ತಿರುವ ಒಂದು ಮರದ ತುದಿ ಯಲ್ಲಿ ಅವಳು ಕುಳಿತಿದ್ದಾಳೆ. ಕೈ ಬಿಟ್ಟರೆ ಮುಗಿಯಿತು. ಕೈ ಬೆರಳುಗಳು ಮರಗಟ್ಟುತ್ತಿವೆ. ಒಂದು ಸುಳಿ ಮರವನ್ನು ಬಳಸಿದಾಗ ಕೈ ಬಿಟ್ಟು ಹೋಯಿತು. ಅಗಾಧತೆಗೆ ಕೊಂಡು ಹೋಗುತ್ತಿದೆ—ಅಯ್ಯೋ !

ಅವಳ ತಲೆಗೂದಲು ನೆಟ್ಟಗಾದ ಹಾಗಾಯಿತು. ಆಗ ತಿಳಿಯಿತು ತಾನು ಸ್ವಪ್ನ ಕಂಡದ್ದು ಎಂದು.

ಎದ್ದು ಚಾಪೆಯ ಮೇಲೆ ಕುಳಿತುಕೊಂಡಾಗಲೂ ಶರೀರದ ನಡುಕ ಹೋಗಿರಲಿಲ್ಲ.

ಬಾಗಿಲು ತೆರೆದು ಹೊರಗೆ ಬಂದು ನೋಡಿದಾಗ ತಲೆ ಸುತ್ತು ಬಂದ ಹಾಗಾಯಿತು. ಅಂಗಳಕ್ಕೆ ನೀರು ನುಗ್ಗಿದೆ. ಯಾವ ಕಡೆಗೆ ನೋಡಿದರೂ ನೀರು. ದಡ ಕಾಣದ ಕಡಲಿನ ನಡುವಿನಲ್ಲಿ ಮುಳುಗಿ ಹೋಗುತ್ತಿರುವ ಸಣ್ಣ ದ್ವೀಪದಲ್ಲಿ ತಾನು ನಿಂತಿದ್ದೇನೆ ಎನ್ನಿಸಿತು. ಹಿಂದಿನ ದಿನ ಪಸಿರಾಗಿ ಕಾಣುತ್ತಿದ್ದ ಗದ್ದೆಯಲ್ಲಿ ನೋಡಿದರೂ ನೀರು. ನಿನ್ನೆ ಹಸಿರಾಗಿ ಕಂಗೊಳಿಸುತ್ತಿದ್ದ ಗದ್ದೆಗಳಲ್ಲಿ ಈಗ ದೋಣಿಗಳು ಸಂಚರಿಸುತ್ತಿವೆ.

ಅಕ್ಕ ಪಕ್ಕದ ಮನೆಗಳೆಲ್ಲ ಶೂನ್ಯವಾಗಿವೆ. ಶಬ್ದವಿಲ್ಲ, ಹೊಗೆಯಿಲ್ಲ. ನೀರು ತುಂಬಿದ ಗದ್ದೆಗಳಲ್ಲಿ ಸಂಚರಿಸುತ್ತಿರುವ ಸಣ್ಣ ಸಣ್ಣ ದೋಣಿಗಳಲ್ಲಿ, ದೂರದಲ್ಲಿ ಮನುಷ್ಯರು ಕಾಣಿಸುತ್ತಿದ್ದಾರೆ.

ಬುಸುಗುಟ್ಟುವ ಮಳೆ ನಿಂತಿಲ್ಲ. ರಾತ್ರಿ ಬೀಸಿದ ಗಾಳಿಗೆ ಹಿತ್ತಿಲಿನ ಬಾಳೆ ಮರಗಳೆಲ್ಲ ಮುರಿದು ಬಿದ್ದಿವೆ. ವರೆಯ ಹತ್ತಿರ ಬೆಳೆದ ಬಿದಿರು ಮೆಳೆಯ ಬಿದಿರುಗಳೆಲ್ಲ ಅತ್ತ ಇತ್ತ

ಆಗಿವೆ. ದೂರದ ಗದ್ದೆಗಳಿಂದ ಗಾಳಿ ಹೊತ್ತು ತಂದ ಮಾವಿನ ಎಲೆಗಳು ಅಂಗಳದಲ್ಲಿ ಹರಡಿಕೊಂಡು ಬಿದ್ದಿವೆ. ಮುತ್ತಜ್ಜಿ ಕೊಟ್ಟಿಗೆಯ ಛಾವಣಿಯಲ್ಲಿ ಮೂರೋ ನಾಲ್ಕೋ ಪಟ್ಟಿಗಳು ಮಾತ್ರ ಉಳಿದಿವೆ.

ನೀರು ಇನ್ನೂ ನುಗ್ಗುತ್ತದೆ......

ಕರೆದರೆ ಯಾರಿಗೂ ಕೇಳಿಸುವುದಿಲ್ಲ. ಭಯವಿಲ್ಲ, ಶಾಂತವಾದ ಒಂದು ಯಾತನೆ ಉಂಟಾದದ್ದು. ಅದೇ ತನ್ನ ಅಂತ್ಯವಾಗಿರಬೇಕು.

ಹಿಂದಿನ ದಿನ ಉಳಿದಿದ್ದ ಒಂದು ಹಿಡಿ ಅಕ್ಕಿ ಒಳಗಡೆ ಓಲೆಗರಿಯ ಚೀಲದಲ್ಲಿದೆ. ಆದರೆ ಒಲೆಯಲ್ಲಿ ಬೆಂಕಿ ಹೊತ್ತಿಸುವುದಕ್ಕಾಗಲೀ ಗಂಜಿಗಿಡುವುದಕ್ಕಾಗಲೀ ಮನಸ್ಸು ಬರಲಿಲ್ಲ. ಅನಂತವಾದ ಜಲರಾಶಿಯ ಕಡೆಗೆ ನೋಡುತ್ತ ಜಗಲಿಯನ್ನು ಹಿಡಿದುಕೊಂಡು ನಿಂತಿದ್ದಳು.

ಅಮಿನುಮ್ಮನ ಹಿತ್ತಿಲಿಗೆ ನೀರು ನುಗ್ಗಿದೆ. ಮುಂಭಾಗದ ಗೋಡೆ ಬೀಳುವುದು ಮಾತ್ರ ಬಾಕಿ. ಒಳಕ್ಕೆ ನೀರು ನುಗ್ಗುತ್ತಿದೆ. ದೂರದಲ್ಲಿ ಎಲ್ಲೋ ಒಂದು ಆಡಿನ ಶಬ್ದ ಕೇಳಿಸಿತು.

ದೀನಸ್ವರ. ಮರಣ ಸಮೀಪಿಸಿರುವುದನ್ನು ಆ ಮೃಗ ತಿಳಿದಿರಬೇಕು.

ದೂರದಲ್ಲಿ ಸಣ್ಣ ಸಣ್ಣ ದೋಣಿಗಳು ಸಂಚರಿಸುತ್ತಿವೆ.

ಒಂದು ಆಡಿನ ಮರಿ ಅರಚುವ ಧ್ವನಿ. ಆಡಿನ ಮರಿಯ ಸ್ವರವೇ ಅದು? ಅಥವಾ ಮಗು ಅಮ್ಮಾ ಎಂದು ಕರೆದದ್ದೋ. ಮಧ್ಯಾಹ್ನವಾದಾಗ ಸಣ್ಣ ದೋಣಿಗಳು ಕಾಣ ವಾದುವು. ಸಂಚಾರವಿಲ್ಲ. ಆಡಿನ ಮರಿಯ ಧ್ವನಿಯೂ ಕೇಳಿಸುವುದಿಲ್ಲ. ಇದು ಸತ್ತ ಮನೆಯ ನಿಶ್ಶಬ್ದತೆಯಲ್ಲವೆ? ಮರಣ ಕಾದಿರುವ ಒಂದು ಕೊಠಡಿಯ ಒಳಗೆ ಪರಮ ಶಾಂತತೆ.

ಹಿತ್ತಿಲಿನ ಗೋಡೆ ಬಿದ್ದ ಶಬ್ದ. ಮುಂಭಾಗದ ಗೋಡೆಯೂ ಬಿದ್ದಿತು. ಉಪವಾಸ ಬಿದ್ದ ಹಾವುಗಳು ನುಗ್ಗಿದಂತೆ ನೀರು ಬಿರುಕುಗಳ ಮೂಲಕ ಹರಿದು ಅಂಗಳಕ್ಕೆ ನುಗ್ಗಿತು. ನೋಡುತ್ತಾ ಇದ್ದಂತೆ ಅಂಗಳ ಹಿತ್ತಿಲಿನ ಗೋಡೆ ಎಲ್ಲವೂ ನೀರಿನಲ್ಲಿ.

ಮೆಟ್ಟಿಲಿನ ಹತ್ತಿರಕ್ಕೂ ನುಗ್ಗಿತು. ಇನ್ನು ಅಂತ್ಯ ಸಮೀಪಿಸಿತು ಎಂದುಕೊಂಡಳು. ಒಳಗೆ ಹೋದಳು. ಹೊರಗೆ ನೋಡಲು ಧೈರ್ಯ ಬರಲಿಲ್ಲ. ನೀರು ನುಗ್ಗುತ್ತಿದೆ. ಇನ್ನೆಲ್ಲೋ ಕೆಲವು ನಿಮಿಷಗಳು ಮಾತ್ರ ಉಳಿದಿವೆ.

ಸಾಯಂಕಾಲ ಸಮೀಪಿಸಿದಾಗ ಒಂದು ದೊಡ್ಡ ಶಬ್ದ ಕೇಳಿಸಿತು. ತೆಂಕು ಭಾಗದ ಕಿಟಕಿಯ ಕಂಡಿಯಲ್ಲಿ ನೋಡಿದಳು. ಕೊಟ್ಟಿಗೆ ಬಿದ್ದು ಹೋಯಿತು.

ಕತ್ತಲೆ ಸಮೀಪಿಸಿತು. ಮಳೆ ನಿಂತಿತು. ಗಾಳಿ ಮಳೆಯ ಶಬ್ದವಿಲ್ಲ. ಆಕಾಶ ನಿರ್ಮಲ ವಾಗಿದೆ. ನೀರು ಹೊರಗಿನ ಗೋಡೆಗಳನ್ನು ಮೆಲ್ಲಗೆ ಮುಟ್ಟುವ ಶಬ್ದ ಕೇಳಿಸತೊಡಗಿತು. ಅವಳ ಮನಸ್ಸು ಕತ್ತಲೆಯಂತೆ ಶೂನ್ಯವಾಗಿತ್ತು......

ಹೊರಗಿನ ಗೋಡೆಗಳನ್ನು ನೀರು ಬಡಿಯುವ ಶಬ್ದ ಸ್ಪಷ್ಟವಾಗಿ ಕೇಳಿಸತೊಡಗಿತು. ಕಾಲಿನಿಂದ ಒದೆವ ಹಾಗೆ ಹತ್ತಿರ......ಹತ್ತಿರ......ಬರುತ್ತಿರುವ ನೀರು ಕಾಲಿನಿಂದ ಒದೆವಂತೆ ಶಬ್ದ ಮಾಡುತ್ತ ನುಗ್ಗುತ್ತಿತ್ತು.

ಯಾವುದನ್ನೂ ಯೋಚಿಸಬಾರದು ಎಂದುಕೊಂಡಿದ್ದಾಳೆ......ಆದರೂ ಕಳೆದು ಹೋದ ಕಾಲದಲ್ಲಿ ನೆನಪಾಗುತ್ತಿದೆ......ಕೆಲವು ಆಕೃತಿಗಳೂ ಚಿತ್ರಗಳೂ ಮಧ್ಯೆ ಮಧ್ಯೆ ಕಾಣಿಸಿಕೊಂಡು ಮರೆಯಾಗುತ್ತಿವೆ. ಒಂದು ಚೌಕಟ್ಟಿನ ಮನೆ. ಅದರ ಕಾವಲು ನಿಂತ ದೊಡ್ಡ ಕಂಬಗಳು ಅವುಗಳ ಮಧ್ಯೆ ಅಂಗಳ—ಅಂಗಳದಲ್ಲಿ ಮಲ್ಲಿಗೆ ಬಳ್ಳಿ......ತಾಂಬೂಲ ಸವಿದ ತುಟಿಗಳೂ ವಿಶಾಲವಾದ ಎದೆಯೂ ಉಳ್ಳ ಒಬ್ಬ ಮನುಷ್ಯನ ಆಕೃತಿ......... ಮೋಡಗಳು ತುಂಬಿಕೊಂಡು ಭಾರವಾಗಿದ್ದ ಆಕಾಶದ ಅಡಿಯಲ್ಲಿ ಬೆವರಿದ ತೋಳಿನಲ್ಲಿ ಜೋತುಬಿದ್ದ ಒಂದು ಹೆಣ್ಣು......ಬಿಚ್ಚಿದ ಮುಡಿ, ನರಗಳು ಕಾಣಿಸುವ ಹಣೆಯ ಒಂದು ಮುಖ. ಅದು ದೂರಕ್ಕೆ ಹೋಗುತ್ತಿವೆ......

ನಾಳೆ ಶವ ತೇಲಬಹುದು. ನೆರೆ ಇಳಿದಾಗ ಎಲ್ಲಿಯೋ ಒಂದು ಬೇಲಿಯಲ್ಲಿ ಅಥವಾ ಕೇದಿಗೆ ಕಾಡಿನಲ್ಲಿ ಬಿದ್ದಿರಬಹುದು. ಕೇಳಿ ತಿಳಿದವರಿಲ್ಲ. ಕಂಡು ಎತ್ತುವವರಿಲ್ಲ, ಯಾರೂ ಇಲ್ಲ......

ಅವನನ್ನು ಒಂದು ಸಲ ಕಂಡಿದ್ದಿದ್ದರೆ......

ವೇದನೆಯನ್ನು ಸಹಿಸಬೇಕಾಗಿ ಬಂದರೂ ವಿಚಲಿತಳಾಗಲಿಲ್ಲ. ಅವನಿಗೆ ತನ್ನ ದುಃಖ ತಿಳಿಯದಿರಲಿ. ನಂಬೂದಿರಿ ಮನೆಯಲ್ಲಿ ಭತ್ತ ಕುಟ್ಟುವ ದಾಸಿಯ ಮಗನಾಗಿ ಅವನು ಬೆಳೆಯುವುದು ಬೇಡ. ಅಪ್ಪಣ್ಣಿ ಸುಖವಾಗಿರಲಿ.

ಅವಳು ಮತ್ತೂ ಪ್ರಾರ್ಥಿಸಿದಳು. "ಭಗವತೀ ಅವನಿಗೆ ಒಳ್ಳೆಯದನ್ನು ಮಾಡು."

ತಲೆದಿಂಬಿನಲ್ಲಿ ಮುಖವನ್ನಿಟ್ಟು ಚಾಪೆಯ ಮೇಲೆ ಮುಖ ಅಡಿಯಾಗಿ ಮಲಗಿದಳು.

ನಿದ್ದೆ ಬಂದರೆ ಆ ಮೇಲೆ ಏನೂ ತಿಳಿಯುವುದಿಲ್ಲ. ತಣ್ಣನೆಯ ಕೈಗಳಂತೆ ನೀರು ಬಂದು ದೇಹವನ್ನು ಮುಟ್ಟುವ ಮೊದಲೇ ನಿದ್ದೆ ಮಾಡಿಬಿಡಬೇಕು. ಎಷ್ಟೋ ಸಲ ನಿದ್ದೆ ಮಾಡುವಾಗ ಗೋಡೆ ಬೀಳುವ ಶಬ್ದ ಕೇಳಿಸುವುದು. ಇನ್ನೆಲ್ಲೋ ಕೆಲವೇ ನಿಮಿಷಗಳು......

ಚಿಕ್ಕವಳಾಗಿದ್ದಾಗ, ನಿದ್ದೆ ಬರದೇ ಮಲಗಿರುತ್ತಿದ್ದಾಗ ಅಮ್ಮ 'ನಮಶ್ಶಿವಾಯ' ಹೇಳಿಕೊಟ್ಟಿದ್ದಳು. ಕಣ್ಣು ಮುಚ್ಚಿಕೊಂಡು ಜಪಿಸಿದಳು—

"ನಮಶ್ಶಿವಾಯ.........ನಮಶ್ಶಿವಾಯ."

ಗೋಡೆಗಳು ನಿಂತೇ ಇವೆ. ತಣ್ಣನೆಯ ಕೈಗಳ ಹಾಗೆ ನೀರು ಹತ್ತಿರ ಹತ್ತಿರ ಬರುತ್ತಿದೆ.

"ನಮಶ್ಶಿವಾಯ......ನಮಶ್ಶಿವಾಯ."

ಶರೀರ ತಣ್ಣಗಾದ ಹಾಗಾಯಿತು.

ಮುಚ್ಚಿದ ಕಣ್ಣು ರೆಪ್ಪೆಗಳೊಳಗೆ ವರ್ಣ ಗೋಳಗಳು ಕಾಣಿಸುತ್ತಿದ್ದುವು. ಆಳಕ್ಕೆ ಇಳಿಯುತ್ತಿದ್ದೇನೆ.

ಆಗ,

"ಪಾರುಕುಟ್ಟಿ ಅಮ್ಮಾ."

ದೇಹ, ಮನಸ್ಸುಗಳು ನಡುಗಿದುವು. ಮನುಷ್ಯನ ಶಬ್ದ.

ಕಣ್ಣು ತೆರೆಯಲಾಗುತ್ತಿಲ್ಲ.

ಶರೀರದಲ್ಲಿ ತೀರ ನಿಶ್ಶಕ್ತಿ.

"ಪಾರುಕುಟ್ಟಿ ಅಮ್ಮಾ."

ಕಷ್ಟಪಟ್ಟು ಕಣ್ಣು ತೆರೆದಳು; ಎದ್ದು ನಿಂತಳು. ದೇಹ ವಿಡೀ ಗಾಳಿಗೆ ಸಿಕ್ಕಿದ ಓಲೆಗರಿಗಳಂತೆ ನಡುಗುತ್ತಿತ್ತು. ಮಾತನಾಡಲಾಗುತ್ತಿಲ್ಲ. ದೀಪ ಎಲ್ಲಿಟ್ಟದ್ದು ಎನ್ನುವುದೂ ಮರೆತು ಹೋಗಿದೆ. ತಡವರಿಸುತ್ತಾ ಬಾಗಿಲಿನ ಅಗುಳಿ ತೆಗೆದಳು. ಯಾರೋ ನಿಂತಿದ್ದಾರೆ. ಒಳಗೂ ಕತ್ತಲೆ, ಹೊರಗೂ ಕತ್ತಲೆ.

"ಅಯ್ಯಮ್ಮಾ !"

"ನಾನು, ಹೆದರಿಕೋ ಬೇಡಿ. ಶಂಕರ ನಾಯರ್."

ಕಾಲುಗಳು ನಡುಗಲಾರಂಭಿಸಿದ್ದುವು. ಉಳಿದಿದ್ದ ಒಂದೇ ಒಂದು ಬೇರು ಕಿತ್ತು ಬೀಳುವಂತೆ ಕೆಳಗೆ ಬೀಳುತ್ತಿದ್ದಳು. ಕೆಳಗೆ ಬೀಳಲಿಲ್ಲ. ಬೀಳುವುದಕ್ಕೆ ಮೊದಲು ಎರಡು ಬಲವಾದ ಕೈಗಳು ತಬ್ಬಿ ಹಿಡಿದುವು.

"ದೋಣಿ ತಂದಿದ್ದೀನಿ ಹೊರಡಿ."

ಮಾತನಾಡ ಬೇಕೆನ್ನಿಸಿತು. ಆಗಲಿಲ್ಲ. ಸಂಪೂರ್ಣವಾಗಿ ತೇಲಿ ಹೋಗುತ್ತಿದ್ದೇನೆ....

"ನಾನಿದ್ದೀನಿ."

ಆತ ಅವಳನ್ನು ಎತ್ತಿಕೊಂಡು ನೀರಿಗಿಳಿದ. ಪಾರುಕುಟ್ಟಿ ಕಣ್ಣು ತೆರೆದಾಗ ಮೊದಲು ನಡುಗಡಲಿನಲ್ಲಿದ್ದೇನೆ ಎನ್ನಿಸಿತು. ಸುತ್ತಲೂ ದಡ ಕಾಣದ ನೀರು. ದೋಣಿ ನಡೆಸುತ್ತಿರುವ ಶಬ್ದ ಮಾತ್ರ. ಎಲ್ಲಿರುವುದು ಎಂದು ತಿಳಿಯಲು ಸ್ವಲ್ಪ ಹೊತ್ತು ಬೇಕಾಯಿತು. ದೋಣಿಯಲ್ಲಿ—ಹರಿಯುವ ನೀರಿಗೆದುರಾಗಿ ಸುಳಿಗೆದುರಾಗಿ—ಹೋಗುತ್ತಿರುವುದು. ಆತ ಸರ್ವಶಕ್ತಿಯನ್ನೂ ಉಪಯೋಗಿಸಿ ದೋಣಿ ನಡೆಸುತ್ತಿದ್ದಾನೆ. ಆತನ ಬಿಸಿಯಾದ ಬೆವರಿನ ಹನಿಗಳು ಅವಳ ಮುಖದ ಮೇಲೆ ಬೀಳುತ್ತಿವೆ. ಆಗ ಅವಳಿಗೆ ತಿಳಿಯಿತು, ಆತನ ತೊಡೆಯ ಮೇಲೆ ಅವಳು ಮಲಗಿರುವುದು ಎಂದು. ತಲೆ ಎತ್ತಿ ನೆಟ್ಟಗೆ ಕುಳಿತು ಕೊಳ್ಳಬೇಕು ಎನ್ನಿಸಿತು. ಆದರೆ ತಲೆಯೆತ್ತದೆ ಕಣ್ಣು ಮುಚ್ಚಿಕೊಂಡು ಅವಳು ಕೇಳಿದಳು "ಎಲ್ಲಿಗೆ ಹೋಗ್ತಿರೋದು?"

"ನೀರು ಸುಗ್ಗದ ಕಡೆಗೆ."

—ದೋಣಿಯ ಕೊಂಬು, ನೆಟ್ಟಗೆ ನಿಂತಿದ್ದ ಒಂದು ಮರದ ಮೋಟಿಗೆ ತಾಗದ ಹಾಗೆ, ಹುಟ್ಟಿಯನ್ನು ಪಕ್ಕಕ್ಕೆ ಹಾಕಿ ತಿರುಗಿಸುವುದರ ಮಧ್ಯೆ ಏದುಸಿರು ಬಿಡುತ್ತಾ ಆತ ಹೇಳಿದ.

# 6

ವಯಸ್ಸಾಗಿದ್ದ ಪ್ಯೂನ್ ಕೋಯಾಮು ಕ್ಲಾಸಿಗೆ ಒಂದು ಮೆಮೋ ತೆಗೆದುಕೊಂಡು ಬಂದ. ರಾಮನಾಥಯ್ಯರರ ಹಿಸ್ಟ್ರಿಕ್ಲಾಸ್ ಅದು. ಮಾಸ್ಟರ್ ಮೆಮೊ ಓದಿದರು. "ಪಿ. ಅಪ್ಪುಣ್ಣೀ ಹೆಡ್ಮಾಸ್ಟರು ಕರೆಯುತ್ತಾರೆ."

ಹುಡುಗರೆಲ್ಲ ಅಪ್ಪುಣ್ಣಿಯನ್ನು ನೋಡಿದರು. ಅಪ್ಪುಣ್ಣಿ ತನ್ನ ಗಾಬರಿಯನ್ನು ತೋರಿಸಿಕೊಳ್ಳಬಾರದು ಎಂದು ಕಷ್ಟಪಟ್ಟ. ಸಾಧಾರಣವಾಗಿ ಏನಾದರೂ ದೂರುಗಳಿದ್ದರೆ ಹುಡುಗರನ್ನು ಆಫೀಸಿಗೆ ಬರಹೇಳುತ್ತಿದ್ದದ್ದು. ಎರಡು ಕೈಗಳಲ್ಲೂ ಸಾಕಾಗುವಷ್ಟು ಚಡಿ ಏಟು ಕೊಡುತ್ತಿದ್ದರು. ಸಣ್ಣ ತಪ್ಪಾಗಿದ್ದರೆ ಸಿಕ್ಕಾಬಟ್ಟೆ ಬಯ್ಯುತ್ತಿದ್ದರು. ಅಂತು, ಮೊನೆಮಾಡಿದ ಪೆನ್ಸಿಲನ್ನು ಸಿಕ್ಕಿಸಿಕೊಂಡಿದ್ದ ಅವರ ಕಿವಿಗೂ ಒಂದು ಗಾಂಭೀರ್ಯವಿತ್ತು. ಅನುಭವಿಸಿದವರ ಅಭಿಪ್ರಾಯದಂತೆ ಹನ್ನೆರಡು ಬೆತ್ತದ ಏಟು ಬಿದ್ದ ಮೇಲೂ ಕಿವಿ ಹಿಂಡುತ್ತಿದ್ದದ್ದು.

ಏತಕ್ಕಿರಬಹುದು? ಆಲೋಚನೆ ಮಾಡಿದ. ನಾನೇನೂ ತಪ್ಪು ಮಾಡಿಲ್ಲ. ಭಾಸ್ಕರ ಏನಾದರೂ ದೂರು ಹೇಳಿರಬೇಕು.

ಹೋದ. ಆಫೀಸಿನೊಳಕ್ಕೆ ಹೋಗುವಾಗ ಕಾಲುಗಳು ನಡುಗುತ್ತಿದ್ದುವು.

ಹೆಡ್ ಮಾಸ್ಟರ್ ಕೇಳಿದರು:

"ಏನೋ ಸರಿಯಾಗಿ ಓದ್ತಾ ಇದ್ದೀಯಾ?"

"ಓದುತ್ತಿದ್ದೇನೆ ಸಾರ್."

ಆ ಮೇಲೆ ಹೆಡ್ ಮಾಸ್ಟರ್ ಹೇಳಿದ್ದು—ಅವನು ಸ್ಕಾಲರ್‌ಷಿಪ್ ಪಡೆದಿದ್ದಾನೆ ಎಂದು. ತಿಂಗಳಿಗೆ ಆರು ರೂಪಾಯಿ! ಅರ್ಧ ವರ್ಷದ ಪರೀಕ್ಷೆಯಲ್ಲಿ ಮೊದಲನೆಯವನಾಗಿ ಬಂದದ್ದರಿಂದ ಸ್ಕಾಲರ್‌ಷಿಪ್ ಸಿಕ್ಕಿತ್ತು.

ಹಾಗಾದರೆ ಇನ್ನು ಮೇಲೆ ಫೀಸು ಕಟ್ಟಬೇಕಾಗಿಲ್ಲ.

ನಾಲ್ಕು ರೂಪಾಯಿ ಹದಿಮೂರಾಣೆ ಕಳೆದು—ಒಂದು ರೂಪಾಯಿ ಮೂರಾಣೆ ಬಾಕಿ.

ತಿಂಗಳಿನಲ್ಲಿ ಒಂದು ರೂಪಾಯಿ ಮೂರಾಣೆ ತನಗೆ ಉಳಿಯುತ್ತದೆ,

"ಇಲ್ಲಿ ರುಜು ಮಾಡೋ,"

ಒಂದು ರೆವಿನ್ಯೂ ಸ್ಟಾಂಪಿನ ಮೇಲೆ ರುಜು ಮಾಡಿ ಹೋಗಬೇಕೆಂದಿದ್ದಾಗ ಹೆಡ್ ಮಾಸ್ಟರು ಒಂದು ನೋಟಿನ ಕಂತೆಯನ್ನು ಕೈಗೆ ಕೊಟ್ಟರು. "ಕಳೆದ ಎಂಟು ತಿಂಗಳದು ಇದು."

ಎಂಟಾರ್‍ನ್ನು ನಲವತ್ತೆಂಟು !

ನಂಬುವುದಕ್ಕೇ ಆಗಲಿಲ್ಲ. ಅದನ್ನು ಈಸಿಕೊಳ್ಳುವಾಗ ಕೈ ನಡುಗುತ್ತಿತ್ತು. ನಲ-ವತ್ತೇಳು ರೂಪಾಯಿ ಹದಿನೈದಾಣೆಯನ್ನು ಹಿಡಿದುಕೊಂಡು ಆಫೀಸಿನಿಂದ ಹೊರಗೆ ಬರುತ್ತಿದ್ದಾಗ ತಾನೊಬ್ಬ ದೊಡ್ಡ ಮನುಷ್ಯನಾಗಿದ್ದೇನೆ ಎನಿಸಿತು. ಕುಟುಂಬದ ಮನೆಗೆ ಬಂದಾಗಿನಿಂದ ಯಾವಾಗಲೂ ಅವನು ದೇವರ ಮನೆಯ ಮುಂದೆ ನಿಂತು ಪ್ರಾರ್ಥಿಸುವುದುಂಟು. ಭಗವತಿ ಅನುಗ್ರಹಿಸಿದ್ದಾಳಿರಬೇಕು.

ಭಗವತಿ ಆ ಕುಟುಂಬದ ಜನರ ತಾಯಿ. ಅಟ್ಟದಲ್ಲಿದ್ದಾಳೆ.

"ಮೊದಲು ಅನ್ನ ತಂದುಕೊಟ್ಟ ತಾಯಿ" ಎಂದು ಭಗವತಿಯನ್ನು ಕುರಿತು ಅಮ್ಮ ಹೇಳುವುದು.

ಅದೊಂದು ಹಳೆಯ ಕಥೆ.

ಬಹಳ ದಿನಗಳ ಹಿಂದೆ—ಆಗ ಈ ಕುಟುಂಬದಲ್ಲಿ ಒಬ್ಬ ಸ್ತ್ರೀಯೂ ಆರು ಮಕ್ಕಳೂ ಇದ್ದದ್ದು. ಆ ಸ್ತ್ರೀ ಪ್ರತಿದಿನ ಹಸುವಿನ ಹಾಲು ಕರೆದು ದೇವಸ್ಥಾನಕ್ಕೆ ತೆಗೆದು ಕೊಂಡು ಹೋಗಿ ಕೊಡುತ್ತಿದ್ದಳು. ದೇವಸ್ಥಾನಕ್ಕೆ ಹೋಗಬೇಕಾದರೆ ಹೊಳೆ ದಾಟಿ ಹೋಗಬೇಕು. ದೇವಸ್ಥಾನದಲ್ಲಿ ಸಿಕ್ಕುತ್ತಿದ್ದ ನೈವೇದ್ಯದಿಂದ ಅವರು ಜೀವನ ಸಾಗಿಸು ತ್ತಿದ್ದರು.

ಒಂದು ತುಲಾ ಮಾಸದಲ್ಲಿ ಹೊಳೆಬಂದಿತು. ದೋಣಿ ಇಳಿಸುವುದಕ್ಕೆ ಸಾಧ್ಯ ವಿರಲಿಲ್ಲ. ಹೊಳೆಯ ದಡದಲ್ಲಿ ಹಾಲಿನ ಪಾತ್ರೆಯನ್ನಿಟ್ಟುಕೊಂಡು ಎಷ್ಟೋ ಹೊತ್ತು ಕಾದುಕೊಂಡು ನಿಂತಳು. ಕಡೆಗೆ ವ್ಯಸನದಿಂದ ಹಿಂದಿರುಗಿ ಬಂದಳು. ಮಕ್ಕಳಿಗೆ ಆ ರಾತ್ರಿ ಊಟವಿಲ್ಲ. ಅರ್ಧರಾತ್ರಿಯಲ್ಲಿ ಹೊರಗಿನ ಬಾಗಿಲಿನಿಂದ ಯಾರೋ ಬಂದು ಕರೆದರು, ಬಾಗಿಲು ತೆರೆದಾಗ ಒಂದು ಕೈ ಮುಂದೆ ಬಂದಿತು. ಒಂದು ಪಾತ್ರೆಯಲ್ಲಿ ಅನ್ನವನ್ನು ಒಳಕ್ಕೆ ನೀಡಿತು.

"ಮಕ್ಕಳನ್ನು ಎಬ್ಬಿಸಿ ಇದನ್ನು ಕೊಡು."

ರೇಷ್ಮೆ ಬಟ್ಟೆಯನ್ನು ಹೊದೆದಿದ್ದ ಒಂದು ಸ್ತ್ರೀರೂಪು ಅಟ್ಟದ ಬಾಗಿಲನ್ನು ತೆರೆದು ಒಳಕ್ಕೆ ಹೋಗುವುದನ್ನು ಕಂಡಳು, ಕಾಲಂದಿಗೆಗಳ ಶಬ್ದ ಕೇಳಿಸಿತು, ಅಷ್ಟೆ. ಆ ಮೇಲೆ ಕಂಡಿಲ್ಲ.

ಅವಳು ಭಗವತಿಯಲ್ಲದೆ ಬೇರೆಯಲ್ಲ.

ಅವರ ಸಂತರವೇ ಈ ಕುಟುಂಬ ಅಭಿವೃದ್ಧಿಗೆ ಬಂದದ್ದು.

ಆಗ ಅವನಿಗೆ ಭಗವತಿಯ ಮೇಲೂ ಎಲ್ಲ ದೈವಗಳ ಮೇಲೂ ವಿಶ್ವಾಸವುಂಟಾಯಿತು.

ಫೀಸು ಕಟ್ಟುವ ತಾರೀಖು ಹತ್ತಿರ ಬಂದಾಗ ಎದೆ ಹೊಡೆದುಕೊಳ್ಳುತ್ತಿತ್ತು. ನಾಲ್ಕು ರೂಪಾಯಿ ಹದಿಮೂರಾಣೆ ಎಲ್ಲಿಂದ ತರುವುದು ಎಂದು.

ಆ ದಿನ ಹುಡುಗರ ಪೈಕಿ ತುಂಬ ಗಣ್ಯನಾಗಿಬಿಟ್ಟ. ಜೇಬಿನಲ್ಲಿ ನಲವತ್ತೇಳು ರೂಪಾಯಿ ಹದಿನೈದು ಆಣೆಗಳಿವೆ. ಅಷ್ಟೊಂದು ಹಣವನ್ನು ಅವನು ಮೊದಲು ಕಂಡಿದ್ದಿಲ್ಲ.

ಅವನು ಮನೆ ತಲಪುವುದಕ್ಕೆ ಮೊದಲೇ ಆ ವಾರ್ತೆ ಮನೆಗೆ ಮುಟ್ಟಿತ್ತು. ಭಾಸ್ಕರ್ ಹೇಳಿದ್ದಾಗಿರಬೇಕು.

ಆ ದಿನ ದೊಡ್ಡ ಮಾವ ಸ್ವಲ್ಪ ಪ್ರೀತಿಯಿಂದ ಕಂಡರು. ಊಟಮಾಡಲು ಭಾಸ್ಕರನೂ ಮತ್ತಿತರರೂ ಕುಳಿತುಕೊಂಡಾಗ ದೊಡ್ಡ ಮಾವನೇ ಅವನನ್ನು ಊಟಕ್ಕೆ ಕರೆದದ್ದು.

ನಲವತ್ತೇಳು ರೂಪಾಯಿ ಹದಿನೈದಾಣೆಗೆ ಇಷ್ಟು ಬೆಲೆಯಿದೆ ಎಂದು ಅವನಿಗೆ ತಿಳಿದಿರಲಿಲ್ಲ.

ರಾತ್ರಿಯಾದಾಗ ಅಜ್ಜಿ ಹೇಳಿದರು:

"ಆ ಹಣಾನ ನಾನಾ ರೀತಿ ಖರ್ಚು ಮಾಡಿಬಿಡಬೇಡ. ಅಜ್ಜಿ ಕೈಲಿ ಕೊಟ್ಟಿರು."

ಆದರಿಂದ ಎರಡು ಹೊಸ ಅಂಗಿ ಲುಂಗಿಗಳು ಬಂದುವು. ಅಜ್ಜಿ ಅದರಲ್ಲಿ ಸ್ವಲ್ಪ ಹಣ ಕೊಟ್ಟು ಆಡಿನ ತಲೆಯನ್ನೂ ತೈಲವನ್ನೂ ತರಿಸಿಕೊಂಡರು. ಬಾಕಿಯದನ್ನು ಕುಟ್ಟಿ ಮಾವ ಅಜ್ಜಿಯ ಕೈಯಿಂದ ಸಾಲ ಈಸಿಕೊಂಡಿದ್ದರು. ಅದು ಗೊತ್ತಾದದ್ದು ಆ ಮೇಲೆ.

ಸೂಪ್ ಕುಡಿಯುವುದಕ್ಕೆ ಕುಳಿತಾಗ ಅಜ್ಜಿ ನಿತ್ಯವೂ ಹೇಳುವುದುಂಟು.

"ತಿರುಗಾಡೋದಕ್ಕೆ ಆಗದೇ ಇತ್ತು. ನಿನ್ನಿಂದ ನನಗೆ ಸ್ವಲ್ಪ ಗುಣ ಉಂಟಾಯ್ತು."

ಅವರ ಮಧ್ಯದಲ್ಲಿ ಪಾಲು ಮಾಡಿಕೊಳ್ಳುವ ವಿಷಯ ಹೊಗೆಯಾಡುತ್ತಿತ್ತು.

ಕೆಲವು ದಿನಗಳಾಗಿವೆ ಮಾತನಾಡುವುದಕ್ಕೆ ಪ್ರಾರಂಭಿಸಿ. ಇನ್ನೂ ಯಾವ ತೀರ್ಮಾನಕ್ಕೂ ಬಂದಿಲ್ಲ.

ಭಾಗ ಮಾಡಿಕೊಳ್ಳಬೇಕು ಎಂದು ಪ್ರಾರಂಭವಾದಾಗಿನಿಂದ ದೊಡ್ಡಮ್ಮ ಹೇಳುವುದುಂಟು.

"ನನಗೂ ನನ್ನ ಮಕ್ಕಳಿಗೂ ಏನು ಕೊಡ್ತೀರೋ ಅದನ್ನು ಕೊಟ್ಟುಬಿಡಿ" ಎಂದು.

ಮೀನಾಕ್ಷಕ್ಕನಿಗೂ ಚಿಕ್ಕಪ್ಪನಿಗೂ ಯಾವ ಆಲೋಚನೆಯೂ ಇಲ್ಲ. ಇರುವ ಸಂಕಟವೆಲ್ಲ ಅಜ್ಜಿಗೆ.

"ಇದನ್ನೆಲ್ಲ ನನ್ನ ಕಣ್ಣಿನಲ್ಲಿ ನೋಡಬೇಕಾಗಿ ಬಂತಲ್ಲ."

ಪಡಸಾಲೆಯಲ್ಲಿ ಊರಿನ ಹಿರಿಯರ ಮಾತುಕಥೆ ಪ್ರಾರಂಭವಾದಾಗ ಅಜ್ಜಿ ಹೇಳುವುದು "ನಾನು ಈ ಮನೇಲಿ ಬಿದ್ದುಕೊಂಡು ಕಣ್ಣು ಮುಚ್ಚಿದರೆ ಸಾಕು" ಎಂದು.

ಅಪ್ಪುಣ್ಣಿ ಎನ್ನುವ ಒಂದು ಅಂಗ ಈ ಚೌಕಟ್ಟಿನ ಮನೆಯಲ್ಲಿ ಜೀವಿಸುತ್ತಿದೆ

ಎನ್ನುವ ವಿಷಯ ದೊಡ್ಡ ಮಾವನಿಗೆ ತೀರ ಮರೆತುಹೋಗಿದೆ. ಅವನನ್ನು ಎದುರೆ ಮರು ಕಾಣಬಾರದು ಎಂದು ದೊಡ್ಡ ಮಾವ ಯಾವಾಗಲೂ ಎಚ್ಚರಿಕೆ ವಹಿಸುತ್ತಿದ್ದರು. ಇವನೂ ಅದೇ ರೀತಿ ಮಾಡುತ್ತಿದ್ದ.

ಮನೆಯ ತುಂಬ ಜನರಿದ್ದರೂ ತಾನು ಒಂಟಿಯಾಗಿದ್ದೇನೆ ಎನ್ನುವ ಭಾವನೆ ಅವನನ್ನು ಯಾವಾಗಲೂ ಕಾಡುತ್ತಿತ್ತು. ಇವನ ಹೆಸರನ್ನು ಯಾರೂ ಗಟ್ಟಿಯಾಗಿ ಕರೆಯುತ್ತಿರಲಿಲ್ಲ. ಬೆಳಗ್ಗೆ ಗಂಜಿ ಕುಡಿದು ಸ್ಕೂಲಿಗೆ ಹೋಗುತ್ತಿದ್ದ. ಸಾಯಂಕಾಲ ಹಿಂದಿರುಗುತ್ತಿದ್ದ. ತೋಟದ ಕೊಳದಲ್ಲಿ ಸ್ನಾನ. ತೆಂಕು ಭಾಗದ ನಡುಮನೆಯ ಅಂಗಳದ ಪಕ್ಕದಲ್ಲಿ ತೂಗುಹಾಕಿದ ವಿಭೂತಿ ಚೀಲದಿಂದ ಸ್ವಲ್ಪ ವಿಭೂತಿ ತೆಗೆದು ಕೊಂಡು ದೇವರ ಕೋಣೆಯ ಮುಂದೆ ಹೋಗಿ ನಮಸ್ಕರಿಸಿ ದೀಪದ ಕಂಬದ ಬೆಳಕಿನಲ್ಲಿ ಓದಿಕೊಳ್ಳುತ್ತಿದ್ದ. ಯಾರೂ ಅವನನ್ನು ಪ್ರೀತಿಯಿಂದ ನೋಡುತ್ತಿರಲಿಲ್ಲ.

ದೊಡ್ಡ ಮಾವನ ಕೋಪ ಹೆಚ್ಚಾದದ್ದು ಅವನು ಇನ್ನು ತನ್ನ ಮನೆಗೆ ಹಿಂತಿರುಗಿ ಹೋಗುವುದಿಲ್ಲವೆಂದು ಖಚಿತವಾದ ಮೇಲೆ. ಅವರು ತನ್ನ ಹತ್ತಿರವೇ ಗಟ್ಟಿಯಾಗಿ ಹೇಳುವುದುಂಟು. "ನಾಶ ಮಾಡೋದಕ್ಕೆ ಇಲ್ಲಿಗೆ ಬಂದು ಸೇರಿಕೊಂಡಿರೋದು. ಹಾಳಾದೋರು ಮುಳುಗಾದೋರೆಲ್ಲ ಇಲ್ಲಿ ಬಂದು ಸೇರಿಕೊಳ್ಳಲಿ."

ಮಧ್ಯೆ ಮಧ್ಯೆ ಮಾತನಾಡಿಸುವುದಕ್ಕೆ ಹತ್ತಿರ ಬರುವವಳು ಮಾಳು ಒಬ್ಬಳು ಮಾತ್ರ. ಅವಳಿಗೆ ಏನೇನಾದರೂ ಕೇಳುವುದಿರುತ್ತದೆ. ಪಾಠ ಓದುತ್ತಿದ್ದಾಗ ಕೆಲವು ಸಲ ಹತ್ತಿರ ಬಂದು ನೋಡುತ್ತಾ ನಿಂತುಕೊಳ್ಳುತ್ತಾಳೆ. ಅದು ಅವನಿಗೆ ಇಷ್ಟವಾಗುವುದಿಲ್ಲ. ಹಗಲು ನಡೆದದ್ದನ್ನೆಲ್ಲ ಸಾಯಂಕಾಲ ಹೇಳುತ್ತಿದ್ದಳು, ಕಪ್ಪನೆಯ, ತೆಳ್ಳನೆಯ ಆ ಹೆಣ್ಣು ಯಾಕೋ ಅವನಿಗೆ ಹಿಡಿಸಲಿಲ್ಲ. ಅವಳು ಏನೂ ಅರಿಯದ ಹೆಣ್ಣು ಎಂದು ಅವನಿಗೆ ಗೊತ್ತಿದೆ. ಆದರೂ ಅವಳು ಪ್ರೀತಿಯಿಂದ ಹತ್ತಿರ ಬಂದಾಗ ಅವನಿಗೆ ಸಿಟ್ಟು ಬರುತ್ತಿತ್ತು. ಅಡಿಗೆ ಮನೆಯಲ್ಲಿ ಬಿಡುವು ದೊರೆತಾಗಲೆಲ್ಲ ಅವಳು ಅವನ ಹತ್ತಿರ ಬರುತ್ತಿದ್ದಳು. ಏನು ಮಾಡ್ತಾ ಇದ್ದಿ ಅಪ್ಪುಣ್ಣಿ ಅಣ್ಣ? ಏನು ಹೇಳ್ತೀ ಅಪ್ಪುಣ್ಣಿ ಅಣ್ಣ?......

ಅವಳೂ ಈ ಮನೆಯಲ್ಲಿ ತನ್ನ ಹಾಗೆಯೇ ಅನ್ನದ ಖರ್ಚಿಗೆ ಬಂದು ಸೇರಿಕೊಂಡ ಹೆಣ್ಣು. ಅವಳಿಗೆ ಸದಾ ಕೈತುಂಬ ಕೆಲಸವಿರುತ್ತದೆ. ಯಾವಾಗಲೂ ಕೊಳೆಯಾದ ಮುಂಡು. ಬ್ಲೌಸ್‌ನಲ್ಲಿರುತ್ತಾಳೆ.

ತಂಗಕ್ಕನಿಗೂ ಅಮ್ಮಿಣಿ ಅಕ್ಕನಿಗೂ ಸಿಲ್ಕಿನ ಬಟ್ಟೆಗಳಿವೆ. ಅವರು ಪಕ್ಕದಲ್ಲಿ ಹೋದರೆ ಸುವಾಸನೆ ಎಣ್ಣೆಯ, ಗಂಧದ ಪೊಟ್ಟಿನ, ಕೇದಗೆ ಹೂವಿನ, ಪರಿಮಳ ಬರುತ್ತದೆ. ಮಾಳು ಪಕ್ಕದಲ್ಲಿ ಹೋದರೆ ಒದ್ದೆ ಬಟ್ಟೆಯ ಹುಂಗು ವಾಸನೆ.

ಮಧ್ಯೆ ಮಧ್ಯೆ ಒಂದೊಂದು ಸಲ ಅಮ್ಮಿಣಿ ಅಕ್ಕ ಮನೆಗೆ ಹೋಗುತ್ತಾಳೆ.

ನಾಲ್ಕೈದು ದಿನ ಕಳೆದ ಮೇಲೆ ಹಿಂದಿರುಗಿ ಬರುತ್ತಾಳೆ. ದೊಡ್ಡ ಮಾವನಿಗೆ ಜೊತೆಯಲ್ಲಿ ಯಾರಾದರೂ ಮಕ್ಕಳಿರಬೇಕು. ಮೊದಲು ದೇವಕಿ ಅಕ್ಕ ಇದ್ದರು. ಅವರು ಮದುವೆಯಾಗಿ ಗಂಡನ ಮನೆಗೆ ಹೋದ ಮೇಲೆ ಅಮ್ಮಿಣಿ ಅಕ್ಕ ಬಂದಳು. ಅತ್ತೆ ಇಲ್ಲಿಗೆ ಬಂದು ವಾಸಮಾಡುವುದಕ್ಕಾರಂಭಿಸಿದುದು ಯಾವಾಗ ಎಂದು ತಿಳಿಯದು, ಕಳೆದ ತಿರುವಾದಿರಕ್ಕೆ ಮೊದಲು ಒಂದು ದಿನ ಇಲ್ಲಿಗೆ ಬಂದದ್ದು.

ಒಂದು ದಿನ ಷರಟು ಒಗೆದು ಒಣಗುವುದಕ್ಕೆ ಹಾಕಿತ್ತು. ಮನೆಯಲ್ಲಿದ್ದಾಗ ಷರಟು ಹಾಕಿಕೊಳ್ಳುತ್ತಿರಲಿಲ್ಲ. ಬನಿಯನ್ ಹಾಕಿಕೊಂಡು ಹೊರಗಡೆ ತಿರುಗಾಡುತ್ತಿದ್ದಾಗ ಅಮ್ಮಿಣಿ ಅಕ್ಕ ಹೇಳುವುದುಂಟು:

"ಅಪ್ಪುಣ್ಣಿ ಬನಿಯನ್ ಹಾಕಿಕೊಂಡಿದ್ದಾಗಲೂ ನೋಡುವುದಕ್ಕೆ ಒಂದು ಚೆಂದ."

ಅವರ ಹತ್ತಿರ ಮಾತಾಡುವುದಕ್ಕೆ ಅವನಿಗೆ ಸಂಕೋಚ. ಕೆಲವು ಸಲ ಹತ್ತಿರ ಬರುತ್ತಿದ್ದರು. ಆಗ ಮೈ ರೋಮಾಂಚಗೊಳ್ಳುತ್ತಿತ್ತು. ಅವರನ್ನು ನೋಡಿದಾಗಲೆಲ್ಲ ತನ್ನೆದುರಿಗೆ ಕಾಣುತ್ತಿದ್ದ ಆ ರೂಪು ಮರೆಯಾಗಿ ದೀಪದ ಪ್ರಕಾಶದಲ್ಲಿ ಎದೆ ಮರೆ ಮಾಡಕೊಳ್ಳದೆ ನಿರಿನಿರಿಯಾದ ರೇಶ್ಮೆಯ ಉಡುಪನ್ನುಟ್ಟು ಕೈಗಳಲ್ಲಿ ಅಡಕೆಯ ಹಿಂಗಾರವನ್ನು ಹಿಡಿದುಕೊಂಡು ಆಡಿ ಆಡಿ ತಲೆದೂಗುತ್ತಿದ್ದ ಒಂದು ನಾಗಕನ್ನಿಕೆಯ ಚಿತ್ರ ಮಾತ್ರ ಕಾಣಿಸುತ್ತಿತ್ತು.

ದೊಡ್ಡ ಮಾವ ಮಹಡಿಯ ಮೆಟ್ಟಿಲನ್ನಿಳಿದು ಹೋದ ಮೇಲೆ ಬತ್ತಾಯದ ಮನೆಯ ಪಡುಕೋಣೆಯ ಹೊರಗೆ ಮುಡಿ ಬಿಡಿಸಿಕೊಂಡು ಅಮ್ಮಿಣಿ ಅಕ್ಕ ನಿಲ್ಲುತ್ತಿದ್ದರು. ಅವರಿಗೆ ಕಾಣದಂತೆ ಅವರನ್ನು ನೋಡುತ್ತಾ ಕುಳಿತುಕೊಳ್ಳುತ್ತಿದ್ದಾಗ ಆಶ್ಚರ್ಯವುಂಟಾಗುತ್ತಿತ್ತು. ಅಲುಗಾಡಿದರೆ ಮಿನುಗುವ ನೀಲಿಯ ರೇಷ್ಮೆಯ ಜಾಕೆಟ್‌ನ ಪಿನ್ನು ಹಾಕದೆ ಇದ್ದ ಜಾಗದ ಸಂದಿನಲ್ಲಿ ಕಾಣುತ್ತಿದ್ದ ಎಳೆಬಾಳೆಯ ಸುಳಿಯ ಬಣ್ಣದಂತಹ ಮೈಬಣ್ಣದ ಹೊಟ್ಟೆಯ ಭಾಗ ಕಾಣಿಸುತ್ತಿತ್ತು. ಸರ್ಪನಾಟ್ಯದಲ್ಲಿ ಕಂಡದ್ದಕ್ಕಿಂತಲೂ ಹೆಚ್ಚು ಮೈ ಬಂದಿದೆ. ಅವರ ಅರೆಮುಚ್ಚಿದ ಕಣ್ಣುಗಳು ಸಂಜೆಯ ಬಿಸಿಲು ಬೀಳುವ ಬಾಳೆಯ ತೋಟದ ಕಡೆಗೆ ಬರಿದೇ ಸಂಚರಿಸುತ್ತಿದ್ದುವು. ಕೆಂಪು ಗಾಜಿನ ಬಳೆ ತೊಟ್ಟಿದ್ದ ಕೈಗಳಲ್ಲಿ ಯಾವಾಗಲೂ ತೇವವಿದೆ ಎನ್ನಿಸುತ್ತಿತ್ತು. ತಲೆಗೂದಲನ್ನು ಬಿಡಿಸುತ್ತಿದ್ದಾಗ ಗಾಜಿನ ಬಳೆಗಳನ್ನು ಹಿಂದಕ್ಕೆ ಸೂಕಿರುತ್ತಿದ್ದರು.

ಅವರು ತನ್ನೆದುರಿಗೆ ಬಂದು ನಿಂತಾಗ ಸರಿಯಾಗಿ ಮುಖವೆತ್ತಿ ನೋಡುವುದಕ್ಕಾಗುತ್ತಿರಲಿಲ್ಲ. ಹಗೆಯನ್ನು ಕಾಣುವಂತೆ, ನಿಂದಿಸುವಂತೆ ನೋಡಬೇಕು ಎನ್ನಿಸುತ್ತಿತ್ತು. ದೊಡ್ಡ ಮಾವನ ಪ್ರೀತಿಯ ಮಗಳು ಬಂದಿದ್ದಾಳೆ! ತನ್ನನ್ನು ಕ್ರೂರದೃಷ್ಟಿಯಲ್ಲಿ ಕಾಣುವ ಮನುಷ್ಯನ ಕಿರಿಯ ಮಗಳು! ದೊಡ್ಡ ಮಾವನ ಮೇಲಿದ್ದ ಸಿಟ್ಟೆಲ್ಲವನ್ನೂ ಅವರ ಮೇಲೆ ತೋರಿಸಬೇಕು ಎನ್ನಿಸುತ್ತಿತ್ತು. ಆದರೆ ಮುಂದೆ ಬಂದು ನಿಂತಾಗ

ಮುಖವೆತ್ತಿ ನೋಡುವುದಕ್ಕೂ ಸಾಧ್ಯವಾಗುತ್ತಿರಲಿಲ್ಲ. ದೂರದಿಂದ ಕಾಣುವುದೇ ಹಿತವಾಗಿತ್ತು. ಭುಜದ ಮೇಲೆ ಬಿದ್ದು ಹರಡಿಕೊಂಡಿರುತ್ತಿದ್ದ ತಲೆಗೂದಲನ್ನು ಬಿಡಿಸುತ್ತಿದ್ದಾಗ ಕಪ್ಪಾಗಿ ಹೊಳೆಯುವ ಸರ್ಪಗಳನ್ನು ಹಿಡಿಯುತ್ತಿದ್ದಂತೆ ತೋರುತ್ತಿತ್ತು. ಮೂಗಿನ ಕೆಳಗೆ ನೀಲವರ್ಣದ ಕೋಮಲವಾದ ಸಣ್ಣ ಸಣ್ಣ ರೋಮಗಳು. ಅರೆಮುಚ್ಚಿದ ಕಣ್ಣುಗಳನ್ನು ನೋಡಿದಾಗ ಅವರು ಸ್ವಪ್ನವನ್ನು ಕಾಣುತ್ತ ನಿಂತಿದ್ದಾರೋ ಎಚ್ಚರವಾಗಿದ್ದಾರೋ ಎನ್ನುವ ಸಂಶಯವುಂಟಾಗುತ್ತಿತ್ತು.

ಸಂಜೆಯ ಹೊತ್ತು ಅವರು ಮನೆಯ ಪಶ್ಚಿಮ ಭಾಗದಲ್ಲಿ ನಿಂತಾಗ ನಾಗಬನಗಳಿಂದ ಸರ್ಪಗಳು ಹೆಡೆಬಿಚ್ಚಿ ಆಡುತ್ತಿರಬೇಕು ಎನ್ನಿಸುತ್ತಿತ್ತು. ಸರ್ಪಗಳಿಗೆ ಸುಂದರಿಯರಾದ ಸ್ತ್ರೀಯರನ್ನು ಕಂಡರೆ ತುಂಬ ಇಷ್ಟ.

ಅಮ್ಮಿಣಿ ಅಕ್ಕ ಮಾಟವುಳ್ಳ ಒಂದು ಸರ್ಪ. ಅದು ಹೆಡೆ ಬಿಚ್ಚಿ ಆಡುವುದನ್ನು ದೂರದಲ್ಲಿ ನಿಂತು ನೋಡುವುದರಲ್ಲೇ ಅವನಿಗೆ ಹಿತ. ಅದನ್ನು ಹಿಡಿಯುವುದಕ್ಕೆ ಅವನು ಭಯಪಡುತ್ತಾನೆ...

ಒಂದು ದಿನ ಸಂಜೆ ಬಾಗಿಲಿನ ಹತ್ತಿರ ಸಿಕ್ಕಿದ ಒಂದು ಪತ್ರಿಕೆಯ ತುಂಡನ್ನು ತಂದು ಪುಸ್ತಕಕ್ಕೆ ರಟ್ಟು ಹಾಕುತ್ತಾ ಕುಳಿತಿದ್ದ. ಆಗ ಅಮ್ಮಿಣಿ ಅಕ್ಕ ತನ್ನ ಹಿಂದೆ ಬಂದು ನಿಂತುಕೊಂಡಳು.

"ಅಪ್ಪುಣ್ಣಿ ಏನು ಮಾಡ್ತಿರೋದು?"

ರಟ್ಟು ಹಾಕುವುದರಲ್ಲಿ ಮಗ್ನನಾಗಿದ್ದ ಅಪ್ಪುಣ್ಣಿ ತಲೆ ಎತ್ತದೆ ಹೇಳಿದ—

"ಏನೂ ಇಲ್ಲ."

"ಎಲ್ಲಿ ಅಪ್ಪುಣ್ಣಿ ಪುಸ್ತಕ ನೋಡೋಣ?"

ಅವರು ಮೈಗೆ ತಾಗುವಂತೆ ತೀರ ಹತ್ತಿರಕ್ಕೆ ಬಂದು ನಿಂತಾಗ ಮುಡಿದಿದ್ದ ದುಂಡು ಮಲ್ಲಿಗೆ ಆಹ್ಲಾದವನ್ನುಂಟುಮಾಡುವ ಸುವಾಸನೆಯನ್ನು ಬೀರಿತು.

ರಟ್ಟು ಹಾಕಿ ಮುಗಿಸಿದ ಮೇಲೆ ಪುಸ್ತಕವನ್ನು ಕೆಳಗಿರಿಸಿದ. ಅವರು ಅದನ್ನು ಕೈಗೆತ್ತಿಕೊಂಡರು.

ಅಮ್ಮಿಣಿ ಅಕ್ಕ ಐದನೆ ತರಗತಿಯ ವರೆಗೆ ಮಾತ್ರವೇ ಓದಿರುವುದು. ಇಂಗ್ಲೀಷಿನ ಅಕ್ಷರಗಳನ್ನು ಕೂಡಿಸಿ ಹೇಳಲು ಬರುವುದಿಲ್ಲ. ಆ ವಿಷಯದಲ್ಲಿ ಅವನಿಗೆ ಅಭಿಮಾನವುಂಟಾಯಿತು. ತಾನು ಇಂಗ್ಲೀಷನ್ನು ಓದಲೂ ಬಲ್ಲ; ಬರೆಯಲೂ ಬಲ್ಲ. ಪುಸ್ತಕದ ಪುಟಗಳನ್ನು ಬಿಟ್ಟ ಕಣ್ಣು ಬಿಟ್ಟ ಹಾಗೆಯೇ ನೋಡುತ್ತ ಅಮ್ಮಿಣಿಯಕ್ಕ ಕೇಳಿದರು.

"ಅಪ್ಪುಣ್ಣಿಗೆ ಇದನ್ನೆಲ್ಲ ಓದೋದಕ್ಕೆ ಬರುತ್ತಾ?"

"ಹ್ಞು"

"ಎಲ್ಲಿ ಸ್ವಲ್ಪ ಓದು ಕೇಳೋಣ."

ಅದು ಅವನಿಂದಾಗದು. ಮತ್ತೊಬ್ಬರಿಗೆ ಕೇಳಿಸದಂತೆ ಅವನು ಓದುವುದು. ತಾನು ಓದುವುದನ್ನು ಕೇಳಲು ಇವರಿಗೆ ಅಷ್ಟೊಂದು ಆಸಕ್ತಿಯಿದೆಯೆ? ಒಂದು ಸಲ ಓದಿ ತನ್ನ ಪಾಂಡಿತ್ಯವನ್ನು ತೋರಿಸಿಕೊಳ್ಳಬೇಕು ಎನ್ನಿಸಿತು. ಆದರೆ ಅದೇಕೋ ಸಂಕೋಚವುಂಟಾಯಿತು.

"ಇದು ಯಾರ ಚಿತ್ರ?"

ಒಂದು ಪುಟದ ಚಿತ್ರದಲ್ಲಿ ನಟ್ಟ ದೃಷ್ಟಿಯುಳ್ಳವಳಾಗಿ ಅಮ್ಮಿಣಿ ಕೇಳಿದಳು.

ಅಪ್ಪಣ್ಣಿ ಹೇಳಿದ "ರಾಣಿ ಲಕ್ಷ್ಮೀಬಾಯಿ"

"ಯಾವ ಲಕ್ಷ್ಮೀಬಾಯಿ?"

ಲಕ್ಷ್ಮೀಬಾಯಿ ಯಾರು ಎಂದು ಅವನಿಗೆ ತಿಳಿಯದು. ಆದರೆ ಝಾನ್ಸಿ ರಾಣಿಯ ಕಥೆ ಪೂರ್ತಿ ಗೊತ್ತಿದೆ.

ಆದರೆ ಅದನ್ನೆಲ್ಲ ಯಾಕೆ ವಿವರಿಸಬೇಕು?

"ಒಬ್ಬಳು ರಾಣಿ ಹಿಂದಿನ ಕಾಲದವಳು." ಎಂದು ಮಾತ್ರ ಹೇಳಿದ.

ಈ ಚಿತ್ರ ಯಾವುದು?"

"ಇದು ಹಾರುವ ಕುದುರೆಯ ಕಥೆ. ರಾಜಕುಮಾರನೂ ರಾಜಕುಮಾರಿಯೂ ಕುದುರೆಯ ಮೇಲೆ ಕುಳಿತು ಹೋಗುತ್ತಾರೆ."

"ಎಲ್ಲಿಗೆ ಅಪ್ಪಣ್ಣಿ ಅವರು ಹೋಗುವುದು?"

"ರಾಜಕುಮಾರನ ಸ್ವಂತ ರಾಜ್ಯ ನೋಡುವುದಕ್ಕೆ."

"ಆ ಮೇಲೆ?"

"ಆ ಮೇಲೆ ರಾಜಕುಮಾರ ರಾಜಕುಮಾರಿಯನ್ನು ಮದುವೆಯಾದ."

"ಆ ಮೇಲೆ"

"ಆ ಮೇಲೆ—ಆ ಮೇಲೆ ಸುಖವಾಗಿದ್ದರು."

"ಆ ಮೇಲೆ?"

ಏನು ಹೇಳಬೇಕು ಎನ್ನುವುದು ತಿಳಿಯದೆ ಅವನು ಥಟ್ಟನೆ ಮಾತು ನಿಲ್ಲಿಸಿದ.

ಅಮ್ಮಿಣಿಯಕ್ಕ ಗಟ್ಟಿಯಾಗಿ ನಕ್ಕರು. ಅವನೂ ನಕ್ಕು ಬಿಟ್ಟ. ಆದರೆ ಕೂಡಲೆ ನಗುವನ್ನು ತಡೆದುಕೊಂಡ. ಅವನ ಭುಜದ ಮೇಲೆ ಬಲವಾಗಿ ಕೈಯೂರಿಕೊಂಡು ಮೇಲೆದ್ದರು. ಮತ್ತೊ ದುಂಡು ಮಲ್ಲಿಗೆಯ ಕಂಪು ಬೀರಿತು.

"ಅಪ್ಪಣ್ಣಿಗೆ ಇದರಲ್ಲಿರೋ ಕಥೆಗಳೆಲ್ಲ ಗೊತ್ತಿದೆ ಅಲ್ಲವಾ?"

"ಇನ್ನೂ ಓದಿಲ್ಲ, ಓದಬೇಕು."

"ಆ ಮೇಲೆ ನನಗೆ ಈ ಕಥೆಗಳೆಲ್ಲ ಹೇಳಬೇಕು ಗೊತ್ತಾಯ್ತಾ?"

ಹಾಗೆ ಕೇಳುತ್ತಿದ್ದಾಗ ಅವರು ಆ ಹೊತ್ತಿನಲ್ಲಿ ಸಣ್ಣ ಹುಡುಗಿಯ ಹಾಗೆ ಕಾಣಿಸಿ

ದರು. ಅವನು ಅದಕ್ಕೆ ಉತ್ತರ ಕೊಡಲಿಲ್ಲ.

"ಯಾಕೆ ಅಪ್ಪುಣ್ಣಿ ಏನೂ ಮಾತಾಡೋದಿಲ್ಲ?"

ಅದಕ್ಕೂ ಅವನೇನೂ ಉತ್ತರ ಕೊಡಲಿಲ್ಲ.

"ಅಪ್ಪುಣ್ಣಿಗೆ ನನ್ನ ಮೇಲೆ ಯಾಕೆ ಸಿಟ್ಟು?"

"ನನಗೇನೂ ಸಿಟ್ಟಿಲ್ಲ."

ಅವರು ಏನನ್ನೋ ಆಲೋಚಿಸುತ್ತಿದ್ದರು. ಆ ಮೇಲೆ ನಿಧಾನವಾಗಿ ಮನೆಯ ಬಡಗು ಪಾರ್ಶ್ವಕ್ಕೆ ಹೋದರು.

ಮನೆಯಲ್ಲಿ ದೊಡ್ಡ ಮಾವನೂ ಕುಟ್ಟಿ ಮಾವನೂ ಪರಸ್ಪರ ಜಗಳವಾಡುವುದು ನಿತ್ಯವೂ ಇರುತ್ತಿತ್ತು. ಪಾಲು ಮಾಡಿಕೊಳ್ಳಲು ದೊಡ್ಡ ಮಾವ ಸಿದ್ಧವಾಗಿಲ್ಲ. ಖರ್ಚಿಗೆ ಭತ್ತ ಕೊಡುತ್ತಿಲ್ಲ. ದೊಡ್ಡ ಮಾವನ ಗಂಟಲು ಇನ್ನೂ ದೊಡ್ಡದಾಗಿ ಕೇಳಿಸ ತೊಡಗಿತ್ತು.

ವರ್ಷಾಂತ್ಯದ ಪರೀಕ್ಷೆಯ ಫಲಿತಾಂಶ ಸ್ಕೂಲು ಬಾಗಿಲು ತೆರೆಯುವ ಮೊದಲೇ ತಿಳಿಯಿತು. ಅಪ್ಪುಣ್ಣಿ ಪಾಸಾಗಿದ್ದ. ಮಾರ್ಕ್ಸ್ ತಿಳಿದಿಲ್ಲ. ಫಸ್ಟ್‌ಕ್ಲಾಸ್ ಬಂದಿರ ಲಾರದು. ಏನಿದ್ದರೂ ಸೆಕೆಂಡ್ ಕ್ಲಾಸ್ ಬರಬಹುದೆಂಬ ನಂಬಿಕೆಯಿದೆ. ಕೃಷ್ಣನ್‌ಕುಟ್ಟಿ ವಾರಿಯಾರ್ ಫಸ್ಟ್ ಕ್ಲಾಸ್ ಬಂದಿರಬಹುದು.

ಪಾಸಾದ ಸುದ್ದಿಯನ್ನು ತಿಳಿದು ಮನೆಗೆ ಬಂದಾಗ ಅಮ್ಮಿಣಿಯಕ್ಕ ಕೇಳಿದರು.

"ಅಪ್ಪುಣ್ಣಿಗೆ ಪಾಸಾಯ್ತು, ಅಲ್ಲ?"

"ಪಾಸಾಯ್ತು."

"ಹಾಗಾದರೆ ಎಷ್ಟನೆಯವನು?"

"ಅದು ಗೊತ್ತಿಲ್ಲ."

"ಅಪ್ಪುಣ್ಣಿ ಫಸ್ಟ್ ಕ್ಲಾಸಿನಲ್ಲೇ ಪಾಸಾಗೋದು."

ಆಗಲಿ. ಆದರೆ ಇನ್ನೊಂದು ಬಹುಮಾನ ಹೆಚ್ಚಿಗೆ ಸಿಕ್ಕುತ್ತದೆ. ಕಳೆದ ಶಾಲಾ ವಾರ್ಷಿಕೋತ್ಸವದಲ್ಲಿ ಪ್ರೊಫಿಸಿಯನ್ಸಿ ಪ್ರೈಸ್ ಸಿಕ್ಕಿದೆ. ನೋಟೀಸ್ ಬೋರ್ಡ್‌ನಲ್ಲಿ ತನ್ನ ಹೆಸರಿದ್ದುದನ್ನು ನೋಡಿದಾಗ ತಿಳಿದಿತ್ತು.

ಭಾರಿ ಸಭೆ. ಬಹುಮಾನ ವಿತರಣೆ ಮಾಡುತ್ತಿದ್ದಾಗ ತನ್ನ ಹೆಸರು ಕರೆಯು ವುದನ್ನೇ ಕಾಯುತ್ತಾ ನಿಂತಿದ್ದ. ಮೈಕಿನಲ್ಲಿ ಅವನ ಹೆಸರನ್ನು ಕರೆದಾಗ ಥಟ್ಟನೆ ಏನು ಮಾಡುವುದಕ್ಕೂ ಗೊತ್ತಾಗಲಿಲ್ಲ.

ವಿ. ಅಪ್ಪುಣ್ಣಿ! ಇಡೀ ಜಗತ್ತಿಗೆ ಆ ಶಬ್ದ ಕೇಳಿಸಿರಬೇಕು ಎನ್ನಿಸಿತ್ತು.

ಜನರ ಮಧ್ಯದಲ್ಲಿ ನುಗ್ಗಿ ಹೋಗಿ ಬಹುಮಾನ ಪಡೆದ. ದಪ್ಪರಟ್ಟಿನ ಮೇಲೆ ಗಡ್ಡದ ಮನುಷ್ಯನೊಬ್ಬನ ಚಿತ್ರವಿದ್ದ ಒಂದು ಪುಸ್ತಕ.

"ಅಪ್ಪುಣ್ಣಿ ದೊಡ್ಡ ಮನುಷ್ಯನಾಗುತ್ತಾನೆ."

ಅಮ್ಮಿಣಿಯಕ್ಕ ತಮಾಷೆ ಮಾಡುತ್ತಿದ್ದಾಳೆಯೇ? ಇಲ್ಲ. ಅದೊಂದು ಹಾರೈಕೆಯೆಂದು ಅವನಿಗೆ ತೋರಿತು.

"ಓದಿ ಪಾಸಾಗಿ ದೊಡ್ಡ ನೌಕರನಾದಾಗ—"

ಅವರು ಮುಂದುವರಿಸಲಿಲ್ಲ. ಅವನ ಮುಖವನ್ನೇ ಅವರು ದಿಟ್ಟಿಸುತ್ತಿದ್ದಾರೆಂದು ತೋರಿತು.

ಕರ್ಕಟ ಮಾಸದಲ್ಲಿ ಒಂದು ಕಗ್ಗತ್ತಲೆಯ ರಾತ್ರಿ. ಎಣ್ಣೆಯಿಲ್ಲದೆ ತೆಂಕು ಪಾರ್ಶ್ವದ ದೀಪ ಆರಿಹೋಗಿತ್ತು. ಮೀನಾಕ್ಷಕ್ಕನ ಕೆಲಸವೆಲ್ಲ ಮುಗಿದ ಮೇಲೆಯೇ ಅದರ ಚಿಮ್ಮಿಣಿ ದೀಪವನ್ನು ಈಚೆಗೆ ತರಲು ಸಾಧ್ಯ.

ಊಟ ಮಾಡಿದ ಮೇಲೆ ಅವನಿಗೆ ತುಂಬ ಪ್ರಿಯವಾಗಿದ್ದ ಸ್ಥಳವಾದ ಪಡಸಾಲೆಯ ಪೂರ್ವಭಾಗಕ್ಕೆ ಬಂದ.

ದೊಡ್ಡ ಮಾವ ಆ ದಿನ ಊರಿನಲ್ಲಿರಲಿಲ್ಲ. ಗುರುವಾಯೂರಿಗೆ ಯಾತ್ರೆ ಹೋಗಿದ್ದರು. ಬತ್ತಾಯದ ಮನೆಯಲ್ಲಿ ಬೆಳಕಿಲ್ಲ.

ಅಜ್ಜಿ ಸಾಯಂಕಾಲವೇ ಊಟ ಮುಗಿಸಿದ್ದರು. ಮಳೆಗಾಲವಾದದ್ದರಿಂದ ವಾತದ ತೊಂದರೆ ಹೆಚ್ಚಾಗಿತ್ತು. ದೊಡ್ಡಮ್ಮನೂ ಮಗಳೂ ಊಟ ಮುಗಿಸಿ ಮಹಡಿಯ ಮೇಲಕ್ಕೆ ಹೋಗಿದ್ದರು. ಅಡುಗೆ ಮನೆಯಲ್ಲಿ ಮೀನಾಕ್ಷಕ್ಕನೂ ಮಾಳುವೂ ಏನೋ ಕೆಲಸ ಮಾಡುತ್ತಿದ್ದರು.

ಗದ್ದೆಯ ಕಡೆಯಿಂದ ತಂಪಾದ ಗಾಳಿ ಬೀಸುತ್ತಿತ್ತು—ಅಪ್ಪುಣ್ಣಿ ಕತ್ತಲೆಯನ್ನೇ ನೋಡಿಕೊಂಡು ಏನನ್ನೋ ಆಲೋಚಿಸುತ್ತಾ ನಿಂತಿದ್ದ.

ಆಗ ಅಮ್ಮಿಣಿಯಕ್ಕ ಹತ್ತಿರ ಬಂದದ್ದು.

"ಅಪ್ಪುಣ್ಣಿ ಕುಳಿತು ತೂಕಡಿಸುತ್ತಿದ್ದೀಯಾ?"

ಅವನು ಒಂದು ಸಲ ಬೆಚ್ಚಿದ. ಆಕೆ ಹತ್ತಿರ ಬಂದದ್ದು ಗೊತ್ತಾಗಲಿಲ್ಲ. ಶಬ್ದ ಮಾತ್ರ ಕೇಳಿಸಿತು.

"ದೀಪ ಸಿಕ್ಕಲಿಲ್ಲವಾ?"

"ಇಲ್ಲ."

"ತಂದೆ ಊರಲ್ಲಿಲ್ಲ. ಬತ್ತಾಯದ ಮನೆ ದೀಪ ಹಚ್ಚಿ ಕೊಡಲಾ?"

"ಬೇಡ"

ಆ ಬತ್ತಾಯದ ಮನೆಯೊಳಗೆ ಅವನು ಕಾಲಿರಿಸಿಲ್ಲ. ಹೋಗಬೇಕು ಅನ್ನಿಸಿಯೂ ಇರಲಿಲ್ಲ.

"ಯಾಕೆ ಬೇಡ ಅಂತೀಯಾ? ಓದಿ ಬೇಜಾರಾಯ್ತಾ?"

ಅನುಕೂಲಕ್ಕಾಗಿ ಅವನು ಹೇಳಿದ:

"ಹ್ಞಂ"

"ಹಾಗಾದರೆ ಯಾಕೆ ಇನ್ನೂ ಮಲಗಿಲ್ಲ?"

"ಮಲಗೋ ಹೊತ್ತಾಗಿಲ್ಲ."

"ಅಪ್ಪುಣ್ಣೀ ನೀನ್ಯಾಕೆ ಪುಸ್ತಕದ ಕಥೆಗಳನ್ನೆಲ್ಲ ಹೇಳ್ತೀನಿ ಅಂತ ಹೇಳಿ ಹೇಳದೇ ಹೋದೆ?"

"ಅದರಲ್ಲಿ ಯಾವ ಕಥೆಯೂ ಇಲ್ಲ."

"ಬರೀ ಸುಳ್ಳು. ಹಾರುವ ಕುದುರೆಯ ಮೇಲೆ ಹೋದ ರಾಜಕುಮಾರ ರಾಜ ಕುಮಾರಿಯರ ಕಥೆಯಿಲ್ಲವಾ?"

"ಹ್ಞಂ. ಅದೊಂದೇ ಇರೋದು."

"ಹಾರುವ ಕುದುರೆ ಇದ್ದಿದ್ದರೆ ತುಂಬ ಚೆನ್ನಾಗಿರ್ತಿತ್ತು. ಅಲ್ಲವಾ ಅಪ್ಪುಣ್ಣೀ? ಹೊಳೇಲಿ ನೆರೆಬಂದಾಗ ಬೇಕಾಗಿತ್ತು ಅಲ್ಲವಾ?"

ಅಪ್ಪುಣ್ಣಿಗೆ ನಗೆಬರುವ ಹಾಗಾಯಿತು. ಹತ್ತು ಹದಿನೆಂಟು ವಯಸ್ಸಿನ ಹೆಣ್ಣು ಅಮ್ಮಿಣಿಯಕ್ಕ. ಆದರೂ ಚಿಕ್ಕ ಮಕ್ಕಳಂತೆ ಕಾಣಿಸುತ್ತಾಳೆ.

"ಅದೆಲ್ಲ ಕಥೆಯಲ್ಲಿ ತಾನೆ?"

ಅಪ್ಪುಣ್ಣಿ ನೀರಸವಾಗಿ ಹೇಳಿದ.

"ನನಗೆ ಉಣ್ಣಿಯ ಕಥೆ ಗೊತ್ತುಂಟು. ಅಪ್ಪುಣ್ಣಿಗೆ ಗೊತ್ತಾ?"

"ಯಾವ ಉಣ್ಣಿ?"

ಬಡಗು ಪ್ರದೇಶದ ಜಾನಪದ ಗೀತೆಯಲ್ಲಿ ಬರುವ ಉಣ್ಣಿಯ ಕಥೆ ಅಮ್ಮಿಣಿ ಅಕ್ಕನಿಗೆ ಗೊತ್ತು. ಉಣ್ಣಿ ಒಬ್ಬ ಹುಡುಗನನ್ನು ಮುಡಿಯೊಳಗೆ ಬಚ್ಚಿಟ್ಟುಕೊಂಡಳು. ಸೊಂಟದ ವರೆಗೆ ನೀರಿನಲ್ಲಿ ನಿಂತುಕೊಂಡು (ಅಮ್ಮಿಣಿಯಕ್ಕನೂ ಬಚ್ಚಿಟ್ಟುಕೊಳ್ಳ ಬಹುದು.) ರಾತ್ರಿ ಸಹೋದರರೆಲ್ಲ ಮಲಗುವುದಕ್ಕೆ ಹೋದಾಗ ಉಣ್ಣಿಯ ಕೊಠಡಿಗೆ ಆತ ಹೋಗುತ್ತಿದ್ದ. ಬೆಳಗ್ಗೆ ಪೂಜಾರಿಯ ವೇಷದಲ್ಲಿ ಸುರಕ್ಷಿತನಾಗುತ್ತಿದ್ದ.

ಕಥೆ ಅವನಿಗೆ ಇಷ್ಟವಾಯಿತು.

ಅದರಲ್ಲಿ ಒಂದು ಭಾಗ ಮಲಯಾಳ ಪುಸ್ತಕದ ಪದ್ಯಭಾಗದಲ್ಲಿದೆ.

ಗದ್ದೆಯ ಕಡೆಯಿಂದ ತಂಪಾದ ಗಾಳಿ ಮತ್ತೆ ಜೋರಾಗಿ ಬೀಸಿ ಬಂದಾಗ ಶೈತ್ಯ ಶರೀರದೊಳಗೆಲ್ಲ ನುಗ್ಗಿದಂತಾಯಿತು.

ಅಮ್ಮಿಣಿ ಅಕ್ಕ ಹೇಳಿದರು: "ಮೈಮೇಲೆ ಬಟ್ಟೆ ಇಲ್ಲದಿದ್ದರೆ ಚಳಿಯಾಗೋ ದಿಲ್ಲವಾ?"

"ಇಲ್ಲ."

"ಆ ಅಯ್ಯಪ್ಪನ್ ದನದ ಕೊಟ್ಟಿಯ ನೆಲದ ಮೇಲೆ ಹೇಗೆ ಮಲಗುತ್ತಾನೆ?"

ಅಪ್ಪುಣ್ಣಿಯ ಭುಜವು ಅಮ್ಮಿಣಿ ಅಕ್ಕನ ಶರೀರ ಸ್ಪರ್ಶಿಸಿತು.

ಅವರ ಕೈಗಳು ಬಿಸಿಯಾಗಿದ್ದುವು. ತುಂಬ ಹಿತವಾಯಿತು.

"ಅಪ್ಪುಣ್ಣಿಗೆ ಒಳ್ಳೆ ಸುಖ. ಏಣಿ ಕೋಣೆಯಲ್ಲಿ ಸ್ವಲ್ಪವೂ ಚಳಿಯಿಲ್ಲ, ಕಿಟಿಕಿ, ಬಾಗಿಲು ಹಾಕಿ ಮಲಗಿದರೆ."

ಮೇಲೆ, ಒಂದು ಕಿಟಿಕಿಯೂ ಇಲ್ಲದ ಸಣ್ಣ ಕತ್ತಲೆಯ ಕೋಣೆಯಿದೆ. ಹಳೆಯ ಪಾತ್ರೆಗಳು, ಪೊರಕೆಗಳು, ಹತ್ತಿ ಹೊರಗೆಬಂದ ಹಾಸಿಗೆಗಳು ಇವೆಲ್ಲವನ್ನೂ ಇಡುವುದು ಅದರಲ್ಲಿಯೇ, ವರ್ಷಕ್ಕೊಂದು ಸಲ ಹಿರಿಯರಿಗೆ ಪೂಜೆ ನಡೆಸುವುದು ಅದರಲ್ಲಿ.

ಅಮ್ಮಿಣಿ ಅಕ್ಕ ಮೃದುವಾದ ನಗೆ ನಕ್ಕು ಹೇಳಿದರು:

"ನಿನಗೆ ಹೆದರಿಕೆ ಆಗೋದಿಲ್ಲವಾ?"

"ಯಾಕೆ ಹೆದರಿಕೋಬೇಕು?"

"ಪೋರೇಮಾನ್ ಮಾವ, ನಾರಾಯಣ ಚಿಕ್ಕಪ್ಪ ಮತ್ತೂ ಯಾರು ಯಾರೋ ಇದ್ದಾರೆ. ಎಲ್ಲರೂ ಸತ್ತುಹೋದವರು. ಅವರನ್ನು ಕುರಿತು ಹಲವಾರು ಕಥೆಗಳಿವೆ. ನಾರಾಯಣ ಚಿಕ್ಕಪ್ಪನನ್ನು ಕುರಿತು ಜ್ಞಾಪಿಸಿಕೊಂಡಾಗ ಭಯದಿಂದ ನಡುಗುವಂತಾಗುತ್ತದೆ. ಆತ ಒಬ್ಬ ಸೊಸೆಯನ್ನು ಒದೆದು ಕೊಂದುಹಾಕಿದ್ದಂತೆ. ಎಷ್ಟೋ ವರ್ಷಗಳ ಹಿಂದೆ. ಆ ಸೊಸೆಯ ಚಿತ್ರ—ಅದನ್ನು ನೆನಸಿಕೊಂಡಾಗ ತಾನೊಬ್ಬ ಧೀರನೆಂದು ಭಾವಿಸಿಕೊಳ್ಳುತ್ತಿದ್ದರೂ ಅಪ್ಪುಣ್ಣಿಗೆ ಭಯವುಂಟಾಗುತ್ತಿತ್ತು. ಒಂದೇ ಒಂದು ಸಲ ಒದೆದದ್ದು......ಬಾಯಿಯಿಂದ ಮೂಗಿನಿಂದ ರಕ್ತ ಸುರಿಯಿತು. ಹದಿನಾರು ವರ್ಷದ ಹುಡುಗಿ!

ಅವಳು ಅಂಥಾ ತಪ್ಪು ಮಾಡಿದ್ದೇನು ಎಂದು ಅವನು ಕೇಳಿಲ್ಲ. ತುಂಬ ಹಿಂದೆ ನಡೆದುಹೋದ ಕೆಲಸ. ಹೇಳುವ ಕಾರಣ—ಓ! ಅದನ್ನು ನಂಬುವುದು ಹೇಗೆ? ಅನ್ನದಲ್ಲಿ ತಲೆಗೂದಲು ಸಿಕ್ಕಿತು ಅಷ್ಟೆ. ಅಷ್ಟಕ್ಕೇ ಅವಳನ್ನು ಒದೆದು ಸಾಯಿಸಿ ಬಿಡುತ್ತಾರೋ? ಆದಿರಲಾರದು. ಅದಕ್ಕಿಂತಲೂ ದೊಡ್ಡ ತಪ್ಪು ಅವಳು ಮಾಡಿರಬೇಕು.

"ಏಣಿ ಕೋಣೇಲಿ ಮಲಗಿದಾಗ ಹೆದರಿಕೆ ಆಗೋದಿಲ್ಲವಾ?"

ಅಮ್ಮಿಣಿಯಕ್ಕ ಕೇಳಿದರು.

"ನನಗೇನೂ ಹೆದರಿಕೆಯಿಲ್ಲ."

"ಒಳ್ಳೇ ಧೈರ್ಯಸ್ಥ! ಪೋರೇಮ್ಮಾವನ ಪ್ರೇತ ಬಂದು ಕುತ್ತಿಗೆ ಹಿಡಿದುಕೊಳ್ಳಲಿ. ಆಗ ಗೊತ್ತಾಗುತ್ತೆ."

ಅಪ್ಪುಣ್ಣಿ ಅನಾಸಕ್ತನಾಗಿ ಹೇಳಿದ.

"ಹಿಡಿದುಕೊಂಡ ಮೇಲೆ ತಾನೆ?"

"ಅಷ್ಟೊಂದು ಧೈರ್ಯ ಇದೆಯೊ? ರಾತ್ರಿ ನಾನೇ ಬಂದು ನಿನ್ನ ಹೆದರಿಸಿ ಅಳೋ ಹಾಗೆ ಮಾಡ್ತೀನಿ."

ಅವನ ಕುತ್ತಿಗೆಯನ್ನು ಅಮ್ಮಿಣಿ ಅಕ್ಕನ ತೋಳು ಬಳಸಿದಾಗ ಅವನಿಗೆ ಹೇಗೆ ಹೇಗೊ ಆಯಿತು. ಅವರ ಬಟ್ಟೆಯಿಂದ ಸೋಪಿನ ಸುವಾಸನೆ ಬರುತ್ತಿತ್ತು.

ತೋಳಿನಿಂದ ಅವನ ಕುತ್ತಿಗೆಯನ್ನು ಗಟ್ಟಿಯಾಗಿ ಬಳಸಿಕೊಂಡು ಅಮ್ಮಿಣಿಯಕ್ಕ ಕೇಳಿದರು: "ಹೆದರೋದಿಲ್ಲವಾ? ಹೆದರೋದಿಲ್ಲವಾ?"

ಅಪ್ಪಣ್ಣಗೆ ರೋಮಾಂಚನವಾಯಿತು. ಅಷ್ಟರಲ್ಲಿ ತೆಂಕು ಪಾರ್ಶ್ವದಲ್ಲಿ ದೀಪದ ಬೆಳಕು ಕಾಣಿಸಿತು.

"ಬಿಡಿ ಅಮ್ಮಿಣಿ ಅಕ್ಕಾ—ಬಿಡಿ ಅಮ್ಮಿಣಿ ಅಕ್ಕಾ.. ಹಿಂದೆ ಮೀನಾಕ್ಷಕ್ಕ ಇದ್ದಾರೆ."

ಅಮ್ಮಿಣಿ ಅಕ್ಕ ಬೇಗ ಅವನ ಕುತ್ತಿಗೆಯಿಂದ ತನ್ನ ತೋಳನ್ನು ತೆಗೆದು ಎದ್ದು ನಿಂತು ಹೇಳಿದರು:

"ಇದೋ ಬಂದೆ. ನೀನು ಆ ಬತ್ತಾಯದ ಮನೆಬಾಗಿಲು ಎಳೆದುಕೊಂಡು ಅಗಣಿ ಹಾಕು."

ಮೀನಾಕ್ಷಕ್ಕ ಅಪ್ಪಣ್ಣಯನ್ನು ಕಂಡಾಗ ಕೇಳಿದರು:

"ನೀನಾ? ಮಲಗಲಿಲ್ಲವಾ?"

ಈ ದಿನ ಇನ್ನು ಓದುವುದು ಬೇಡವೆಂದು ಅಪ್ಪಣ್ಣ ತೀರ್ಮಾನಿಸಿದ.

"ಮಲಗ್ತೀನಿ."

"ಬೇಗ ಮಲಕ್ಕೊ ಹೋಗು ಮತ್ತೆ. ನಾನು ಈ ಬಾಗಿಲ್ನೆಲ್ಲಾ ಹಾಕಿಕೊಂಡು ಹೋಗಿ ಒಂದು ಸಲ ಬಿದ್ದುಕೊಳ್ತೀನಿ."

ಏಣಿಯ ಕೊಠಡಿಗೆ ಹೋದ. ಅಪ್ಪಣ್ಣ ಚಾಪೆಯನ್ನು ಹುಡುಕಿ ತೆಗೆದುಕೊಂಡ. ಅಲ್ಲಿ ಬೆಳಕೂ ಇಲ್ಲ. ದೀಪವಿಲ್ಲದೆ ಪ್ರತಿದಿನ ಚಾಪೆ ಹಾಸಿಕೊಳ್ಳುತ್ತಿದ್ದದ್ದು. ಬರಿ ಚಾಪೆ ಮಾತ್ರ. ಹೊದೆಯುವುದಕ್ಕೇನೂ ಇಲ್ಲ.

ಸಣ್ಣ ದೀಪವನ್ನು ಹಿಡಿದುಕೊಂಡು ಅಮ್ಮಿಣಿ ಅಕ್ಕ ಏಣಿಯ ಕೊಠಡಿಗೆ ಬಂದರು. ಜೊತೆಯಲ್ಲಿ ಮಾಳುವೂ ಇದ್ದಳು. ಮಾಳು ಈಗ ಜೊತೆಯಲ್ಲಿ ಮಲಗುವುದು.

"ಮೇಲೆ ಹೂಜಿಯಲ್ಲಿ ನೀರಿದೆಯಾ ಮಾಳು?"

"ಇರಬೇಕು."

"ಒಂದು ಚೆಂಬು ನೀರು ತೆಗೆದುಕೊಂಡು ಬಾ ಹೋಗು."

ಮಾಳು ನೀರು ತರಲು ಹೋದಾಗ ಅಮ್ಮಿಣಿಯಕ್ಕ ಅಪ್ಪಣ್ಣ ಮಲಗಿದ್ದ ಜಾಗದ ಪಕ್ಕದಲ್ಲಿ ಹೋಗಿ ಏಣಿಯ ಮೆಟ್ಟಲನ್ನು ಹಿಡಿದುಕೊಂಡು ನಿಂತರು. ಸಣ್ಣ ದೀಪದ ಬೆಳಕಿನಲ್ಲಿ ಅವರ ಮುಖ ಮಾತ್ರ ಹೊಳೆಯುತ್ತಿತ್ತು. ಕೆಳಗೆ ಕತ್ತಲೆಯಲ್ಲಿ ಮಲಗಿದ್ದ

ಅಪ್ಪುಣ್ಣಿ ನಿದ್ದೆ ಮಾಡುತ್ತಿರಬಹುದೇ ಎಂದು ಸೂಕ್ಷ್ಮವಾಗಿ ದಿಟ್ಟಿಸಿ ನೋಡಿದರು. ಅಪ್ಪುಣ್ಣಿ ತಕ್ಷಣ ಕಣ್ಣುರೆಪ್ಪೆ ಮುಚ್ಚಿಕೊಂಡ.

"ಕಳ್ಳನಿದ್ದೆ ಅಲ್ಲ?"

ಅವನು ಮಿಸುಕಾಡಲಿಲ್ಲ.

"ರಾತ್ರಿ ನಾನು ಬಂದು ಹೆದರಿಸ್ತೀನಿ. ಕೇಳಿಸ್ತಾ?"

ಮಾಳು ನೀರನ್ನು ತೆಗೆದುಕೊಂಡು ಬಂದಳು. ಅವರು ಏಣಿ ಹತ್ತಿ ಹೋದರು.

ಅಪ್ಪುಣ್ಣಿ ಮಲಗಿದ್ದ ಕೋಣೆಗೆ ನೇರವಾಗಿ ಮೇಲಿನ ಕೋಣೆಯಲ್ಲಿ ಅವರು ಮಲಗುವುದು. ಅತ್ತೆ ಇದ್ದಾಗ ಮಾತ್ರವೇ ಅಮ್ಮಿಣಿಯಕ್ಕ ಬತ್ತಾಯದ ಮನೆಯಲ್ಲಿ ಮಲಗುವುದು. ಮೇಲಿನಿಂದ ಹೆಜ್ಜೆಯ ಶಬ್ದವನ್ನು ಕೇಳಬಹುದಾಗಿತ್ತು. ಪ್ರತ್ಯೇಕ ರೂಮು ಬಾಗಿಲು ತೆರೆಯುವ ಶಬ್ದ ಕೇಳಿಸಿತು. ಸ್ವಲ್ಪ ಹೊತ್ತು ಕಳೆದ ಮೇಲೆ ಮಂಚದ ಶಬ್ದ. ಅಟ್ಟ ತುಂಬ ಕೆಳಗಿದ್ದದ್ದರಿಂದ ಒಂದೊಂದು ಶಬ್ದವೂ ಕೆಳಕ್ಕೆ ಕೇಳಿ ಸುತ್ತಿತ್ತು.

ಮಂಚ ಮತ್ತೂ ಶಬ್ದ ಮಾಡಿತು. ಅಮ್ಮಿಣಿಯಕ್ಕ ಮಂಚದ ಮೇಲೆ ಮಲಗಿರ ಬೇಕು. ಮಂಚದ ಕೆಳಗೆ ಮಾಳು ಮಲಗಿರಬೇಕು.

ಅಪ್ಪುಣ್ಣಿಗೆ ನಿದ್ದೆ ಬಂದಿರಲಿಲ್ಲ. ತೆರೆದ ಕಿಟಿಕಿಯ ಮೂಲಕ ಆಗಲೂ ಚಳಿಯಾ ಗುವ ಗಾಳಿ ಬೀಸುತ್ತಿತ್ತು. ದೂರದಲ್ಲಿ ಎಲ್ಲೋ ಮಳೆ ಬೀಳುತ್ತಿರಬೇಕು. ಕಿಟಿಕಿಯ ಕಂಬಿಗಳ ಮೂಲಕ ನೋಡಿದಾಗ ದನದ ಕೊಟ್ಟಿಗೆಯೂ ಅದರ ಹಿಂದಿದ್ದ ಅಯಿಸಿ ಮರದ ಕೊಂಬೆಗಳೂ ರಾತ್ರಿಯ ನೆರಳುಗಳಂತೆ ಕಾಣುತ್ತಿದ್ದುವು. ತೀರ ಚಳಿಯಾದಾಗ ಎದ್ದು ಕಿಟಿಕಿಯನ್ನು ಭದ್ರವಾಗಿ ಹಾಕಿದ.

ತುಂಬ ಕತ್ತಲೆ. ಭಯವುಂಟಾಗಲಿಲ್ಲ. ಸ್ವಲ್ಪ ಮೇಲಿನ ಕೊಠಡಿಯಲ್ಲಿ ಅಮ್ಮಿಣಿ ಅಕ್ಕನೂ ಮಾಳುವೂ ಇದ್ದಾರೆ. ಎದುರು ಭಾಗದ ತಿರುಗಾಡುವ ಜಾಗದಿಂದ ಸ್ವಲ್ಪ ಮುಂದಿನ ಕೋಣೆಯಲ್ಲಿ ದೊಡ್ಡಮ್ಮನೂ ಮಕ್ಕಳೂ ಇದ್ದಾರೆ. ಕೆಳಗೆ ಬಡಗು ಪಾರ್ಶ್ವಕ್ಕೆ ಹತ್ತಿರದ ಕೊಠಡಿಯಲ್ಲಿ ಗೊರಕೆ ಹೊಡೆಯುವ ಶಬ್ದ ಕೇಳಸುತ್ತಿದೆ.

ಕಣ್ಣು ರೆಪ್ಪೆಗಳನ್ನು ಮುಚ್ಚಿಕೊಂಡು ಮಲಗಿದ. ಕತ್ತಲೆಯೂ ತಂಪೂ ಇದ್ದಾಗ ಮಲಗುವುದಕ್ಕೆ ಹಿತ. ಹೊದೆಯುವುದಕ್ಕೇನೂ ಇಲ್ಲ. ಮಳೆ ಬೀಳುವುದಕ್ಕೆ ಪ್ರಾರಂಭ ವಾದಾಗ ಅಮ್ಮ ಹೊದಿಸುತ್ತಿದ್ದಳು. ವಿಪರೀತ ಚಳಿಯಾದರೆ ಪಕ್ಕದಲ್ಲಿ ಮಲಗಿಸಿ ಕೊಳ್ಳುತ್ತಿದ್ದಳು. ಅದು ತುಂಬ ಹಿಂದೆ.

ಎಷ್ಟೋ ವರ್ಷಗಳ ಹಿಂದೆ ನಡೆದ ಸಂಗತಿಗಳಂತೆ ಅವನಿಗೆ ತೋರುತ್ತಿದೆ.

ತಾಯಿಯನ್ನು ಕುರಿತು ತನಗರಿಯದಂತೆ ಯೋಚಿಸಿದ್ದ.

ಮನಸ್ಸು ತೀರ ಗೊಂದಲಕ್ಕೊಳಗಾಯಿತು. ಕಳೆದು ಹೋದದ್ದನ್ನು ಕುರಿತು

ಆಲೋಚಿಸಬಾರದು .... ಅವನು ಬಲವಾಗಿ ಕಣ್ಣು ರೆಪ್ಪೆಗಳನ್ನು ಮುಚ್ಚಿಕೊಂಡು ಮಲಗಿದ. ನಿಧಾನವಾಗಿ ಕಣ್ಣಿಗೆ ನಿದ್ದೆ ಹತ್ತುತ್ತಿತ್ತು.

—ಮೇಘ ಮಾಲೆಗಳ ಮಧ್ಯದಲ್ಲಿ ಎದ್ದುನಿಂತ ಮಾಳಿಗೆಯನ್ನು ನೋಡಿದಾಗ ರಾಜ ಕುಮಾರ ಕುದುರೆಯ ಎಡ ಕಿವಿಯನ್ನು ತಿರುಗಿಸಿದ. ಕುದುರೆ ಮೇಲೆ ಮಾಳಿಗೆಯ ಹತ್ತಿರ ಹೋಗಿ ನಿಂತಿತು. ರೇಷ್ಮೆಯ ಹಾಸಿಗೆಯಲ್ಲಿ ರಾಜಕುಮಾರಿ ಕುಳಿತು ವೀಣೆ ನುಡಿಸುತ್ತಿದ್ದಾಳೆ ....

ಯಾರೋ ಎದೆಯ ಮೇಲೆ ಕೈಯಾಡಿಸಿದ ಹಾಗಾಯಿತು. ಥಟ್ಟನೆ ತಲೆಗೂದಲೆಲ್ಲ ನೆಟ್ಟಗಾದುವು. ಆದರೂ ಕಣ್ಣು ಬಿಡಲಿಲ್ಲ. ಎದೆಯ ಮೇಲೆ ಒಂದು ಹಸ್ತವಿದೆ. ದೀಪ ಎನ್ನಿಸಿತು. ಉಂಗುರ ಹಾಕಿದ್ದ ಬೆರಳುಗಳು ಮುಖವನ್ನು ತಡವಿದುವು.

"ನಾನು ಅಪ್ಪುಣ್ಣೀ"

ಒಂದು ನಿಮಿಷ. ಓ! ತಿಳಿಯಿತು. ಭಯಪಡಬೇಕಾಗಿಲ್ಲ. ಗಾಜಿನ ಬಳೆಗಳ ಶಬ್ದ ... ಎದೆಯ ಮೇಲಿಟ್ಟ ಹಸ್ತದಲ್ಲಿ ಬಿಸಿಯಿದೆ.

ಮತ್ತೂ ಕಣ್ಣುಗಳು ತಾವಾಗಿ ಮುಚ್ಚಿಕೊಂಡುವು. ನಿದ್ದೆಯ ಆಳಕ್ಕೆ ಮನಸ್ಸು ಇನ್ನೂ ಹೋಗಿ ಮುಟ್ಟಿರಲಿಲ್ಲ. ಬಿಸಿಯಾದ ಉಸಿರು ಮುಖಕ್ಕೆ ತಾಗಿತು.

ಪಿಸು ದನಿಯಲ್ಲಿ ಒಂದು ಶಬ್ದ ಕೇಳಿಸಿತು.

"ಭಯವಾಗುತ್ತಾ?"

ಚಳಿಯಿಂದ ಶೀತವಾಗಿದ್ದ ಶರೀರದಲ್ಲಿ ಬಿಸಿಯುಂಟಾಗುತ್ತಿದ್ದಂತೆ ತೋರಿತು. ಬಿಸಿ ಯಾದ ಮೃದುವಾದ ಕೈಗಳು ಶರೀರದಲ್ಲಿ ಅಲ್ಲಲ್ಲಿ ಸಂಚರಿಸಿದ್ದುವು. ಸೋಪಿನ ಸುಗಂಧ ವ್ಯಾಪಿಸಿತು ... ಶರೀರವೆಲ್ಲ ರೋಮಾಂಚನಗೊಂಡಂತೆ ತೋರಿತು , ..

ಕಣ್ಣು ಬಿಡಬೇಕು ಅನ್ನಿಸಿತ್ತು.

—ಹಾರುವ ಕುದುರೆಯ ಮೇಲೆ ರಾಜಕುಮಾರನೂ ರಾಜಕುಮಾರಿಯೂ ಸಂಚರಿಸುತ್ತಿದ್ದಾರೆ. ಮೇಘಮಾಲೆಗಳ ಮಧ್ಯೆ! ಮೇಘಗಳಂತೆ ತೋರಿದುವು ಹೂ ಬಿಟ್ಟು ನಿಂತಿದ್ದ ಕಾಡು ಮಲ್ಲಿಗೆಯ ಬಳ್ಳಿಗಳು ಕೊಂಬೆಗಳನ್ನೂ ಬಳ್ಳಿಗಳನ್ನು ಮುಟ್ಟಿ ತಡವಿಕೊಂಡು ಹೋಗುತ್ತದೆ.

ಹೂವಿನ ದಳಗಳು ಕೆನ್ನೆಯ ಮೇಲೆ ... ಹೂವಿನ ದಳಗಳಿಗೂ ಶಾಖವಿದೆ.

ಕಾಡುಮಲ್ಲಿಗೆಯ ಬಳ್ಳಿಗಳ ಹೂಬಿಟ್ಟ ಮರಗಳ ಗುಂಪಿನ ಹತ್ತಿರ ಕುದುರೆ ತಿರುಗಾಡುತ್ತಿದೆ. ಹೆದರಿದ್ದ ರಾಜಕುಮಾರಿಯ ಕೈಗಳು ರಾಜಕುಮಾರನನ್ನು ತಬ್ಬಿ ಹಿಡಿದಿವೆ. ಆತನಿಗೆ ಉಸಿರು ಕಟ್ಟುತ್ತಿದೆಯೆ?

ಸಾಕಿದ ಪಾರಿವಾಳಗಳು ಎದೆಯ ಮೇಲೆ ಕುಳಿತು ಕುಟುಕಿದಂತೆ ಅವನು ಈಗ ಎಲ್ಲಿದ್ದಾನೆ? ಹಾರುವ ಕುದುರೆಯ ಮೇಲೆ ರಾಜಕುಮಾರಿಯನ್ನು ಅಪ್ಪಿಕೊಂಡು ...

ರೇಷ್ಮೆಯ ಉಡುಗೆಗಳೂ ಪೇಟವೂ ಇರುವ ರಾಜಕುಮಾರ ತಾನೇ ಅಲ್ಲವೆ? ವೃಕ್ಷ ಸಮೂಹಗಳ ಮುಂದೆ ಹೋಗುತ್ತಿದ್ದಾನೆ. ರಾಜಕುಮಾರನ ರೇಷ್ಮೆ ಉಡಿಗೆ ಹಾರಿ ಬೀಳುತ್ತಿದೆ ಗಾಳಿಗೆ . . . ಮುಳ್ಳು ಗೊನೆಗಳು ಶರೀರವನ್ನು ಅಲ್ಲಲ್ಲಿ ಪರಚಿದಂತಾಗುತ್ತಿದೆ —

ಮೇಲೆ—ಮೇಲಕ್ಕೆ ರಾಜಕುಮಾರಿಯನ್ನೂ ರಾಜಕುಮಾರನನ್ನೂ ಕೂರಿಸಿಕೊಂಡು ಮಾಯದ ಕುದುರೆ ದೌಡಾಯಿಸುತ್ತದೆ.

"ಅಪ್ಪಣ್ಣಿ ಅಣ್ಣಾ."

ಮಾಳುವಿನ ಶಬ್ದವನ್ನು ಕೇಳಿ ಎದ್ದದ್ದು.

"ಎಷ್ಟು ಹೊತ್ತಾಗಿದೆ ಗೊತ್ತಾ?"

ಅಪ್ಪಣ್ಣಿ ದಡಬಡನೆ ಎದ್ದು ಕಣ್ಣು ಬಿಟ್ಟ. ಲುಂಗಿಯನ್ನು ಸರಿಪಡಿಸಿಕೊಂಡ. ಮುಚ್ಚಿದ್ದ ಕಿಟಿಕಿಯನ್ನು ತೆರೆದಾಗ ಬಿಸಿಲು ಒಳಕ್ಕೆ ನುಗ್ಗಿ ಬಂದಿತು. ಸುಮಾರು ಹೊತ್ತಾಗಿತ್ತು. ಥಟ್ಟನೆ ಅವನಿಗೆ ಏನೋ ನೆನಪಾಯಿತು. ರಾತ್ರಿಯೆಲ್ಲ ಸ್ವಪ್ನ ಕಾಣುತ್ತಿದ್ದೆ ಎನ್ನಿಸಿತು. ಮಂಜು ಮುಸುಕಿದ ಪ್ರಾತಃಕಾಲದಲ್ಲಿ ದೂರದಲ್ಲಿ ಕಾಣುವ ದೃಶ್ಯಗಳ ಹಾಗೆ ಎಲ್ಲವೂ ಅಸ್ಪಷ್ಟ. ಚಾಪೆ ಸುತ್ತಿ ಮೂಲೆಗೆ ಒರಗಿಸುವುದಕ್ಕೆ ಎತ್ತಿದಾಗ ಏನೋ ಕೆಳಗೆ ಬಿದ್ದ ಹಾಗಾಯಿತು.

ಕೆಂಪು ಗಾಜಿನ ಬಳೆಯ ಚೂರುಗಳು. ಒಳಗಡೆ ಹಳದಿ ಬಣ್ಣದ ನೂಲಿನಂತೆ ಹೊಳೆಯುವ ಬಿಳಿಯ ರೇಖೆಯುಳ್ಳ ಕೆಂಪು ಬಳೆಯ ಚೂರುಗಳು.

ಮಾಳು ಹೋದಳೋ ಎಂದು ಅವನು ಮೊದಲು ನೋಡಿದ. ಅವಳು ಅಲ್ಲಿಂದ ಹೋಗಿದ್ದಳು.

ಆ ಬಳೆಯ ಚೂರುಗಳನ್ನು ಆರಿಸಿ ಕೈಗೆತ್ತಿಕೊಂಡು ಅವನು ನೇರವಾಗಿ ತೋಟಕ್ಕೆ ಹೋದ. ತುಂಬಿ ನಿಂತಿತ್ತು ಕೊಳ. ಅದರ ಕಟ್ಟೆಯ ಕಂಬಕ್ಕೆ ಕಟ್ಟಿದ್ದ ಅಡಕೆ ಪಟ್ಟೆಯ ದೊನ್ನೆಯಿಂದ ಒಂದು ಹಿಡಿ ಉಮಿ ಬೂದಿಯನ್ನು ನೆನೆಸಿಟ್ಟು—ಚಪ್ಪಡಿ ಕಲ್ಲಿನ ಮೇಲೆ ಹೋಗಿ ಕುಳಿತುಕೊಂಡ.

ಒಡೆದ ಬಳೆ ಚೂರುಗಳನ್ನು ಒಂದೊಂದನ್ನಾಗಿ ಅವನು ಕೊಳದ ಮಧ್ಯಕ್ಕೆ ಎಸೆದ, ಬಣ್ಣದ ದುಂಬಿಗಳಂತೆ ಹಾರಿಹೋಗಿ ನೀರನ್ನು ಕಲಕಿ ಸುಳಿದಾಡುತ್ತ ಕೆಳಕ್ಕೆ ಇಳಿಯುವುದನ್ನು ನೋಡುತ್ತಾ ಅವನು ಕುಳಿತಿದ್ದ.

ಎಳೆಬಿಸಿಲು ಬಿದ್ದು ಬೆಳ್ಳಗೆ ಕಾಣಿಸುತ್ತಿದ್ದ ನೀರಿನಲ್ಲಿ ಕೆಂಪಾದ ಬಳೆ ಚೂರುಗಳು ತಳಕ್ಕಿಳಿಯುವುದು ಸ್ವಲ್ಪ ಆಳದ ವರೆಗೆ ಕಾಣಿಸುತ್ತಿತ್ತು.

ಬೇಸರವೂ ವ್ಯಸನವೂ ಉಂಟಾಯಿತು. ಅದರ ಮಧ್ಯೆ ನಿಗೂಢವಾದ ಒಂದು ಆನಂದವನ್ನುಂಟುಮಾಡುವ ವರ್ಣಶಿಲೆಯಂತಿದ್ದ ಒಂದನ್ನು ತೆಗೆದಿಟ್ಟುಕೊಂಡ.

ಒಂಟಿಯಾಗಿರುವಾಗ ಯಾರೂ ಕಾಣದ ಸ್ಥಳದಲ್ಲಿ ಪ್ರೀತಿಸುವುದಕ್ಕಾಗಿತ್ತು ಅದು.

*　*　*　*　*

ಮಧ್ಯಸ್ಥಿಕೆಗಾರರು ಅನೇಕರು ಮನೆಗೆ ಬಂದರು; ಚರ್ಚಿಸಿದರು. ಯಾವ ತೀರ್ಮಾನಕ್ಕೂ ಬಂದಿರಲಿಲ್ಲ.

ಹೊರಗಿನ ಅಂಗಳದ ಕಡೆಯಿಂದ ಪಾಲುಮಾಡಿಕೊಳ್ಳುವ ವಿಷಯವನ್ನು ಕೇಳಿದಾಗ ಅಜ್ಜಿಗೆ ಒಳಗಡೆ ಕುಳಿತಿರುವುದಕ್ಕಾಗಲಿಲ್ಲ. ಅವರು ಅರವತ್ತು ವರ್ಷ ಬಾಳಿದ ಮನೆ ಅದು. ಅದರಲ್ಲೇ ಕಣ್ಣು ಮುಚ್ಚಬೇಕು ಎನ್ನುವ ಉದ್ದೇಶ ಅವರದು. ದಿನಕ್ಕೆ ಹತ್ತು ಸಲವಾದರೂ ಹಾಗನ್ನುತ್ತಿದ್ದರು.

ಕುಟ್ಟಿ ಮಾವನನ್ನು ಕಂಡಾಗ ಅಜ್ಜಿ ಎಲ್ಲ ವಿಷಯವನ್ನೂ ಹೇಳಿದರು. "ನೋಡು ನಾನು ಕಣ್ಣು ಮುಚ್ಚಿಕೊಳ್ಳೋದಕ್ಕೆ ಮೊದಲೇ ಈ ಮನೆ ಒಡೆದು ಹಾಕ್ತೀಯಲ್ಲೋ" ಎಂದರು.

ಅದಕ್ಕೆ ಕುಟ್ಟಿಮಾವ ಏನೂ ಮಾತಾಡಲಿಲ್ಲ. ದೊಡ್ಡಪ್ಪನಿಗೆ ದೋಣಿ ಕಡವಿನ ಹತ್ತಿರದ, ವರ್ಷಕ್ಕೆ ಮೂರು ಬೆಳೆ ಬೆಳೆಯುವ – ಜಮೀನು ಸಿಕ್ಕಬೇಕು ಎನ್ನುವ ಆಶೆ.

"ನಾನೂ ನನ್ನ ಮಕ್ಕಳೂ ಕಷ್ಟಕ್ಕೊಳಗಾಗ್ತೀವಿ. ನಮ್ಮ ವಿಚಾರ ಕೇಳೋದಕ್ಕೆ ಯಾರಿದ್ದಾರೆ ಇಲ್ಲಿ?" ಎನ್ನುತ್ತಿದ್ದರು.

ಊರಿನವರು 'ವಕೀಲರು' ಎಂದು ಕರೆಯುತ್ತಿದ್ದ ಕಾರ್ಯದರ್ಶಿ ಕುಮಾರನ್ ನಾಯರೂ, ಕೋರುಕುಟ್ಟಿ ಪಣಿಕ್ಕರರೂ ಬಾರದ ದಿನಗಳಿಲ್ಲ. ಅಷ್ಟು ಸುಲಭದಲ್ಲಿ ಪಾಲು ಮಾಡಲು ಸಾಧ್ಯವಿಲ್ಲ ಎಂದು ಪಣಿಕ್ಕರ್ ಹೇಳುವುದು. ಅನೇಕ ಕಡೆಗಳಲ್ಲಿರುವ ಹೊಲಗದ್ದೆಗಳನ್ನು ಅಳೆಯಬೇಕು. ಬೆಲೆ ಕಟ್ಟಬೇಕು. ಕೆಲವು ಭೂಮಿಗಳು ಅಡವಿನಲ್ಲಿವೆ. ಅಜ್ಜಿ ಪಾಲು ತೆಗೆಯಬೇಕು. ಇದೆಲ್ಲಕ್ಕೂ ಎಷ್ಟು ಪಾಲುಗಳು ಎನ್ನುವ ವಿಷಯ ತೀರ್ಮಾನವಾಗಬೇಕು.

ದೊಡ್ಡ ಮಾವನ ವಾದ ತನಗೆ ಎರಡು ಭಾಗ ಬರಬೇಕು ಎಂದು. ಅವರು ಹೇಳುವುದು—ತುಂಬ ವರ್ಷಗಳಿಂದ ಈ ಕುಟುಂಬದ ಮನೆ ನಡೆಸಿಕೊಂಡು ಬಂದಿದ್ದೇನೆ. ಯಜಮಾನನಿಗೆ ಎರಡು ಪಾಲು ಆಸ್ತಿ ಕೊಡುವುದು ಮೊದಲಿನಿಂದಲೂ ಇರುವ ಪದ್ಧತಿ. ತನ್ನಿಂದಾಗಿ ಈ ಕುಟುಂಬದಲ್ಲಿ ಎಷ್ಟೋ ಅಭಿವೃದ್ಧಿ ಕಾರ್ಯಗಳು ನಡೆದಿವೆ—ಎಂದು.

ಈ ವಿಷಯವನ್ನು ಕುಮಾರನ್ ನಾಯರ್ ಕುಟ್ಟಿಮಾವನ ಗಮನಕ್ಕೆ ತಂದಾಗ ಕುಟ್ಟಿಮಾವ ಒಂದು ಸಲ ಕ್ಯಾಕರಿಸಿ ನೆಲಕ್ಕೆ ಉಗುಳಿದರು.

"ಅಭಿವೃದ್ಧಿ! ಅಭಿವೃದ್ಧಿ ಮಾಡಿದ್ದು ಈ ಮನೇಲಲ್ಲ. 'ಹೂದೋಟ'ದ ಜಮೀನಿನಲ್ಲಿ!"

ದೊಡ್ಡ ಮಾವನೂ ಕುಟ್ಟಿಮಾವನೂ ಎದುರೆದುರು ನಿಂತು ಮಾತನಾಡುವುದಿಲ್ಲ. ಅವರಿಬ್ಬರ ಪರವಾಗಿ ಪಣಿಕ್ಕರರೂ ಕುಮಾರನ್ ನಾಯರೂ ಮಾತನಾಡುತ್ತಿದ್ದರು. ದೊಡ್ಡ ಮಾವ ಖಡಾಖಂಡಿತವಾಗಿ ಹೇಳಿದ್ದರು. ಎರಡು ಪಾಲು ಭೂಮಿ ಕೊಡುವುದಕ್ಕೆ ಸಮಾಧಾನವಿದ್ದರೆ, ಬಡಗು ಭೂಮಿ, ತನ್ನ ಸ್ವಂತ ಸ್ವತ್ತು ಎನ್ನುವುದನ್ನು ಒಪ್ಪುವುದಿದ್ದರೆ ಮಾತ್ರ ಪಾಲು ಮಾಡಿಕೊಳ್ಳುವುದಕ್ಕೆ ಒಪ್ಪುತ್ತೇನೆ. ಇಲ್ಲದಿದ್ದರೆ ಅದು ಹೇಗೆ ಪಾಲಾಗುತ್ತದೆ ಅದನ್ನೂ ನೋಡುತ್ತೇನೆ ಎಂದಿದ್ದರು.

ಆಗ ಮಧ್ಯಸ್ಥಿಕೆ ವಹಿಸಲು ಕಳತ್ತಿಲ್ ನಂಬಿಯಾರ್ ಬಂದದ್ದು.

ಆ ದಿನ ಅಪ್ಪುಣ್ಣಿಗೆ ರಜವಿತ್ತು. ಕೊನೆಯ ವರ್ಷ. ಪಬ್ಲಿಕ್ ಪರೀಕ್ಷೆ. ತುಂಬ ಓದಿಕೊಳ್ಳಬೇಕಾಗಿತ್ತು. ಈ ದಿನ ತೀರ್ಮಾನ ಮಾಡುವ ದಿನವೆಂದು ಕೇಳಿದ್ದ. ಆದ್ದರಿಂದಲೇ ವಕೀಲ್ ಕುಮಾರನ್ ನಾಯರೂ ಕೋರುಕುಟ್ಟಿ ಪಣಿಕ್ಕರರೂ ಬಂದಾಗ ತೆಂಕ ಮನೆಗೆ ಹೋಗಿ ಆರಾಮ ಕುರ್ಚಿಯ ಹತ್ತಿರ ನಿಂತುಕೊಂಡ.

ಮಧ್ಯಸ್ಥಿಕೆಗಾರ ಬಂದದ್ದು ಆ ಮೇಲೆ. ಕಳತ್ತಿಲ್ ನಂಬಿಯಾರ್ ಊರಿನಲ್ಲೆಲ್ಲ ತುಂಬ ಪ್ರಾಮಾಣಿಕ ವ್ಯಕ್ತಿಯೆಂದು ಹೆಸರಾಗಿದ್ದರು. ಆತ ಮೆಟ್ಟಿಲು ಹತ್ತಿ ಬರುತ್ತಿದ್ದುದನ್ನು ಕಂಡಾಗ ಬತ್ತಾಯದ ಮನೆಯ ಮಹಡಿಯಲ್ಲಿದ್ದ ಆರಾಮ ಕುರ್ಚಿಯನ್ನು ತೆಗೆದುಕೊಂಡು ಹೋಗಿ ಹಾಕಿದ್ದರು. ಎಲೆ ಅಡಿಕೆ ಪೆಟ್ಟಿಗೆ ತರುವಂತೆ ಒಳಕ್ಕೆ ಹೇಳಿ ಕಳುಹಿಸಿದರು.

ತೆಂಕುಮನೆಯಲ್ಲಿ ಮಂಚದ ಪಟ್ಟಿಯನ್ನು ಒರಗಿಕೊಂಡು ದೊಡ್ಡಮ್ಮನೂ ಮಕ್ಕಳೂ ಕುಳಿತುಕೊಂಡರು.

ವಾಳಾವಿಲ್ ದೇವಸ್ಥಾನದ ಮುಖಮಂಟಪದ ಕೆಲಸ ಇನ್ನೂ ಎಷ್ಟು ಬಾಕಿಯಿದೆ ಎನ್ನುವ ವಿಷಯವನ್ನು ದೊಡ್ಡ ಮಾವನೂ ಮಧ್ಯಸ್ಥಿಕೆಗಾರರೂ ಮಾತನಾಡುತ್ತಿದ್ದರು. ಪಾಲು ಮಾಡುವುದು ಹೇಗೆ ಎನ್ನುವುದು ತಿಳಿಯದೆ ಕಷ್ಟಪಡುತ್ತಿರುವುದು ವಕೀಲ್ ಕುಮಾರನ್ ನಾಯರಿಗೆ ಗೊತ್ತಾಯಿತು. ಆತನ ನಡೆನುಡಿಗಳಿಂದ ಅದು ವ್ಯಕ್ತವಾಗುತ್ತಿತ್ತು.

"ಅಳಿಯನಿಗೂ ಪಾಲು ಬರಬೇಕೂಂತ ಬಂದು ಹೇಳಿದರು. ಹೊರಗೂ ಆ ಮಾತು ಕೇಳಿ ಬರ್‍ತಿದೆ."

ಹಾಗೆ ಯಜಮಾನರೇ ವಿಷಯಕ್ಕೆ ಬಂದದ್ದು.

ದೊಡ್ಡ ಮಾವ ಹೊರಕ್ಕೆ ಹೋಗಿ ಅಂಗಳದ ಪಕ್ಕದಲ್ಲಿ ಬಾಳೆಯ ತೋಟದ ಕಡೆಗೆ ಕ್ಯಾಕರಿಸಿ ಉಗಿದು ಬಂದರು.

"ಆಗಲಿ."

ಯಜಮಾನರು ಪುನಃ ಗಟ್ಟಿಯಾಗಿ ನಕ್ಕರು.

"ಅದು ಹೇಗೆ ಅಂತಲೇ ಹೇಳಲಿಲ್ಲವಲ್ಲ?"

"ಪಾಲಾದರೆ ನನಗೇನು ತೊಂದರೆ? ಈ ತಲೆ ಹೊರೆಯೇ ಕಳಗಿಳಿಯಿತು. ಆದರೆ ಯಜಮಾನರೇ — ಅದರಲ್ಲಿ ಒಂದು ವಿಷಯ ಇದೆ......"

"ಅದೇನು ಹೇಳಿ ಕುಂಞಕೃಷ್ಣನ್ ನಾಯರೇ"

"ಈ ತರವಾಡಿನ ವಿಷಯವಾಗಿ ನಿಮ್ಮ ಹತ್ತಿರ ಹೆಚ್ಚಿಗೆ ಏನೂ ವಿವರಿಸಬೇಕಾಗಿಲ್ಲ. ಅಚ್ಚುಮಾವ ಇದ್ದ ಕಾಲದಲ್ಲಿ ನಾಯರ್ ಸಮುದಾಯದಲ್ಲೇ ಈ ತರವಾಡಿಗಿದ್ದಷ್ಟು ಭೂಮಿಯಿರಲಿಲ್ಲ."

"ನನಗೆ ಗೊತ್ತು. ನನಗೆ ಗೊತ್ತು."

"ಅದೇ ನಾನು ಹೇಳಿದ್ದು ಯಜಮಾನರೇ, ಈಗಿನ ಹುಡುಗ ನಿಮಗೆ ಗೊತ್ತಿಲ್ಲ? ಈ ಮನೆ ಆಗ ಪಾಲಾದಾಗ ಅರವತ್ತುನಾಲ್ಕು ಜನರಿದ್ದರು. ಪಾಲಾದ ಮೇಲೆ ಇದರ ತೇಜಸ್ಸು ಹೋಯ್ತು. ಆದರೂ ಭಗವತಿ ಇರುವ ಸ್ಥಳ. ಅದೂ ಯಜಮಾನರಿಗೆ ಗೊತ್ತಲ್ಲ?"

'ನನಗೆ ಗೊತ್ತು, ನನಗೆ ಗೊತ್ತು' ಎನ್ನುವ ಅರ್ಥದಲ್ಲಿ ಯಜಮಾನರು ತಲೆ ಯಾಡಿಸಿದರು.

"ಹಾಗೇ ಮತ್ತೊಂದು ವಿಷಯ ಕೇಳ್ತೀರಾ ಯಜಮಾನರೇ. ಒಂದಿನ ಹೆಸರು, ಈ ಹಳೇ ಕಾಲದ ಮನೆ ನೋಡಿಕೊಳ್ಳೋರಿಲ್ಲದೆ ಉಳಿದಿತ್ತು. ಇನ್ನೇನು ಮಾಡು ವುದು? ನಾನು ಈ ಮನೆ ನೋಡಿಕೊಳ್ಳೋದಕ್ಕೆ ಬಂದ ಮೇಲೆ ನನ್ನ ಕೈಯಲ್ಲಾಗ ದಿದ್ದರೂ ಒಂದು ಬಿಡಿಗಾಸಿನ ವ್ಯತ್ಯಾಸವಿಲ್ಲದಂತೆ ನೋಡಿಕೊಂಡು, ಬಂದೆ. ಒಂದು ರೀತಿಯಲ್ಲಿ ಸರಿಯಾಗಿ ನೋಡಿಕೊಂಡು ಹೋಗೋದಕ್ಕಾದದ್ದು ನಾನಾದ್ದರಿಂದ ನಮ್ಮ ನಮ್ಮೊಳಗೇ ಜಗಳ ಮಾಡಿಕೊಂಡು ಪಾಲಾದರೆ—?"

ದೊಡ್ಡ ಮಾವ ಸ್ವಲ್ಪ ಹೊತ್ತು ಮಾತು ನಿಲ್ಲಿಸಿದರು. ಆ ಮೇಲೆ ಸ್ವಲ್ಪ ಗೌರವ ಬೆರೆತ ಧ್ವನಿಯಲ್ಲಿ ಅಭಿನಯ ಪೂರ್ವಕವಾಗಿ ಹೇಳಿದರು:

"ಕಟ್ಟಿ ಕಡೆಗೆ ಎಳ್ಳು ಬೆಳೆಯುವುದಕ್ಕಾಯ್ತು. ಅದಕ್ಕೆ ಇನ್ನು ಹೆಚ್ಚು ಕಾಲಬೇಡ."

ಅಷ್ಟು ಹೊತ್ತಿಗೆ ಮೆಲ್ಲಗಿದ್ದರೂ ಗಂಭೀರವಾದ ಮಾತು ಕೇಳಿಸಿತು.

"ಭಾಗವಾಗಬೇಕು ಅಂತ ಇದ್ದರೆ ಅದು ಆಗೋದೇ ಹಾಗೆ."

ಯಜಮಾನರು ನೋಡಿದರು. ಕುಟ್ಟಿ ಮಾವ ಮುಂದೆ ಬಂದಿದ್ದರು.

"ಕುಟ್ಟಿ ನಾಯರ್‌ಗೆ ವರ್ಷಕ್ಕೆ ಇಷ್ಟು ಅಂತ ಕೊಟ್ಟರೆ ಆಗದೆ? ಯಾಕೆ ಪಾಲು ಮಾಡಬೇಕು?"

ಕುಟ್ಟಿ ಮಾವ ತಕ್ಷಣ ಉತ್ತರ ಹೇಳಲಿಲ್ಲ. ವಕೀಲ್ ಕುಮಾರನ್ ನಾಯರ್ ಯಾವ ಅರ್ಥವೂ ಇಲ್ಲದ ಒಂದು ನಗೆಯನ್ನು ತಂದುಕೊಂಡು ಹೇಳಿದರು.

"ಕುಟ್ಟನ್ ನಾಯರ ಅವಶ್ಯವನ್ನು ಹೇಳಿದ್ದು ಅಷ್ಟೇ—"

"ನನಗೆ ಗೊತ್ತು, ನನಗೆ ಗೊತ್ತು." ಯಜಮಾನರು ಆ ಮಾತನ್ನು ಪೂರ್ತಿ ಕೇಳಿಸಿಕೊಳ್ಳದೆ "ನಿಮ್ಮ ಪರದಾಟ ನೋಡಿದರೆ ನೀವೇ ಪಾಲು ಮಾಡುವುದಕ್ಕೆ ಹೊರಟಹಾಗಿದೆ."

ವಕೀಲ್ ಕುಮಾರನ್ ನಾಯರ್ ಮತ್ತೂ ನಕ್ಕರು.

"ಏನು ಕುಟ್ಟನಾಯರೇ?"

"ಅದೆಲ್ಲ ಮೊದಲೇ ಆಗಬೇಕಾಗಿತ್ತಲ್ಲ?"

ಕುಟ್ಟಿ ಮಾವ ಅಂಗಳದಿಂದ ಪಡಸಾಲೆಗೆ ಬಂದರು. ಯಜಮಾನರು ಕುಳಿತಿದ್ದ ಕುರ್ಚಿಯ ಕೈಹಿಡಿದುಕೊಂಡು ಹೇಳಿದರು.

"ಇಲ್ಲಿ ನೋಡಿ. ನಾನು ಹೇಳೋದನ್ನೂ ಕೇಳಬೇಕು. ನನಗೂ ವಯಸ್ಸಾಯ್ತು. ಹತ್ತು ಹದಿನಾಲ್ಕು ವರ್ಷದ ಹುಡುಗಿಯ ತಂದೆ ನಾನು. ಕೌಪೀನ ಹಾಕಿಕೊಳ್ಳುತ್ತಿದ್ದ ಕಾಲದಲ್ಲೇ ವ್ಯವಸಾಯಕ್ಕೆ ನಿಂತೆ. ಆದರೆ ನನಗೇನು ತೆಂಗಿನ ಗೊನೆ ಸಿಕ್ಕಿದ್ದು? ವರ್ಷಕ್ಕೆ ನಾಲ್ಕು ಲುಂಗಿ, ಐದು ಪರ ಭತ್ತ. ಇಲ್ಲಿ ಕೇಳಿ ಯಜಮಾನರೇ. ಕೂಲಿಗೆ ಹೋಗಿ ಸೌದೆ ಒಡೆದಿದ್ದರೂ ಇದಕ್ಕಿಂತ ಹೆಚ್ಚಿಗೆ ಸಂಪಾದನೆ ಮಾಡೋವಕ್ಕಾಗ್ತಿರಲಿಲ್ಲವೆ?"

ಮಧ್ಯಸ್ಥರು ತಾಂಬೂಲ ಜಗಿಯುತ್ತ ನಿಶ್ಶಬ್ದವಾಗಿ ಕೇಳಿಸಿಕೊಂಡರು. ಕುಟ್ಟಿ ಮಾವನಿಗೆ ಹೇಳಬೇಕಾದದ್ದು ಇನ್ನೂ ಮುಗಿದಿರಲಿಲ್ಲ.

"ತರವಾಡಿನ ಜವಾಬ್ದಾರೀನ ತುಂಬ ಕಷ್ಟಪಟ್ಟು ಹೊತ್ತುಕೊಂಡು ನಡೆಸಿದ್ದನ್ನ ಕೇಳಿದೆ. ಮಕ್ಕಳು ಅಳಿಯಂದಿರಿಗೆ ಒಳ್ಳೆಯದಾಗಲಿ ಅಂತಲೇ ಅಲ್ಲವೇ ಇಲ್ಲಿಯ ಗೇಣಿ ಸಂಗ್ರಹ ಮಾಡಿಕೊಂಡು ಹೋದದ್ದು? ಭಾಗವಾದರೆ ಈ ತರವಾಡೇನೂ ಹಾಳಾಗೋದಿಲ್ಲ."

ದೊಡ್ಡ ಮಾವನಿಗೆ ಸಿಟ್ಟು ಬಂದಿತು. ತಿರುಗಿ ನೋಡಿದರು ಎನ್ನಿಸಿತು. ಇಲ್ಲ ಅಲುಗಾಡುವುದಿಲ್ಲ. ದೊಡ್ಡ ಮಾವ ಯಾಕೆ ಏನೂ ಮಾತನಾಡದೆ ಸುಮ್ಮನೆ ಇದ್ದಾರಲ್ಲ? ಅಪ್ಪುಣ್ಣಿಗೆ ಆಶ್ಚರ್ಯವಾಯಿತು. ಕುಟ್ಟಿ ಮಾವನ ಗಂಟಲು ದೊಡ್ಡದಾಯಿತು.

"ಇನ್ನೂ ಒಂದು ಮಾತಿದೆ, ಕೇಳಿ ಯಜಮಾನರೇ. ವಡಕ್ಕೇಪಾಟ್ ಹೇಗಿದ್ದರೂ ಇವರಿಗೆ ಯೋಚನೆಯಿಲ್ಲ. ಅಲ್ಲಿ 'ಹೂದೋಟ'ದ ಜಮೀನು ಚೆನ್ನಾಗಿ ಅಭಿವೃದ್ಧಿಯಾಗ್ತಿದೆಯೋ ಇಲ್ಲವೋ ಅಂತ ನೋಡಿಕೊಂಡರೆ ಸಾಕು."

ದೊಡ್ಡ ಮಾವ ಕುಳಿತಲ್ಲಿಂದಲೇ ಕುಟ್ಟಿ ಮಾವನನ್ನು ನೋಡಿದರು. ಆ ಮೇಲೆ ಗಟ್ಟಿಯಾದ ಧ್ವನಿಯಲ್ಲಿ ಹೇಳಿದರು.

"ಲೋ"

"ಮುಚ್ಚಿಟ್ಟುಕೊಂಡು ಏನೂ ಪ್ರಯೋಜನವಿಲ್ಲ. ಹೇಳಬೇಕಾದವರ ಹತ್ರ ಹೇಳಿದರೆ ಸಾಕು."

ದೊಡ್ಡ ಮಾವ ವಿಪರೀತ ಸಿಟ್ಟಿನಲ್ಲಿ ಹೇಳಿದರು.

"ಪ್ರಾಮಾಣಿಕತೆಯಿಲ್ಲದವನೆ! ಹೇಳು. ಇನ್ನೂ ಹೇಳು. ನಾನು ಅಲ್ಲಿಗೆ ತೆಗೆದುಕೊಂಡು ಹೋಗೋದು ನಿಮ್ಮಪ್ಪನ ಸಂಪಾದನೆಯಲ್ಲ, ನಿಮ್ಮಪ್ಪನ—"

ಯಜಮಾನರು ಸಮಾಧಾನ ಪಡಿಸಲು ಹೇಳಿದರು.

"ಸಮಾಧಾನವಾಗಿ ಕುಂಞಿಕೃಷ್ಣನ್ ನಾಯರೇ. ಹುಡುಗರು ತಿಳುವಳಿಕೆಯಿಲ್ಲದೆ ಏನೇನಾದರೂ ಹೇಳಿ ಬಿಡ್ತಾರೆ."

"ಹೇಳೋದಕ್ಕೆ ನನಗೇನೂ ಹೆದರಿಕೆಯಿಲ್ಲ. ಎಲ್ಲವನ್ನೂ ಅಲ್ಲಿಗೆ ತೆಗೆದುಕೊಂಡು ಹೋಗಿ ಕೂಡಿಟ್ಟುಕೊಂಡಿದ್ದಾರಲ್ಲದೆ ಮತ್ತೇನು? ಅಲ್ಲಿಂದ ಯಾರಾದರೂ ಬಂದರೆ ನನ್ನ ಸಹೋದರಿಯರು ಬತ್ತಾಯದ ಮನೆಗೆ ಅನ್ನ ಸಾರು ಹೊತ್ತುಕೊಂಡು ಹೋಗಬೇಕು. 'ಹೂದೋಟ'ದವರ ದಾಸಿಯರಲ್ಲವೆ ಇಲ್ಲಿಯ ಹೆಂಗಸರು? ಕಿಲುಬು ಕಾಸಿಗೂ ಗತಿಯಿಲ್ಲದೆ ಬಿದ್ದಿರುವ ಜನರು?"

ತೆಂಕುಮನೆಯಲ್ಲಿ ನಡೆಯುತ್ತಿದ್ದ ಗಲಾಟೆಯನ್ನು ಕೇಳಿ ಅಜ್ಜಿ ಗಟ್ಟಿಯಾದ ಸ್ವರದಲ್ಲಿ ಹೇಳಿದರು.

"ಕುಟ್ಟಾ; ಜನರಿಗೆ ಅಂಜಬೇಕು ಕಣೋ"

ಕುಟ್ಟಿ ಮಾವನಿಗೆ ಮತ್ತೂ ಸಿಟ್ಟೇರಿತು. ಆಗ ಹೇಳಿದರು. "ಹೊಲೆಯನ ಹಾಗೆ ಕೆಲಸ ಮಾಡಬೇಕು. ಆದರೂ ಹುಳಿತ ನಾಯಿ ಕಂಡ ಹಾಗೆ ಕಾಣೋದು. ನನ್ನಿಂದಾಗಿ ಏನಾದರೂ ಅಧ್ವಾನ ಆಗಿದ್ದರೆ ಗೊತ್ತಾಗಬೇಕಾಗಿತ್ತಲ್ಲ"

"ಸುಮ್ಮನಿರಿ ನಾವೆಲ್ಲ ಸರಿ ಮಾಡೋಣ."

ದೊಡ್ಡ ಮಾವ ಹೊರಗೆ ಮರದ ಪಾದರಕ್ಷೆಗಳನ್ನು ಹಾಕಿಕೊಂಡು ಅತ್ತ ಇತ್ತ ತಿರುಗಾಡುತ್ತಿದ್ದರು. ಹೇಳಬೇಕಾದದ್ದನ್ನೆಲ್ಲ ಹೇಳಲಿ ಎನ್ನುವ ಮುಖಭಾವ ಅವರಲ್ಲಿತ್ತು.

ಕುಟ್ಟಿ ಮಾವ ಮತ್ತೇನೂ ಹೇಳುವಂಥಾದ್ದಿಲ್ಲವೆಂದು ತೋರಿದಾಗ ದೊಡ್ಡ ಮಾವ ಮಧ್ಯಸ್ಥರ ಮುಂದೆ ಬಂದು ನಿಂತು ಹೇಳಿದರು.

"ಯಜಮಾನರೇ ನನ್ನ ವಿಷಯವಾಗಿ ಹೇಳಿದ್ದಲ್ಲ — ಒಬ್ಬ, ಅವನು, ಅವನು..." ದೊಡ್ಡ ಮಾವನಿಗೆ ಉಸಿರು ಕಟ್ಟುತ್ತಿದ್ದ ಹಾಗೆ ತೋರಿತು. "ಇವರ ತಂದೆ ತೀರಿಕೊಂಡ ಕಾಲದಲ್ಲಿ ಇನ್ನೂ ಸಣ್ಣ ಹುಡುಗನಾಗಿದ್ದ ಕಾಲದಲ್ಲಿ ನಾನು ಇವನನ್ನು ಕಾಪಾಡಿದ್ದು. ಆದರೆ ಈಗ ತಲೆ ಮೇಲೆ ಕೂತುಕೊಳ್ಳೋದಕ್ಕೆ ಬರ್ತಾನೆ. ಮೊದಲೆಲ್ಲ ಇರಲಿಲ್ಲ ಇದು."

ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ದೊಡ್ಡ ಮಾವ ಆ ಮೇಲೆ ಹೇಳಿದರು.

"ನೋಡಿ; ಇವರನ್ನೆಲ್ಲ ಒಟ್ಟಿಗೆ ಇರಿಸಿಕೊಂಡು ನೋಡಿಕೊಳ್ಳೋದಕ್ಕೆ ಸಾಧ್ಯವಿಲ್ಲ. ಪಾಲಾಗಲಿ. ನಿಮಗೆ ಹೇಗೆ ತಿಳೀತದೋ ಹಾಗೆ ಮಾಡಿ"

ಒಳಗಡೆ ಅಜ್ಜಿ ಹೊದೆದಿದ್ದ ವಸ್ತ್ರದ ತುದಿಯನ್ನು ಹಿಡಿದುಕೊಂಡು ಕಣ್ಣೊರಸಿಕೊಂಡರು.

"ಯಾತಕ್ಕೂ ಬೇಡದ್ದು ನನಗೆ ಸಿಕ್ಕಿದ್ದು. ಆದ್ದರಿಂದ ನಾನು ಹೇಳುವುದು ನನಗೆ ಎರಡು ಪಾಲು ಬೇಕು ಅಂತ. ನನಗೆ ಈ ಮನೆಯದು ಒಂದು ಕಾಸೂ ಬೇಡ. ತರವಾಡು ನೋಡಿಕೊಂಡವರಿಗೆ ಎರಡು ಪಾಲು ಕೊಡಬೇಕು ಅನ್ನೋದು ಮೊದಲಿನಿಂದಲೂ ಇದೆ."

"ಅದೆಲ್ಲ ನಡೆಯೋದಿಲ್ಲ" ಕುಟ್ಟಿ ಮಾವ ಮತ್ತೂ ಶಬ್ದ ಮಾಡಿದರು.

ಮಧ್ಯಸ್ಥರು ಕುಟ್ಟಿ ಮಾವನನ್ನು ಸಮಾಧಾನ ಮಾಡಿದರು. "ಹಾಗೆಲ್ಲ ಹೇಳಬೇಡಿ ಕುಟ್ಟಿನಾಯರೇ—ಅದೆಲ್ಲ ದೇಶದಲ್ಲಿ ಇರೋ ಸಂಪ್ರದಾಯ ತಾನೆ?"

"ಆ ಕಾಲವೆಲ್ಲ ಹಿಂದಕ್ಕಾಯ್ತು"

ಅಪ್ಪುಣ್ಣಿಗೆ ಆ ಮೇಲೆ ಕೇಳಿಸಿಕೊಳ್ಳಲಾಗಲಿಲ್ಲ. ಮೀನಾಕ್ಷಕ್ಕ ಬಂದು ಕರೆದರು. ಅಟ್ಟದಿಂದ ಸೌದೆ ತೆಗೆದುಕೊಡಲು ಅವನ ಸಹಾಯವನ್ನು ಬಯಸಿದ್ದ ವ್ಯಕ್ತಿ ಅವರೊಬ್ಬರೇ. ಮೀನಾಕ್ಷಕ್ಕ ಏಣಿ ಹಿಡಿದುಕೊಂಡು ನಿಂತಿದ್ದರು. ಅವನು ಸೌದೆ ತೆಗೆದು ಹಾಕುತ್ತಿದ್ದ.

"ಅದೇನು ಅಚೀಲಿ ನಡೀತಿರೋದು?"

"ಏನು ಹೇಳಲಿ?"

ಅವನಿಗೆ ಯಾವ ಒಂದು ಪ್ರತ್ಯೇಕವಾದ ಭಾವನೆಯೂ ಕಾಣಿಸಲಿಲ್ಲ. ಅದೊಂದು ನಾಟಕ ನೋಡಿದ ಹಾಗೆ—ಮಾವಂದಿರಿಬ್ಬರೂ ರಂಗದ ಮೇಲೆ ಜಗಳವಾಡುವ ದೃಶ್ಯ.

ಸಾಯಂಕಾಲದಲ್ಲಿ ಮಧ್ಯಸ್ಥ ನಂಬಿಯಾರ್ ಹಿಂದಿರುಗಿದ್ದು.

ವಕೀಲ್ ಕುಮಾರನ್ ನಾಯರು ಒಳಗೂ ಬೇಕಾಗಿದ್ದ ಮನುಷ್ಯ. ಆತ ಹೋಗುವಾಗ ಅಜ್ಜಿಯ ಹತ್ತಿರ ಬಂದಾಗ ಅಜ್ಜಿ ಹೇಳಿದರು:

"ಕುಮಾರಾ ನೀನು ನನಗೊಂದು ಕೆಲಸ ಮಾಡಿಕೊಡಬೇಕು."

"ಏನು ಹೇಳಿ ಕುಂಞಕಾಳಿ ಅಮ್ಮ"

"ನನಗೆ ಭೂಮಿ, ಹಣ ಯಾವುದೂ ಬೇಡ. ನನಗೆ ಬೇಕಾದದ್ದು ಒಂದು ಮಾವಿನ ಮರ"

ವಕೀಲ್ ಕುಮಾರನ್ ನಾಯರಿಗೆ ಅಜ್ಜಿ ಹೇಳುವುದೇನು ಎಂದು ತಿಳಿಯಲಿಲ್ಲ.

"ಏನು ಬೇಕು ಅಂದಿರಿ ಕುಂಞಕಾಳಿ ಅಮ್ಮ"

"ನಾನು ಈ ಮನೆಯೊಳಗೆ ಕಣ್ಣು ಮುಚ್ಚಬೇಕೂಂತ ಇದೆ. ಅದಕ್ಕೆ ನೀವು ಯಾರೂ ಒಪ್ಪೋ ಹಾಗೆ ಕಾಣ್ತಾ ಇಲ್ಲ."

"ನಾನೇನು ಹೇಳಲಿ"

"ಏನೂ ಹೇಳಬೇಡಿ"

ಆತ ಕೆರೆಯುತ್ತ ಸ್ವಲ್ಪ ಹೊತ್ತು ನಿಂತುಕೊಂಡಿದ್ದರು. ಆ ಮೇಲೆ ಹೊರಗೆ ಹೋದರು.

ಕೆಲವು ದಿವಸಗಳ ವರೆಗೆ ಏನೂ ಮಾತುಕಥೆಯಿರಲಿಲ್ಲ. ಎಲ್ಲರೂ ಅಡಗಿ ಹೋದಂತೆ ನೆನಸಿಕೊಳ್ಳದೆ ಇದ್ದಾಗ ಮತ್ತೊಂದು ತೊಂದರೆ ಉಂಟಾಯಿತು. ದೊಡ್ಡ ಮಾವನಿಗೆ ಒಂದು ರಿಜಿಸ್ಟರ್ಡ್ ನೋಟೀಸ್ ಬಂದಿತ್ತು. ಕುಟ್ಟಮಾವ ಕೊಟ್ಟದ್ದು. ಉಳಿದವರು ಪ್ರತಿವಾದಿಗಳು.

ಆ ದಿನ ಹಗಲಿಡೀ, ರಾತ್ರಿ ಮಲಗುವ ವರೆಗೂ ಪಡಸಾಲೆಯಲ್ಲೇ ಇದ್ದರು. ಹಗಲಿಡೀ ಒಳಗಿದ್ದವರನ್ನು ಬಯ್ದದ್ದೂ ಬಯ್ದದ್ದೇ. ಮಧ್ಯೆ ಮಧ್ಯೆ ಬತ್ತಾಯದ ಮನೆಗೆ ಹತ್ತಿ ಹೋಗುತ್ತಿದ್ದರು. ಇಳಿದು ಬರುವಾಗ ಮುಖ ಕೆಂಪಾಗಿರುತ್ತಿತ್ತು.

ಅದರ ಮಧ್ಯದಲ್ಲಿ ಅಮ್ಮಿಣಿ ಅಕ್ಕನನ್ನು ಕರೆದರು.

"ಎಲ್ಲಿದ್ದೀಯೇ ಅಮ್ಮಿಣಿ?"

ಅಮ್ಮಿಣಿ ಅಕ್ಕ ಬತ್ತಾಯದ ಮನೆಯಿಂದ ಮೆಟ್ಟಲಿಳಿದು ಬಂದಳು.

"ನಾಳೆ ನಿನ್ನ ಮನೆಗೆ ಹೋಗಬೇಕು. ಇದು ನಿನ್ನ ತಂದೆ ಮನೆಯಲ್ಲ."

ಅಮ್ಮಿಣಿ ಅಕ್ಕ ಏನನ್ನೂ ಮಾತನಾಡದೆ ನಿಂತಳು.

"ನಿನಗೂ ಒಂದು ಮನೆ ಜನ ಅಂತ ಇರುವಾಗ ಇಲ್ಲಿ ಬಂದು ಬಿದ್ದಿರ ಬೇಕಾಗಿಲ್ಲ."

ಅಮ್ಮಿಣಿ ಅಕ್ಕ ನಿಧಾನವಾಗಿ ಬತ್ತಾಯದ ಮನೆಯೊಳಕ್ಕೆ ಹಿಂದಿರುಗಿದಳು.

ಆ ದಿನ ರಾತ್ರಿ ಅಪ್ಪುಣ್ಣಿ ಏಣಿಯ ಕೊಠಡಿಯಲ್ಲಿ ಕಣ್ಣು ಬಿಟ್ಟುಕೊಂಡೇ ಮಲಗಿದ್ದ. ಬೆಳಗಿನ ಸ್ವಪ್ನಗಳ ಹಾಗಿದ್ದ ಆ ಒಂದು ರಾತ್ರಿ, ಮನಸ್ಸಿನಲ್ಲಿ ಚಿರಸ್ಥಾಯಿ ಯಾಗಿ ಉಳಿದಿತ್ತು.

ಅಮ್ಮಿಣಿ ಅಕ್ಕನನ್ನು ಎದುರಿಗೆ ಕಂಡಾಗ ಮೊದಲು ಗಾಬರಿಯಾಗುತ್ತಿತ್ತು. ಈಗ ನಾಚಿಕೆಯಾಗುತ್ತದೆ. ಆದರೂ ಅವರು ತಲೆಗೂದಲನ್ನು ಬಿಡಿಸುತ್ತ ನಿಲ್ಲುವುದನ್ನು ಕಾಣಬೇಕು.

ಕಂಬಗಳ ಹತ್ತಿರ ಅವರಿಗೆ ತಿಳಿಯದಂತೆ ಸಂಜೆಯ ಇಳಿ ಹೊತ್ತಿನಲ್ಲಿ ಹೊರಗೆ ನಿಂತಿರುವುದನ್ನು ನೋಡುತ್ತಾ, ನಿಂತುಕೊಳ್ಳುತ್ತಿದ್ದ.

ಸ್ವಲ್ಪವೂ ಶಬ್ದವಿಲ್ಲ. ಅವನು ಸುಮ್ಮನೆ ಕಿವಿಗೊಟ್ಟುಕೊಂಡು ಮಲಗಿದ.

ಅಮ್ಮಿಣಿ ಅಕ್ಕ ಮಲಗಿದ್ದಾರೆ. ಏನೋ ಒಂದು ರೀತಿಯ ಅನ್ನಿಸುವಿಕೆ. ಏಣಿಯ ಮೆಟ್ಟಿಲುಗಳ ಶಬ್ದವಿರಬಹುದೆ?

ಏಣಿಯ ಮೆಟ್ಟಿಲು ಶಬ್ದ ಮಾಡುತ್ತಿವೆ ಎನ್ನಿಸಿತು. ಹೌದು ಶಬ್ದ ಮಾಡುತ್ತಿವೆ. ಹೃದಯದ ಮಿಡಿತ ಹೆಚ್ಚಾಯಿತು. ಬಟ್ಟೆಗಳಿಂದ ವ್ಯಾಪಿಸಿದ ಸುಗಂಧ. ಅವನ ದೇಹವನ್ನು ಕೈ ಸ್ಪರ್ಶಿಸಿದಾಗ ಅವನು ಆ ಕೈಯನ್ನು ಹಿಡಿದುಕೊಂಡ.

ಯಾವ ಮಾತನ್ನೂ ಆಡದೆ ಅವನು ಚಾಪೆಯಿಂದ ಮೇಲೆದ್ದ. ಅಮ್ಮಿಣಿ ಅಕ್ಕ ಅವನ ಹತ್ತಿರದಲ್ಲಿ ಕುಳಿತಿದ್ದರು. ಅವನ ಕುತ್ತಿಗೆಯನ್ನು ತೋಳಿನಿಂದ ಬಳಸಿ ಬಲವಾಗಿ ಅಪ್ಪಿಕೊಂಡು ಅವರು ಸುಮ್ಮನೆ ಕುಳಿತಿದ್ದರು. ಎಷ್ಟು ಹೊತ್ತು ಹಾಗೆ ಕುಳಿತಿದ್ದರೆಂದು ತಿಳಿಯದು.

"ಅಪ್ಪುಣ್ಣೀ" ಮೆಲ್ಲನೆ ಅವರು ಕರೆದರು. ಅವರ ಬೆರಳುಗಳು ಅವನ ಬೆನ್ನಿನ ಮೇಲೆ ಓಡಾಡುತ್ತಿದ್ದುವು.

"ನಾಳೆ ನಾನು ಹೋಗ್ತೀನಿ ಅಪ್ಪುಣ್ಣೀ"

ಅಪ್ಪುಣ್ಣಿಗೆ ಅವರ ಮುಖವನ್ನು ನೋಡಬೇಕು ಅನ್ನಿಸಿತ್ತು. ಆದರೆ ಕಾಣಲಾಗುತ್ತಿಲ್ಲ.

ಇನ್ನು ಯಾವಾಗ ಬರುವುದು ಎಂದು ಅವನು ಕೇಳಲೂ ಇಲ್ಲ. ಆದರೆ ಆ ಪ್ರಶ್ನೆ ಅವನ ಮನಸ್ಸಿನಲ್ಲಿ ಶಾಶ್ವತವಾಗಿ ಉಳಿಯಿತು. ತನ್ನ ಭುಜಗಳ ಮೇಲಿದ್ದ ಅವರ ಕೈಬಳೆಗಳನ್ನು ತಿರುಗಿಸುತ್ತಾ ಹಿಡಿದಿದ್ದ.

"ಅಪ್ಪುಣ್ಣೀ ನಾನಿರೋ ಜಾಗಕ್ಕೆ ಬರ್ತೀಯಾ?"

"ಬರೋದಿಲ್ಲ. ಹೇಗೆ ಬರಲಿ?"

"ನಾನಿನ್ನು ಮೇಲೆ ಇಲ್ಲಿಗೆ ಬರೋದಿಲ್ಲ"

"ಯಾಕೆ ಮಾತಾಡೋದಿಲ್ಲ ಸಿಟ್ಟು ಬಂತಾ?"

"ಇಲ್ಲ"

"ಅಪ್ಪುಣ್ಣಿ ದೊಡ್ಡ ಮನುಷ್ಯನಾಗ್ತೀಯೆ. ಆಗ ಅಮ್ಮಿಣಿ ಅಕ್ಕನ್ನ ಮರೆಯಬೇಡ. ಮರೆಯೋದಿಲ್ಲ ಅಲ್ಲ"

ಇಲ್ಲ, ಮರೆಯುವುದಕ್ಕೆ ಸಾಧ್ಯವೇ ಇಲ್ಲ.

ದೀಪದ ಕಾಂತಿಯ ಎದುರು ನಗ್ನವಾದ ಎದೆಯನ್ನು ಬಿಟ್ಟುಕೊಂಡು ಕೈಯಲ್ಲಿ ಅಡಕೆಯ ಹೊಂಬಾಳೆಯನ್ನು ಹಿಡಿದುಕೊಂಡು ಭುಜದ ಮೇಲೆ ತಲೆಗೂದಲನ್ನು ಇಳಿಬಿಟ್ಟುಕೊಂಡು ನಾಟ್ಯವಾಡುವ ಸರ್ಪಸುಂದರಿಯ ಚಿತ್ರವನ್ನು ಮರೆಯಲು ಸಾಧ್ಯವಿಲ್ಲ.

"ಇಲ್ಲ"

ಎಂದು ಮಾತ್ರ ಅವನು ಹೇಳಿದ್ದು.

ಎಷ್ಟೋ ಹೊತ್ತು, ಹಾಗೆಯೇ ಇದ್ದರು. ಎದೆಯ ಬಡಿತ ಹೆಚ್ಚಿತ್ತು. ಆಗಲೂ ಅಲ್ಲಿಂದ ಕದಲಲಿಲ್ಲ.

"ಹೋಗಿ ಮಲಗ್ತೀನಿ ಅಪ್ಪುಣ್ಣಿ; ನೀನೂ ಮಲಗು"

ಎದ್ದು ನಿಲ್ಲುವ ಮೊದಲು ಅವನ ಕಿವಿಯ ಹತ್ತಿರ ತುಟಿಗಳನ್ನು ತಂದು ನಗುವೂ ದುಃಖವೂ ಮಿಶ್ರವಾದ ಧ್ವನಿಯಲ್ಲಿ ಅಮ್ಮಿಣಿ ಅಕ್ಕ ಹೇಳಿದರು.

"ಇನ್ನು ಮೇಲೆ ಹೆದರಿಸೋದಕ್ಕೆ ಅಮ್ಮಿಣಿ ಅಕ್ಕ ಬರೋದಿಲ್ಲ; ಗೊತ್ತಾಯ್ತಾ?

ಏಣಿಯ ಮೆಟ್ಟಿಲುಗಳು ಮತ್ತೂ ಶಬ್ದ ಮಾಡಿದುವು. ಒಂಟಿಯಾಗಿ ಕಣ್ಣು ತೆರೆದುಕೊಂಡು ಮಲಗಿದ್ದಾಗ ಅವನಿಗೆ ತೀರ ಬೇಸರವಾಯಿತು.

ಇದ್ದಕ್ಕಿದ್ದ ಹಾಗೆ ಬೆಳಗ್ಗೆ ಅಮ್ಮಿಣಿ ಅಕ್ಕ ಹೊರಟಳು. ಮಾವ ಸಣ್ಣಂಚಿನ ವಸ್ತ್ರವನ್ನು ಮಡಿಸಿ ಭುಜದ ಮೇಲೆ ಹಾಕಿಕೊಂಡು ಕೊಡೆ ಹಿಡಿದುಕೊಂಡು ಅಂಗಳಕ್ಕಿಳಿದು ನಿಂತಿದ್ದರು.

ಅಮ್ಮಿಣಿ ಅಕ್ಕ ಒಬ್ಬೊಬ್ಬರ ಹತ್ತಿರವೂ 'ಹೋಗಿ ಬರುತ್ತೇನೆ' ಎಂದು ಹೇಳುತ್ತಿದ್ದಾಗ ಅಪ್ಪುಣ್ಣಿ ಪಡುಭಾಗದಲ್ಲಿ ಹೊರಗೆ ನೆಲ್ಲು ಹುಲ್ಲುಗುಡ್ಡೆಯ ಹಿಂದೆ ಹಸುರಾದ ಗೋಡೆಯ ಮೇಲೆ ಕರಿಕಲ್ಲಿನ ಚೂರಿನಿಂದ ಚಿತ್ರ ಬರೆಯುತ್ತಾ ನಿಂತಿದ್ದ.

ಹೊರಟಾಗ ಅಪ್ಪುಣ್ಣಿ ನೋಡಲಿಲ್ಲ. ಹೊರಗೆ ಬಂದಾಗ ದೂರದಲ್ಲಿ ಜಮೀನಿನ ಮಧ್ಯೆ ನೀಲಿಯ ಜಾಕೆಟ್ಟು ಮರೆಯಾಗುತ್ತಿತ್ತು.

* * * * *

ಎಂದಿಗಿಂತ ತಡವಾಗಿ ಅಪ್ಪುಣ್ಣಿ ಆ ದಿನ ಸ್ಕೂಲಿಗೆ ಹೊರಟದ್ದು. ಬೆಳಗ್ಗೆ ಗಂಜಿ ಸಿಕ್ಕುವುದು ತಡವಾಯಿತು. ಕೆಲವು ದಿವಸಗಳಿಂದ ಹೊತ್ತಿಗೆ ಸರಿಯಾಗಿ ಊಟವಿಲ್ಲ. ಬೀಜದ ಭತ್ತವನ್ನೂ ಮಾರಿದ್ದಾಯಿತು. ಬತ್ತಾಯದಲ್ಲಿದ್ದ ಭತ್ತವನ್ನೆಲ್ಲ ದೊಡ್ಡ ಮಾವ ಬಂಡಿಯವರಿಗೆ ಮಾರಿದರು. ಭತ್ತ ಕೇಳುವುದಕ್ಕೆ ಹೋದಾಗ ಮಾವನಿಂದ ಸಿಕ್ಕುತ್ತಿದ್ದುದು ಬಯ್ಗಳು.

ಎಷ್ಟೋ ದಿನಕ್ಕೊಂದು ಸಲ ದೊಡ್ಡ ಮಾವನ ಮನೆಗೆ ಬರುತ್ತಿದ್ದದ್ದು. ಹೂದೋಟಕ್ಕೆ ಹೋದರೆ ಮತ್ತೆ ಬರುವುದು ಎಂಟೋ ಹತ್ತೋ ದಿನಗಳಾಗುತ್ತಿದ್ದುವು. ಅಡಕೆ ಕೀಳಿಸುವುದೂ ತೆಂಗಿನಕಾಯಿ ಕೀಳಿಸುವುದೂ ಕಳೆದ ಮೇಲೆ ಹಿಂದಿರುಗುತ್ತಿದ್ದರು. ಮನೆಯ ಖರ್ಚುವೆಚ್ಚ ನೋಡಿಕೊಳ್ಳುವುದು ತನ್ನ ಜವಾಬ್ದಾರಿಯೇನಲ್ಲ ಎನ್ನುವ ಭಾವನೆಯಲ್ಲಿದ್ದರು.

ಮನೆಯಲ್ಲಿ ಅಡಿಗೆಗೆ ಸಂಬಂಧಿಸಿದ ವ್ಯವಸ್ಥೆ ಮಾಡಲು ಕುಟ್ಟಿ ಮಾವನಿಗೆ ಇಷ್ಟ

ವಿಲ್ಲ. ಸಾಯಂಕಾಲದಲ್ಲಿ ಹಿಂದಿರುಗಿ ಬಂದಾಗ ಊಟವಿಲ್ಲದಿದ್ದರೆ ಮೀನಾಕ್ಷಕ್ಕನನ್ನು ಬಯ್ಯುತ್ತಿದ್ದರು.

ಹತ್ತಿರದ ಮನೆಗಳಿಂದ ಭತ್ತವನ್ನೂ ಅಕ್ಕಿಯನ್ನೂ ಸಾಲ ತರಲು ಅವರು ಹೋಗುತ್ತಿದ್ದರು. ಮಧ್ಯೆ ಮಧ್ಯೆ ಅವರು ಹೇಳುತ್ತಿದ್ದರು. "ಇದೆಲ್ಲ ನಾನು ಪಡೆದು ತಂದದ್ದು" ಎಂದು.

ದೊಡ್ಡ ಮಾವ ವ್ಯಾಪಾರಿಗೆ ಅಜ್ಜಿ ವಿಧಿಸಿದ್ದರು, ಕುಟ್ಟಿ ಮಾವನಿಗೆ ಹಣ ಕೊಡಬಾರದು ಎಂದು. ಅದಕ್ಕೆ ಕುಟ್ಟಿ ಮಾವ ಬೇರೆ ಒಂದು ದಾರಿ ಹುಡುಕಿದರು. ಮೇಲಿನ ನಾಗಬನದ ಹತ್ತಿರ ಇರುವ ದೊಡ್ಡ ಗೋಮಾವಿನ ಮರವನ್ನು ಕುಟ್ಟಿ ಹಸನ್‌ಗೆ ಮಾರಿದರು. ಒಂದು ಚೀಲ ಭತ್ತವನ್ನು ಮನೆಗೆ ತಂದು ಹಾಕಿದರು, ದೊಡ್ಡಮ್ಮ ಬಾಕಿ ಹಣದ ಲೆಕ್ಕವನ್ನು ಕೇಳಿದಾಗ ಕುಟ್ಟಿಮಾವ ಹೇಳಿದರು:

"ಕುಂಞಕ್ಕ ಮಾತಾಡದೇ ಸುಮ್ಮನಿದ್ದರೆ ಒಳ್ಳೇದು."

ಆ ಮರವನ್ನು ಕತ್ತರಿಸಲು ಹಗ್ಗವನ್ನೂ ಕೊಡಲಿಯನ್ನೂ ತೆಗೆದುಕೊಂಡು ಕಡಿಯುವವರು ಬಂದದ್ದು ಮನೆಯ ಮುಂದುಗಡೆಯಿಂದ. ಅವರಲ್ಲಿ ಒಬ್ಬ ನೀರು ಕುಡಿಯಲು ಬಡಗು ಮನೆಯ ಹತ್ತಿರ ಬಂದಾಗ ಆ ವಿಷಯ ಅಜ್ಜಿಗೆ ತಿಳಿಯಿತು.

ಅದನ್ನು ಕೇಳಿ ಆ ದಿನವಿಡೀ ಅವರು ಅಳುತ್ತಲೇ ಇದ್ದರು.

ಮೂರು ದಿನಗಳಲ್ಲಿ ಹಿಂದಿನ ಹಿತ್ತಿಲಿನಲ್ಲಿದ್ದ ಮರಗಳೆಲ್ಲ ನೆಲಸಮವಾದುವು. ಕುಟ್ಟಿಹಸನ್ ಹಾಜಿ ಅಲ್ಲಿ ಕತ್ತರಿಸಿ ಹಾಕಿದ್ದ ಉದ್ದನೆಯ ಮರಗಳಿಂದ ಎಷ್ಟೋ ಹಲಗೆಗಳಾಗುವಂತಿದ್ದುವು.

ಆ ತೊಟ್ಟಿಯ ಮನೆಯೊಳಗೆ ಒಂದೊಂದು ನಿಮಿಷವೂ ಅವನನ್ನು ಉಸಿರು ಕಟ್ಟಿಸುತ್ತಿತ್ತು. ಸದಾ ದುಃಖಿಸುವ ಅಜ್ಜಿ......ಯಾವಾಗಲೂ ಗೊಣಗುಟ್ಟುತ್ತ ಸಿಟ್ಟು ಮಾಡಿಕೊಂಡು ತಿರುಗಾಡುವ ದೊಡ್ಡ ಮಾವ......ಕಂಬಳಿಯನ್ನು ಕಾಲಿನ ಮೇಲೆಳೆದುಕೊಂಡು ಗೋಡೆಯ ಒರಗು ಜಗಲಿಯನ್ನೊರಗಿಕೊಂಡು ತನ್ನಷ್ಟಕ್ಕೇ ಮನುಷ್ಯಾವಸ್ಥೆಯನ್ನು ಕುರಿತು ಮಾತನಾಡಿಕೊಳ್ಳುವ ಚಿಕ್ಕಪ್ಪ......ತನಗೆ ತೋರಿದಾಗ ಶಬ್ದ ಮಾಡಿಕೊಂಡು ಗಾಳಿ ಬೀಸಿದಂತೆ ಬರುವ ಕುಟ್ಟಿ ಮಾವ......! ಓ! ಎಂಥ ಒಂದು ಸಮೂಹದ ಜನರು!

ದ್ವೇಷ! ಮನಸ್ಸಿನಲ್ಲಿ ಶಾಶ್ವತವಾಗಿ ಉಳಿದಿರುವುದು ದ್ವೇಷ ಮಾತ್ರ. ಮೀನಾಕ್ಷಕ್ಕನನ್ನು ಕಾಣುವಾಗ ಸಂಪೂರ್ಣವಾಗಿ ಮನಸ್ಸೆಲ್ಲವೂ ಯಾತನೆಗೊಳಗಾಗುತ್ತಿತ್ತು. ಬಡಗು ಮನೆಯಲ್ಲಿ ಭತ್ತ ಕುಟ್ಟಿಕೊಂಡು ತಲೆಯ ಮೇಲೆ ಕುಕ್ಕೆಯನ್ನು ಹೊತ್ತುಕೊಂಡು ಅಡಕೆ ತೋಟದಲ್ಲಿ ಒಬ್ಬರು ಕಂಡರೆ ಒಬ್ಬರು ಕಾಣದಂತೆ ಬರುವ ಅವರನ್ನು ಕಂಡಾಗ ಒಂದು ಸಲ ತಿಳಿಯದೆ ಅಪ್ಪುಣ್ಣಿಯ ಕಣ್ಣುಗಳು ತೇವಗೊಂಡುವು.

ದೇವರು ಸುಖವನ್ನೂ ದುಃಖವನ್ನೂ ಮನುಷ್ಯನಿಗೆ ವಿಧಿಸಿದ್ದು ತಾನೆ? ಆದರೆ ಅವರಿಗೇಕೆ ದೇವರು ಸುಖ ಕೊಡಲಿಲ್ಲ?

ನಡೆಯುತ್ತಿದ್ದಾಗ ಹಾಗೆಯೇ ಅನೇಕ ವಿಚಾರಗಳನ್ನು ಅಪ್ಪುಣ್ಣಿ ಆಲೋಚಿಸಿದ. ಜೊತೆಯವರು ಮೊದಲೇ ಹೋಗಿದ್ದರು. ಕೆಂಪು ಮಣ್ಣಿನ ರಸ್ತೆಯಲ್ಲಿ ಒಂಟೆತ್ತಿನ ಬಂಡಿಯ ಚಕ್ರಗಳು ಉರುಳಿ ಹೋದ ಗುರುತುಗಳು ಆಗಲೂ ಕಾಣಿಸುತ್ತಿದ್ದುವು.

ಭಾಸ್ಕರ ಕಳೆದ ವರ್ಷ ಫೇಲಾದ. ಫಿಫ್ತ್‌ನಲ್ಲಿ ಈಗ. ಮನೆಯಲ್ಲಿ ಯಾವುದೇ ವಿಷಯದಲ್ಲಿ ಭಾಸ್ಕರನಿಗೂ ಕೃಷ್ಣನ್ ಕುಟ್ಟಿಗೂ ತೊಂದರೆಯಿಲ್ಲ. ಸ್ಥಿತಿವಂತನಾದ ನಂಬೂದಿರಿಯ ಮಗನಾಗಿ ಜನಿಸಿದರೆ ಹಾಗೇ ಇರಬಹುದೇನೋ !

ಕಲ್ಲು ಕಟ್ಟೆಯ ಹತ್ತಿರ ಯಾರೋ ನಿಂತಿದ್ದರು. ಅಪ್ಪುಣ್ಣಿ ಗಮನಿಸಲಿಲ್ಲ. ಹತ್ತಿರ ಬಂದಾಗ ಅವನು ಒಂದು ಸಲ ಸುಮ್ಮನೆ ನೋಡಿದ. ಆಗ ಗೊತ್ತಾಯಿತು. ಶಂಕರನ್ ನಾಯರ್. ಉರಿಯುವ ಬೆಂಕಿಯೊಳಕ್ಕೆ ಎಸೆದ ಹಾಗಾಯಿತು.

"ಅಪ್ಪುಣ್ಣೀ"

ಆತ ಹತ್ತಿರ ಬರುತ್ತಿದ್ದ.

ಅಪ್ಪುಣ್ಣಿ ಮುಖ ತಿರುಗಿಸಿಕೊಂಡು ನಡೆದ.

"ಅಪ್ಪುಣೀ"

ತಿರುಗಿ ನೋಡಲಿಲ್ಲ. ಕಾಲುಗಳನ್ನು ಬೀಸಿ ಹಾಕುತ್ತ ಅಪ್ಪುಣ್ಣಿ ನಡೆದ. ಎಷ್ಟೋ ದೂರಕ್ಕೆ ಹೋದ ಮೇಲೆ ಒಂದು ಸಲ ಹಿಂದಿರುಗಿ ನೋಡಿದ. ಆತ ಜೊತೆಯಲ್ಲಿ ಬರುತ್ತಿಲ್ಲ.

ದಾರಿಯಲ್ಲಿ ಪಂಚಾಯ್ತಿ ಮಾಡುವುದಕ್ಕೆ, ಪ್ರೀತಿ ತೋರಿಸುವುದಕ್ಕೆ ಬಂದಿದ್ದಾನೆ. ತಾನೆಲ್ಲವನ್ನೂ ಕೇಳಿದ್ದಾಗಿದೆ ಸಹಿಸಿದ್ದೂ ಆಗಿದೆ. ಪ್ರವಾಹ ಇಳಿದ ಮೇಲೆ ಆಚೆ ಕಡೆಗೆ ವಾಸವನ್ನು ಬದಲಾಯಿಸಿದ್ದು ಎಂದು. ಓಡಿ ಹೋದರು ! ಮೈಯೆಲ್ಲ ಉರಿದು ಬೆಂಕಿಯಾದ ಹಾಗಾಯ್ತು. ತೆಂಗು ಪೊಟ್ಟಯಿಲ್ ಶಂಕರನಾಯರ್ ಜೊತೆಯಲ್ಲಿ......

ಅದನ್ನು ಕೇಳಿದ ದಿವಸವೇ ಬಂಧಿಸಿದ್ದ ಸಂಕೋಲೆಯನ್ನು ತುಂಡು ಮಾಡಿಬಿಡಬೇಕು ಎನ್ನಿಸಿತು. ಸ್ನೇಹ ಮಾಡುವುದಕ್ಕೆ ಬಂದಿದ್ದಾನೆ. ತೆಂಗು ಪೊಟ್ಟಯಿಲ್ ಶಂಕರನಾಯರ್ ! ನನಗೆ ಯಾರೂ ಇಲ್ಲ......

ಸ್ಕೂಲಿಗೆ ಹೋದಾಗ ಗಂಟೆಯಾಗಿ ಹತ್ತು ನಿಮಿಷಗಳಾಗಿದ್ದುವು. ಶಂಕರ ನಾರಾಯಣ ಮಾಸ್ಟರ ಕ್ಲಾಸು. ಆದರೆ ಮಾಸ್ಟರು ಬಂದಿರಲಿಲ್ಲವಾದ್ದರಿಂದ ಬದಲಿಗೆ ಡ್ರಾಯಿಂಗ್ ಮಾಸ್ಟರ್ ಬಂದಿದ್ದರು. ಹುಡುಗರಿಗೆ ಆತನನ್ನು ಕಂಡರೆ ಭಯವಿಲ್ಲ. ಕ್ಲಾಸಿನಲ್ಲಿ ಗಲಾಟೆಯೋ ಗಲಾಟೆ.

ಎರಡನೇ ಪೀರಿಯಡ್‌ನಲ್ಲಿ ಮೆಮೋ ಬಂತು. ಓದಿದರು. ಹತ್ತನೇ ತಾರೀಖಿಗೆ ಮೊದಲು ಪಬ್ಲಿಕ್ ಪರೀಕ್ಷೆಗೆ ಹಣ ಕಟ್ಟಬೇಕು.

ಹದಿನೈದು ರೂಪಾಯಿ !

ಹತ್ತನೇ ತಾರೀಖು, ಇನ್ನು ಆರೇ ದಿನಗಳಿರುವುದು. ಹದಿನೈದು ರೂಪಾಯಿ ಎಲ್ಲಿಂದ ತರುವುದು? ತಕ್ಷಣ ಅವನಿಗೆ ನೆನಪಾಯಿತು. ಅಜ್ಜಿಯ ಹತ್ತಿರ ಅವನ ಹಣವಿದೆ. ಅವರಿಂದ ಕುಟ್ಟಿ ಮಾವ ತೆಗೆದುಕೊಂಡ ಹಣ ಹಿಂದಕ್ಕೆ ಕೇಳಿದರಾಯ್ತು.

ಸಾಯಂಕಾಲ ಮನೆಗೆ ಬಂದಾಗ ಅಜ್ಜಿಯ ಹತ್ತಿರ ಹೋಗಿ ಹೇಳಿದ.

"ಪರೀಕ್ಷೆಗೆ ಫೀಸು ಕಟ್ಟಬೇಕು. ಹದಿನೈದು ರೂಪಾಯಿ ಬೇಕು."

"ನನ್ನ ಕಂದ, ಕುಟ್ಟಿ ಮಾವನ ಹತ್ತಿರ ಕೇಳಪ್ಪ. ನಾನೂ ಅವನ ಹತ್ರ ಹೇಳ್ತೀನಿ."

ಕುಟ್ಟಿ ಮಾವನ ಹತ್ತಿರವೇ ಕೇಳುವುದು ಎಂದು ತೀರ್ಮಾನಿಸಿದ. ಕುಟ್ಟಿ ಮಾವನ ಎದುರು ನಿಂತು ಅದುವರೆಗೆ ಮಾತನಾಡಿದ್ದಿಲ್ಲ. ಆದರೂ ಮಾತನಾಡುವುದಕ್ಕೆ ಭಯ ಎಲ್ಲ. ಆ ಮನುಷ್ಯನ ಎದುರಿಗೆ ಅವನು ಸ್ವಲ್ಪ ಗೌರವ ಭಾವನೆಯಿಂದಲೇ ಇದ್ದಾನೆ. ಹೃದಯದ ಒಂದು ಮೂಲೆಯಲ್ಲಿ ಗೌರವ ಉಳಿದೇ ಇದೆ.

ದೊಡ್ಡ ಮಾವ ಹೊಡೆದ ದಿನ ನೆನಪಾಯಿತು.

ಆ ದಿನ ಕುಟ್ಟಿ ಮಾವ ತನ್ನನ್ನು ಕಾಪಾಡಿದರು. ಇದುವರೆಗೆ ಒಂದು ದಿನವೂ ಮಾತಾಡಿದ್ದಿಲ್ಲ. ಆದರೂ ದೊಡ್ಡ ಮಾವ ಎನ್ನುವ ಭಯಂಕರ ಮನುಷ್ಯನ ಹತ್ತಿರ ಅಷ್ಟೇ ಧೈರ್ಯದಿಂದ ಬಾಳುತ್ತಿರುವ ಆತನನ್ನು ಕಂಡಾಗ ಅವನ ದೃಷ್ಟಿಯಲ್ಲಿ ಒಬ್ಬ ವೀರ ಪುರುಷನಂತೆ ಕಾಣಿಸುತ್ತಿದ್ದರು ಕುಟ್ಟಿ ಮಾವ.

ಕುಟ್ಟಿ ಮಾವ ತನಗೆ ತೋರಿದ ಹೊತ್ತಿನಲ್ಲಿ ಮನೆಗೆ ಬರುತ್ತಿದ್ದದ್ದು, ರಾತ್ರಿ ಕೆಲವು ಸಲ ಬರದಿದ್ದರೂ ಆಯ್ತು.

ಮೂರನೆಯ ದಿನ ಸಾಯಂಕಾಲ ಸ್ನಾನಮಾಡಿ ಬಂದಾಗ ಮಾಳು ಹೇಳಿದಳು. "ತಂದೆ ಬಂದಿದ್ದಾರೆ" ಎಂದು.

ಹೊರಗೆ ಒರಗು ಮಣೆಯ ಮೇಲೆ ಕುಳಿತು ಕುಟ್ಟಿ ಮಾವ ಬೀಡಿ ಸೇದುತ್ತಿದ್ದರು.

ಆ ಮುಖದ ಭಾವವನ್ನು ಕಂಡು ಅವನಿಗೆ ಒಂದು ರೀತಿಯ ಕಷ್ಟವಾಯಿತು. ಎಷ್ಟೋ ಹೊತ್ತು ಹಾಗೆಯೇ ಕುಟ್ಟಿ ಮಾವನನ್ನು ನೋಡುತ್ತ ನಿಂತಿದ್ದ. ಕಡೆಗೆ ಹತ್ತಿರ ಹೋಗಿ ನಿಂತುಕೊಂಡ.

ನೋಡಿದಂತೆ ತೋರಿಸಿಕೊಳ್ಳಲಿಲ್ಲ.

ಅವನು ಅಲ್ಲಿಂದ ಹೋಗುವುದಿಲ್ಲವೆಂದು ತಿಳಿದಾಗ ಕೇಳಿದರು.

"ಏನು?"

ಹದಿನೈದನೇ ತಾರೀಖು ಪಬ್ಲಿಕ್ ಪರೀಕ್ಷೆಗೆ ಹಣ ಕಟ್ಟಬೇಕು. "ಅದಕ್ಕೆ...... ಕುಟ್ಟಿ ಮಾವ—"

"ಸಾಲ ವಸೂಲು ಮಾಡೋದಕ್ಕೆ ಬಂದೆಯಾ?"

"ನಾನೇನು ಮಾಡ್ಲಿ ಹೇಳಿ—ಫೀಸು ಕಟ್ಟದೇ ಇದ್ರೆ......"

"ನಿನ್ನ ನಾಲ್ಕು ನೋಟು ಈಟಿಕೊಂಡಿದ್ದರಿಂದಲ್ಲವೇನೋ ಇದು? ನನ್ನ ಹತ್ರ ಒಂದು ಕಿಲುಬು ಕಾಸೂ ಇಲ್ಲ."

ಅಳು ಬರುವ ಹಾಗಾಯಿತು. ಅಂತೂ ಅಳಲಿಲ್ಲ. ನೋವಾದಾಗ ಅಳದೆ ಇರುವಂತೆ ಅವನು ಅಭ್ಯಾಸ ಮಾಡಿಕೊಂಡಿದ್ದಾನೆ.

ಅವನು ಒಳಕ್ಕೆ ಹೋಗುತ್ತಿದ್ದಾಗ ಕುಟ್ಟಿ ಮಾವ ಹೇಳಿದರು.

"ಇನ್ನು ನೀನ್ನೊಬ್ಬ ಓದಿ ಡಿಪ್ಟಿ ಕಮೀಶನರ್ ಆಗಿ ಅಲ್ಲವೇ ಬರೋದು?"

ಆ ಮಾತುಗಳನ್ನು ಅಪ್ಪುಣ್ಣಿ ಸಹಿಸಿದ. ತೆಂಕು ಮನೆಯೊಳಕ್ಕೆ ಹೋದಾಗ ಮಾಳು ಕೇಳಿದಳು.

"ಹಣ ಸಿಕ್ಕಿತಾ ಅಪ್ಪುಣ್ಣಿಯಣ್ಣ"

ಕೇಳೋದಕ್ಕೆ ಬೇರೆ ಬಂದಿದ್ದಾಳೆ! ಶತ್ರುವನ್ನು ನೋಡುವಂತೆ ಅವಳನ್ನು ನೋಡುತ್ತಾ ಹೇಳಿದ.

"ಹೋಗೇ ಇಲ್ಲಿಂದ"

ಅವಳ ಮುಖದ ಕಡೆಗೆ ನೋಡದೆ ಅವನು ಕತ್ತಲೆ ಕವಿದಿದ್ದ ಏಣಿಯ ಕೊಠಡಿಗೆ ಹೋದ.

ಅಜ್ಜಿಗೆ ವ್ಯಸನವುಂಟಾಗಿತ್ತು.

"ಅಜ್ಜಿ ಕೈಯಲ್ಲಿ ಏನಾದರೂ ಇದ್ದಿದ್ದರೆ ನನ್ನ ಕಂದಾ, ನಿನಗೆ ತೊಂದರೆಯಾಗ್ತಿರಲಿಲ್ಲ."

ಯಾರ ಕೈಯಲ್ಲೂ ಇರುವುದಿಲ್ಲ. ಅವನು ಮನಸ್ಸಿನಲ್ಲೇ ಹೇಳಿಕೊಂಡ "ಅಪ್ಪುಣ್ಣಿ ಕಷ್ಟಕ್ಕೆ ಯಾರೂ ಇರುವುದಿಲ್ಲ."

ಮುಹಮ್ಮದನಿಗೆ ವಿಷಯವೆಲ್ಲ ಗೊತ್ತಿದೆ. ಹಣ ಹೊಂದಿಸುವ ಕೆಲಸವನ್ನು ಅವನು ವಹಿಸಿಕೊಂಡಿದ್ದಾನೆ. ಕ್ಲಾಸಿನ ಹುಡುಗರಲ್ಲಿ ಕೆಲವರ ಹತ್ತಿರ ಗುಟ್ಟಾಗಿ ಕೇಳಿದ. ಸಿಕ್ಕಲಿಲ್ಲ.

"ಅಪ್ಪುಣ್ಣೀ ಈಗೊಂದು ಕೆಲಸ ಮಾಡಿದರೇನು?"

"ಏನು?"

"ಭಾಸ್ಕರನ ತಾಯಿಯ ಹತ್ತಿರ ಕೇಳಿದರೇನು?"

"ನಾನು ಕೇಳುವುದಿಲ್ಲ."

"ನಿನ್ನ ದೊಡ್ಡಮ್ಮ ಅಂತಿದ್ದೆಯಲ್ಲ"

"ಹೌದು. ನಾನು ಕೇಳೋದಿಲ್ಲ"

"ನಾಳಿಗೇ ಹಣ ಜೊತೆ ಮಾಡಬೇಕಲ್ಲೋ ಅನ್ನನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡು ಕುಳಿತರೆ—"

"ನನಗೆ ಮಾನ ಕಳೆದುಕೊಳ್ಳೋದಕ್ಕೆ ಇಷ್ಟವಿಲ್ಲ ಮುಹಮ್ಮದ್"

ಅವರ ಹತ್ತಿರ ಹಣವಿರಬಹುದು. ದೊಡ್ಡಮ್ಮ ದೊಡ್ಡ ಮಾವ ಅವರ ವಿಷಯ ವಾಗಿ ಆಲೋಚಿಸುವುದಕ್ಕೆ ಸಾಧ್ಯವಿಲ್ಲ.

ರಾತ್ರಿ ಇಡೀ ನಿದ್ದೆ ಬರಲಿಲ್ಲ. ಎಷ್ಟು ಕಾಲದಿಂದ ಕಷ್ಟಪಟ್ಟು ಈ ಮೆಟ್ಟಿಲು ಹತ್ತಿ ಇಳಿದದ್ದು? ಈಗ ಎಲ್ಲ ತಲೆ ಕೆಳಗಾಗುತ್ತಿದೆಯಲ್ಲ......

ನಾಳೆ ನಾಲ್ಕು ಗಂಟೆಗೆ ಮೊದಲು ಹಣ ಕಟ್ಟಬೇಕು.

ಮುಹಮ್ಮದ್ ತನ್ನ ಮನೆಯ ಅಕ್ಕಪಕ್ಕದವರನ್ನು ಕೇಳುವಂತೆ ತನ್ನ ತಾಯಿಯ ಹತ್ತಿರ ಹೇಳುತ್ತೇನೆಂದೂ ಅದಕ್ಕಾಗಿ ಶ್ರಮಿಸುತ್ತೇನೆಂದೂ ಹೇಳಿದ್ದಾನೆ. ಮಧ್ಯಾಹ್ನಕ್ಕೆ ಮೊದಲು ಸ್ಕೂಲಿಗೆ ಬರದಿದ್ದರೆ ಹಣ ಸಿಕ್ಕಲಿಲ್ಲ ಎಂದು ಭಾವಿಸಿಕೊ ಎಂದಿದ್ದಾನೆ.

ಪರೀಕ್ಷೆಗೆ ಕುಳಿತರೆ ಪಾಸಾಗುತ್ತೇನೆಂಬ ಭರವಸೆಯಿದೆ. ಪಾಸಾದರೆ ಎಲ್ಲಿಯಾದರೂ ಕೆಲಸ ಸಿಕ್ಕುತ್ತದೆ. ಆ ಮೇಲೆ ಅವನು ಯಾರ ಸಹಾಯವನ್ನೂ ಬೇಡದೆ ತಲೆಯೆತ್ತಿ ನಿಲ್ಲಬಹುದು.

ಎಲ್ಲವೂ ಈಗ ಪ್ರಶ್ನೆಯಾಗಿ ನಿಂತು ಯಾವುದೂ ಕೈಗೂಡದಂತಾಗಿದೆ. ಹದಿನೈದು ರೂಪಾಯಿ!

ಹಣ ಸಿಕ್ಕಲಿಲ್ಲ. ಪರೀಕ್ಷೆಗೆ ಹಣ ಕಟ್ಟುವುದಕ್ಕಾಗುವುದಿಲ್ಲ. ಅಂದುಕೊಂಡ ಹಾಗೆ ಯಾವುದೂ ನಡೆಯುವುದಿಲ್ಲ.

ಸೂರ್ಯ ಮೂಡುವ ಮೊದಲೇ ಎದ್ದ. ಹಲ್ಲುಜ್ಜಿ ಕೊಳದ ಹತ್ತಿರದಿಂದ ಬರು ತ್ತಿದ್ದಾಗ ಬಾವಿಕಟ್ಟೆಯ ಹತ್ತಿರ ಮಾಳುವನ್ನು ಕಂಡ. ಅವಳ ಕಡೆಗೆ ನೋಡದೆ ಹೋಗುತ್ತಿದ್ದಾಗ ಮಾಳು ಕೇಳಿದಳು.

"ಏನು ಅಪ್ಪುಣ್ಣಿ ಅಣ್ಣ ಹೊತ್ತಿಗೆ ಮುಂಚೆ ಎದ್ದೆಯ?"

ಅವನು ಮಾತಾಡದೆ ಮುಂದೆ ನಡೆದ.

ಎಲ್ಲರೂ ತನ್ನ ವಿರೋಧಿಗಳು. ತಾನು ಹಾಳಾಗುವುದನ್ನು ಕಾಣಲು ಕಾದಿದ್ದಾರೆ. ಎಲ್ಲರನ್ನೂ......ಬೆಳಗಿನ ಹೊತ್ತು ಮೂಡು ದಿಕ್ಕಿನಲ್ಲಿ ಮಂಜುಕವಿದು ನಿಂತಿದ್ದ ಆ ತೊಟ್ಟಿ ಮನೆಯನ್ನೂ ಅದರೊಳಗಿರುವ ಮನುಷ್ಯರನ್ನೂ ಅವನು ದ್ವೇಷಿಸು ತ್ತಾನೆ......

ಹಿಂದಿನ ದಿನ ಬಿಚ್ಚಿಟ್ಟಿದ್ದ ಷರಟು ಹಾಕಿಕೊಂಡ. ಒಗೆದು ಹಾಕಿದ ಲುಂಗಿ ಇನ್ನೂ ಒಣಗಿರಲಿಲ್ಲ. ಕೊಳೆಯಾಗಿದ್ದ ಲುಂಗಿಯನ್ನು ಬದಲಿಸಿ ಅದನ್ನುಟ್ಟುಕೊಂಡ.

ರಬ್ಬರ್ ದಾರದಲ್ಲಿ ಕಟ್ಟಿದ ಪುಸ್ತಕಗಳನ್ನು ಕೈಗೆತ್ತಿಕೊಂಡು ಹೊರಕ್ಕೆ ಕಾಲಿರಿಸಿದಾಗ ಮತ್ತೂ ಮಾಳುವನ್ನು ತನ್ನೆದುರು ಕಂಡ.

"ಎಲ್ಲಿಗೆ ಹೋಗ್ತೀ ಅಪ್ಪುಣ್ಣಿ ಅಣ್ಣ ಇಷ್ಟು ಹೊತ್ತಿಗೆ ಮುಂಚೆ?"

"ಎಲ್ಲಿಗೋ."

ಹೊರಗೆ ಮತ್ತೆ ಅವನು ಅನುಮಾನಿಸುತ್ತ ನಿಂತ. ಮುಂಬಾಗಿಲು ತೆರೆದು ಗದ್ದೆಯ ಹತ್ತಿರಕ್ಕೆ ಬಂದಾಗ ಅವನು ಆಲೋಚಿಸಿದ 'ಎಲ್ಲಿಗೆ ಹೋಗುವುದು' ಎಂದು.

ಅದೇ ದಿನ ನಾಲ್ಕು ಗಂಟೆಯ ಒಳಗೆ ಹಣ ಕಟ್ಟಬೇಕು.

ಯಾರನ್ನು ಕಾಣುವುದು? ಯಾರನ್ನು ಕೇಳುವುದು? ಸುಮ್ಮನೆ ನಡೆಯುತ್ತಿದ್ದ. ಗದ್ದೆಯ ಬಯಲಿನಿಂದ ರಸ್ತೆಗೆ ಬಂದ.

ಸ್ಕೂಲಿಗೆ ಹೋಗಬೇಕಾದದ್ದು ತೆಂಕು ಭಾಗದಲ್ಲಿ. ಅವನು ಸೀದ ಬಡಗು ದಿಕ್ಕಿನ ರಸ್ತೆಯನ್ನು ಹಿಡಿದು ಹೊರಟ. ಹೊಳೆ ಪಕ್ಕದಲ್ಲಿ ಹೋಗುವ ರಸ್ತೆಯ ಪಕ್ಕದಲ್ಲಿದ್ದ ಚಾ ಅಂಗಡಿಯಲ್ಲಿ ಬೆಳಗಿನ ವ್ಯಾಪಾರದ ಗಲಾಟೆಯಿತ್ತು.

ರಸ್ತೆಯಿಂದ ಪುನಃ ಗದ್ದೆ ಬಯಲಿಗಿಳಿದು ಅಲ್ಲಿಂದ ಕಾಲು ದಾರಿಯಲ್ಲಿ ಹೊರಟು ಸ್ವಲ್ಪ ದೂರ ಹೋದಾಗ ಗುಡ್ಡದ ಬುಡಕ್ಕೆ ಬಂದ. ತಾನೆಲ್ಲಿಗೆ ಹೋಗುತ್ತಿದ್ದೇನೆ ಎಂದು ಕೂಡ ಆಲೋಚಿಸಿರಲಿಲ್ಲ. ಕಡೆಗೆ ಬಂದು ತಲಪಿದ್ದು ನರಿವಾಳನ್ ಗುಡ್ಡದ ಬುಡಕ್ಕೆ. ಆಗ ಅವನಿಗೆ ನೆನಪಾಯಿತು—ಮನೆ ಬಿಟ್ಟು ಹೊರಟು ಬಂದ ಆ ಪ್ರಭಾತ ದಲ್ಲೂ ಬಂದು ಕುಳಿತದ್ದು ಇಲ್ಲಿಯೇ. ಸೈದಾಲಿ ಕುಟ್ಟಿಯನ್ನು ಕಂಡದ್ದು ಇಲ್ಲಿಯೇ ಎಂದು.

ಗುಡ್ಡದ ಹತ್ತಿರ ಒಣಗಿದ ಹುಲ್ಲು ನೆಲವನ್ನು ಮಾತ್ರ ಕಾಣಬಹುದಾಗಿತ್ತು. ಎಳೆಬಿಸಿಲು ಸುಡುವುದಕ್ಕಾರಂಭಿಸಿತ್ತು.

ಕೋಡುಗಲ್ಲಿನ ಆ ಚೂಪಾಗಿದ್ದ ಬಂಡೆ ಆಗಲೂ ಹಾಗೆಯೇ ಇದೆ. ಅವನು ಅದರ ಮೇಲಕ್ಕೆ ಹೋಗಿ ಕುಳಿತ. ನೆನಪಿನ ಆಳದಿಂದ ಹೊಳೆಯುತ್ತಿದ್ದ ಆ ಪ್ರಭಾತ ದಲ್ಲಿ ಅದೇ ಬಂಡೆಯ ಮೇಲೆ ಕುಳಿತದ್ದು ಹೌದು. ಎರಡು ವರ್ಷಗಳಿಗೆ ಮೊದಲು ಆಗಲೂ ಗುಡ್ಡದ ಪಕ್ಕದಲ್ಲಿ ಕಣ್ಣಾಂತಳಿ ಪೊದರುಗಳಿದ್ದುವು.

ಎರಡು ವರ್ಷಗಳು ದಾಟಿ ಹೋಗಿವೆ. ಈ ಎರಡು ವರ್ಷಗಳ ಅವಧಿಯಲ್ಲಿ ತಾನೆಷ್ಟೋ ವರ್ಷಗಳನ್ನು ದಾಟಿದ್ದೇನೆ ಎನ್ನಿಸುತ್ತಿದೆ.

ಈ ಕೋಡುಗಲ್ಲಿನ ಬಂಡೆಯೂ ಬೆಳೆದಿದೆಯೊ? ಇರಬೇಕು. ಸೈನ್ಸ್ ಮಾಸ್ಟರ್ ಕ್ಲಾಸಿನಲ್ಲಿ ಹೇಳಿದರು.

ಬೆಳವಣಿಗೆ ಎರಡು ರೀತಿಯಲ್ಲಿ ಎಂದು. "ಬಂಡೆಗಳೂ ಕೋಡು ಬಂಡೆಗಳೂ ಬೆಳೆಯುವುದು ಹೊರಗಿನಿಂದ. ಜೀವಿಗಳು ಬೆಳೆಯುವುದು ಒಳಗಿನಿಂದ."

ಈ ಬಾಡೆ ಹೊರಗಿನಿಂದ ಬೆಳೆಯುವುದಾಗಿರಬೇಕು.

ಮನುಷ್ಯನೂ ಪ್ರಾಣಿಗಳೂ ಒಳಗಿನಿಂದ ಬೆಳೆಯುವುದು.

ಎರಡು ವರ್ಷಗಳ ಅಂತರದಲ್ಲಿ ತಾನೆಷ್ಟೊಂದು ಬೆಳೆದು ಬಿಟ್ಟಿದ್ದೇನೆ? ಕನ್ನಡಿಯಲ್ಲಿ ನೋಡಿಕೊಂಡಾಗಲೆಲ್ಲ ದೊಡ್ಡವನಾಗಿ ಬಿಟ್ಟಿದ್ದೇನೆ ಎನ್ನಿಸುತ್ತಿತ್ತು. ಮೊದಲಿನ ಟ್ರೌಸರ್ ಮತ್ತು ಷರಟು ಹಾಕಿಕೊಂಡು ನಡೆಯುತ್ತಿದ್ದ ಅಪ್ಪುಣ್ಣಿ ಎನ್ನುವ ಸಣ್ಣ ಹುಡುಗನಲ್ಲ ತಾನೀಗ. ಆ ಅಪ್ಪುಣ್ಣಿ ನಂಬೂದಿರಿ ಮನೆಯಲ್ಲಿ ಭತ್ತ ಕುಟ್ಟುವವಳ ಮಗನಾಗಿದ್ದ. ಈಗ ಅಸಂಖ್ಯಾತ ಜನರು ತುಂಬಿರುವ ಲೋಕದಲ್ಲಿ ಒಂಟಿಯಾಗಿ ನಿಂತಿರುವ ಒಬ್ಬಾತ ತಾನು. ಯಾರೂ ನನ್ನವರಾಗದಿದ್ದರೆ ಬೇಡ. ಯಾರಿಗೂ ಭಯ ಪಡಬೇಕಾಗಿಲ್ಲ......

ಬಿಸಿಲಿನ ಶಾಖ ಹೆಚ್ಚಾದಾಗಲೇ ಅಪ್ಪುಣ್ಣಿಗೆ ಸ್ಕೂಲಿನ ನೆನಪಾದದ್ದು. ಸ್ಕೂಲಿಗೆ ಹೋಗಬೇಕು. ಆದರೆ ಹದಿನೈದು ರೂಪಾಯಿಯ ವಿಷಯ ಬಂದಾಗ—

ಬೆಳಗ್ಗೆ ಹೊರಟಾಗ ದೇವರ ಮನೆಯ ಮುಂದೆ ನಿಂತು ನಮಸ್ಕರಿಸಲಿಲ್ಲ. ಆ ಪದ್ಧತಿ ಈ ದಿನ ತಪ್ಪಿ ಹೋಯಿತು. ಮೊದಲು ಉಪವಾಸ ಮಲಗಿದ್ದಾಗ ಹೊಳೆ ದಾಟಿಕೊಂಡು ಬಂದು ಮಕ್ಕಳಿಗೆ ಅನ್ನ ತಂದುಕೊಟ್ಟ ಭಗವತಿ ಇರುವ ಸ್ಥಳ.

ಆ ತಾಯಿ ತನ್ನ ಪ್ರಾರ್ಥನೆಯನ್ನು ಕೇಳಿಸಿಕೊಳ್ಳದಿದ್ದೇಕೆ? ಒಣಗಿದ ಹುಲ್ಲು ನೆಲದ ಮೇಲೆ ಅವನ ನೆಳಲು ಹಿಂದೆ ಉದ್ದವಾಗಿ ಬಿದ್ದಿತ್ತು.

ಅಪ್ಪುಣ್ಣಿ ಎದ್ದು ನಿಂತ; ಸ್ಕೂಲಿಗೆ ಹೋಗುವುದೇ ಸರಿ. ಕ್ಲಾಸ್ ಮಾಸ್ಟರು ಕೇಳುತ್ತಾರೆ; ಇಲ್ಲದಿದ್ದರೆ ಹೆಡ್ ಮಾಸ್ಟರ್ ಕರೆದು ಕೇಳುತ್ತಾರೆ.

"ಫೀಸು ಕಟ್ಟುವುದಿಲ್ಲವಾ?" ಎಂದು. ಕೇಳಿದರೆ ಹೇಳುತ್ತೇನೆ—

"ಇಲ್ಲ ಸಾರ್ ಕಟ್ಟುವುದಿಲ್ಲ."

"—ಇವತ್ತೇ ಕೊನೆಯ ತಾರೀಖು ಗೊತ್ತಿದೆಯಾ?"

"ಗೊತ್ತಿದೆ ಸಾರ್"

"ಈ ದಿನ ಹಣ ಕಟ್ಟದೇ ಇದ್ದರೆ ಪರೀಕ್ಷೆಗೆ ಕುಳಿತುಕೊಳ್ಳುವುದಕ್ಕೆ ಸಾಧ್ಯವಿಲ್ಲ."

"ಗೊತ್ತಿದೆ ಸಾರ್ ಗೊತ್ತಿದೆ"

"—ಒಂದು ವರ್ಷ ವ್ಯರ್ಥವಾಗಿ ಹೋಗುತ್ತದೆ"

"ಹೋಗಲಿ ಸಾರ್"

"ಯಾಕೆ ಹಣ ಕಟ್ಟುವುದು ಬೇಡ ಅಂದುಕೊಂಡೆ"

"ನನ್ನ ಹತ್ತಿರ ಹಣ ಇಲ್ಲ"

"—ಮನೆಯಲ್ಲಿ?"

ನನಗೆ ಮನೆಯಿಲ್ಲ ಸಾರ್, ನನಗೆ ಯಾರೂ ಇಲ್ಲ, ನನಗೆ ಯಾರೂ ಇಲ್ಲ"

"ಅಯ್ಯೋ ಪಾಪ!"

—ಅದು ಮಾತ್ರ ಹೇಳಕೂಡದು. ಯಾರೂ ಅದಕ್ಕಾಗಿ ಅನುಕಂಪವನ್ನು ತೋರಿಸಬೇಕಾಗಿಲ್ಲ.

ಹಾಗೆ ಆ ದೃಶ್ಯ ಸಮಾಪ್ತಿಗೊಳ್ಳುತ್ತದೆ.

ಸ್ಕೂಲಿಗೆ ಹೋದಾಗ ತುಂಬ ಆಯಾಸಗೊಂಡಿದ್ದ. ಎಡ ಬಲ ನೋಡದೆ ಗೇಟು ದಾಟಿ ಹೋದ. ದೊಡ್ಡ ಕಟ್ಟಡದ ಕೊನೆಯ ರೂಮಿಗೆ ಹೋದ.

ಹಸಿರು ಕೋಟು ಧರಿಸಿ ಹಣೆಗೆ ತಿಲಕವನ್ನಿಟ್ಟಿದ್ದ ಜಾಗಳ್ಳಿ ಮಾಸ್ಟರು ಕ್ಲಾಸ್ ತೆಗೆದುಕೊಳ್ಳುತ್ತಿದ್ದರು. ಅವರು ಪಾಠ ತೆಗೆದುಕೊಳ್ಳುವ ನೆಪದಲ್ಲಿ ತಾನು ಉತ್ತರ ಇಂಡಿಯದಲ್ಲಿ ಸಂಚರಿಸಿದ್ದನ್ನೂ ಯಾವನೋ ದಿವಾನನ ಮಗಳಿಗೆ ಟ್ಯೂಷನ್ ಹೇಳಿ ಕೊಟ್ಟಿದ್ದನ್ನೂ ಹೇಳುತ್ತಿದ್ದಾರೆ. ಅವರ ತಂದೆ ಇರುವುದು ಈಗ ಹೌಸ್ ಬೋಟಿನಲ್ಲಿ—ಇತ್ಯಾದಿ ಹೇಳುತ್ತಿದ್ದಾರೆ.

ಮುಖವೆತ್ತಿ ನೋಡಲು ಧೈರ್ಯವಿರಲಿಲ್ಲ. ಎರಡನೆಯ ಪೀರಿಯಡ್ ಅದು.

ಕ್ಲಾಸಿನಲ್ಲಿದ್ದ ನಲವತ್ತೈದು ಜೋಡಿ ಕಣ್ಣುಗಳು ತನ್ನ ಕಡೆಗೆ ನೋಡುತ್ತಿದ್ದುವು. ಮಾಸ್ಟರು ಹೇಳಿದರು:

"ಗೆಟ್ ಇನ್. ಏನು ನಿನಗೆ ಈಗ ಬೆಳಕಾಯ್ತಾ?"

ಅಪ್ಪಣ್ಣಿ ಮೌನವಾಗಿದ್ದ. ದೀನವದನನಾಗಿ ಒಂದು ಸಲ ನೋಡಿದ ಅಷ್ಟೆ. ಮುಂದಿನ ಸಾಲಿನಲ್ಲಿ ಎಡದ ತುದಿಯಲ್ಲಿ ಹೋಗಿ ಕುಳಿತುಕೊಂಡ. ಮುಹಮ್ಮದ್ ಬಂದಿದ್ದಾನೋ ಎಂದು ಒಂದು ಸಲ ನೋಡಬೇಕು ಅನ್ನಿಸಿತ್ತು. ಈ ಪೀರಿಯಡ್ ಕಳೆದ ಮೇಲೆ ನೋಡಿದರಾಯ್ತು.

ಬೆಲ್ ಹೊಡೆಯಿತು. ಮಾಸ್ಟರ್ ಮ್ಯಾಪು ಮಡಚಿಕೊಂಡು ಹೋದಾಗ ಅವನು ಹಿಂದಕ್ಕೆ ತಿರುಗಿ ನೋಡಿದ. ಮುಹಮ್ಮದ್ ಬಂದಿಲ್ಲ.

ಒಂದು ಗಂಟೆಯ ಬೆಲ್ ಹೊಡೆದ ಮೇಲೆ ಹೊರಗೆ ಬಂದಾಗ ಮುಹಮ್ಮದ್ ಬೆವರಿನ ಸ್ನಾನ ಮಾಡಿ ಬರುತ್ತಿರುವುದನ್ನು ನೋಡಿದ. ಅವನು ಆಗ ತಾನೇ ಬರುತ್ತಿದ್ದದ್ದು. ಹಣ ಸಿಕ್ಕಿತಾ? ಎಂದು ಕೇಳಲು ನಾಲಿಗೆಯೇ ಬರಲಿಲ್ಲ. ಆದರೆ ಅವನ ಕಣ್ಣುಗಳಲ್ಲಿಯೂ ತುಟಿಗಳಲ್ಲಿಯೂ ಆ ಪ್ರಶ್ನೆ ಎದ್ದು ನಿಂತಿತ್ತು.

ಮುಹಮ್ಮದ್ ಕಣ್ಣು ಕಣ್ಣು ಮಿಟುಕಿಸಿ ಒಂದು ಸಂತೋಷದ ನಗು ನಕ್ಕ. ತೋಳನ್ನು ಹಿಡಿದುಕೊಂಡು ಹೇಳಿದ.

"ತಗೊಳ್ಳೋ ಸಿಕ್ಕಿತು"

ಸಿಕ್ಕಿತು!—ಪಾಕೆಟ್ಟಿನಿಂದ ತುಂಬ ಮುದುರಿಕೊಳಕಾಗಿದ್ದ ಹದಿನೈದು ಬಿಡಿ ನೋಟುಗಳನ್ನು ತೆಗೆದುಕೊಟ್ಟಾಗ ಅಪ್ಪಣ್ಣಿಗೆ ಮುಹಮ್ಮದನನ್ನು ಅಪ್ಪಿಕೊಳ್ಳಬೇಕು ಎನ್ನಿಸಿತು.

"ಎಲ್ಲಿಂದ ಎಲ್ಲಿಂದ?"

"ಅದೆಲ್ಲ ಈಗ್ಯಾಕೆ ಮೊದಲು ಹೋಗಿ ಫೀಸು ಕಟ್ಟು."

"ಯಾವಾಗ ಹಿಂದಕ್ಕೆ ಕೊಡಬೇಕು?"

"ಕೈಲಿದ್ದಾಗ ಕೊಟ್ಟರೆ ಸಾಕು"

ಹೆಚ್ಚು ಪ್ರಶ್ನೆ ಕೇಳುವುದಕ್ಕೆ ಅಲ್ಲಿ ನಿಲ್ಲಲಿಲ್ಲ. ಬೇಗ ಆಫೀಸಿನ ಹತ್ತಿರಕ್ಕೆ ಓಡಿದ. ಕ್ಲಾರ್ಕ್ ಕುರುಪ್ ಇನ್ನೂ ಊಟಕ್ಕೆ ಹೋಗಿರಲಿಲ್ಲ. ತಕ್ಷಣ ಫೀಸ್ ಕಟ್ಟಿದ.

ಸಾಯಂಕಾಲ ಸ್ಕೂಲು ಬಿಟ್ಟು ಬರುವಾಗ ಮುಹಮ್ಮದನ ಹತ್ತಿರ ಹೇಳಿದ.

"ನಾನು ಹಣ ಸಿಕ್ಕಲಿಲ್ಲ ಅಂದುಕೊಂಡಿದ್ದೆ"

"ನಾನೆಷ್ಟು ಜನರ ಹತ್ತಿರ ಕೇಳಿದೆ ಗೊತ್ತಾ? ಸಿಕ್ಕಲಿಲ್ಲ. ಅಮ್ಮನನ್ನು ಬಿಟ್ಟು ಕೇಳಿಸಿದೆ."

"ಹಾಗಾದರೆ ಎಲ್ಲಿಂದ ಸಿಕ್ಕಿದ್ದು?"

"ಅಮ್ಮ ಅದೆಷ್ಟು ಕಡೆ ತಿರುಗಿದಳು ಅಂತೀಯಾ? ಸಿಕ್ಕದೆ ಸುಮ್ಮನೆ ಬಂದು ಕುಳಿತಿದ್ದಾಗ ಆ ಸುದ್ದಿ ತಿಳಿದು ಕೊಟ್ಟುಕಳಿಸಿದ್ದನ್ನು ಒಬ್ಬ ಮನುಷ್ಯ ತಂದುಕೊಟ್ಟ."

"ಯಾರು ಮುಹಮ್ಮದ್ ಯಾರು?"

"ಯಾರಾದರೂ ಆಗಿರಲಿ"

"ಯಾರು ಹೇಳು"

"ಹೇಳಿದರೆ ನಿನಗೆ ಹಿಡಿಸೋದಿಲ್ಲ"

ಅಪ್ಪುಣ್ಣಿ ಏನನ್ನೋ ಆಲೋಚಿಸುತ್ತಿದ್ದ.

"ಯಾರಾದರೇನು?"

"ನನಗೆ ಗೊತ್ತಾಗಬೇಕು; ನನಗೆ ಸಹಾಯ ಮಾಡಿದ್ದು ಯಾರು ಅಂತ."

"ಹಣ ಕೊಟ್ಟುಕಳಿಸಿದ್ದು ನಿಮ್ಮಪ್ಪ"

"ಅಪ್ಪ!" ಅಪ್ಪುಣ್ಣಿ ಇದ್ದಕ್ಕಿದ್ದಂತೆ ಸ್ತಬ್ಧನಾಗಿ ಬಿಟ್ಟ. ಅದು ಬೇಕಾಗಿರಲಿಲ್ಲ. ಮುಹಮ್ಮದನ ಭುಜವನ್ನು ಬಲವಾಗಿ ಹಿಡಿದುಕೊಂಡು ಅಪ್ಪುಣ್ಣಿ ಸಿಟ್ಟಿನಿಂದ ಕೇಳಿದ.

"ಅದನ್ನು ಮೊದಲೇ ಹೇಳಬಾರದಿತ್ತೇನೋ"

ಮುಹಮ್ಮದ್ ಯಾವ ಬೇಸರವನ್ನೂ ತೋರಿಸಿಕೊಳ್ಳದೆ ನಗುತ್ತ ಹೇಳಿದ.

"ನೋಡೋ ಅವರ ಒಂದು ರೂಪಾಯಿಗೂ ಹದಿನಾರಾಣೆಯೇ ಅಲ್ಲವೇನೋ. ಆದ್ದರಿಂದ ಫೀಸು ಕಟ್ಟೋದಕ್ಕಾಯ್ತು. ನೀನು ಬಾಯಿಗೆ ಬಂದ ಹಾಗೆ ಮಾತಾಡ ಬೇಡ ಸುಮ್ಮನಿರು"

ಒಬ್ಬನೇ ಇದ್ದಾಗ ಮನಸ್ಸು ವೇಗುದಿಗೊಂಡಿತ್ತು.

ರಾತ್ರಿಯ ಹೊತ್ತು ಓದುವುದಕ್ಕೆ ಒಂದು ದೀಪ ಸಿಕ್ಕಬೇಕಾದರೆ ಎಷ್ಟೋ

ಹೊತ್ತು ಕಾಯಬೇಕಾಗಿತ್ತು. ಕೆಂಪಾದ ಚಿಮಿಣಿ ಎಣ್ಣೆಯ ಒಂದು ದೀಪ. ವಿಪರೀತ ಹೊಗೆ ಬರುತ್ತದೆ. ಅದನ್ನು ನೋಡಿದಾಗ ಅಂತು ಈ ಹಳೆ ದೀಪದಲ್ಲೂ ಜೀವವಿದೆ ಎನ್ನುವ ರೀತಿಯಲ್ಲಿತ್ತು ಅದರ ವಿಕೃತ ರೂಪ. ಎಲ್ಲಿಟ್ಟರೂ ಹೊಗೆ ತಿರುಗಿ ಮುಖದ ಕಡೆಗೆ ಬರುತ್ತಿತ್ತು.

ಮಾಳು ಹಿಂದೆ ಬಂದು ನಿಂತುಕೊಂಡಿದ್ದಳು. ಅವನಿಗೆ ಅದು ತಿಳಿಯದು. ಆಗ ಬೆರಳು ನೆಟಿಗೆ ತೆಗೆದ ಶಬ್ದವನ್ನು ಕೇಳಿದಾಗ ಆ ಕಡೆಗೆ ತಿರುಗಿ ನೋಡಿದ. ಅವಳು ಕೇಳಿದಳು.

"ಫೀಸು ಕಟ್ಟಿದೆಯಾ ಅಪ್ಪುಣ್ಣಿ ಅಣ್ಣ?"

"ಹ್ಞುಂ" ಎಂದಷ್ಟೇ ಹೇಳಬೇಕು ಎಂದು ಎನ್ನಿಸಿತು.

"ಎಲ್ಲಿಂದ?"

"ಎಲ್ಲಿಂದಲೋ"

ಈ ಹೆಣ್ಣಿಗೆ ಎಲ್ಲ ಸುದ್ದಿಯೂ ಬೇಕು! ಚಿಮ್ಮಿಣಿಯ ಮಂದ ಬೆಳಕಿನಲ್ಲಿ ಕಂಬಿಕ್ಕೆ ಕೆನ್ನೆಗಳನ್ನು ಒರಗಿಸಿಕೊಂಡು ಕಣ್ಣುಗಳನ್ನು ಬಿಟ್ಟ ಹಾಗೇ ಬಿಟ್ಟುಕೊಂಡು ನೋಡುತ್ತ ಅವಳನ್ನು ಅವನೊಮ್ಮೆ ನೋಡಿದ. ಒದ್ದೆಯಾದ ತಲೆಗೂದಲಿನಿಂದ ಅಸಹ್ಯವಾದ ವಾಸನೆ ಮೂಗಿಗೆ ಬಡಿಯುತ್ತಿತ್ತು. ಉದ್ದನೆಯ ಕತ್ತಿನಲ್ಲಿ ದಾರದಲ್ಲಿ ಪೋಣಿಸಿದ ಪದಕದ ಹಾಗೆ ಅವಳ ಕಣ್ಣುಗಳು ಹೊಳೆಯುತ್ತಿದ್ದುವು.

ಮಾತನಾಡಲು ಅವಳು ಹತ್ತಿರ ಬಂದಾಗ ಜುಗುಪ್ಸೆಯುಂಟಾಗುತ್ತಿತ್ತು. ದೂರ ದಿಂದ ಅವಳನ್ನು ನೋಡಿದಾಗ ಅನುಕಂಪವುಂಟಾಗುತ್ತಿತ್ತು. ಅವಳಿಗೆ ದೇವರು ಯಾವ ಸೌಂದರ್ಯವನ್ನೂ ಕೊಡಲಿಲ್ಲ. ಕಾಣುವುದಕ್ಕೆ ಅಂದವಾದ ಮುಖವನ್ನೂ ಕೂಡ ಕೊಡಲಿಲ್ಲ.

ಪುಸ್ತಕದ ಸಾಲಿನಲ್ಲಿ ಕಣ್ಣುಗಳು ಬರಿದೇ ಸಂಚರಿಸುತ್ತಿದ್ದುವು. ಪುಸ್ತಕದಲ್ಲಿ ಶ್ರದ್ಧೆ ಯಿಟ್ಟು ಓದಲು ಪ್ರಯತ್ನ ಪಡುತ್ತಿದ್ದ.

**Oh, swallow, swallow if I could follow and light**
**Upon her lattice, I would pipe and frill**
**And chirp and twller twenty million loves.**

ಇಂಗ್ಲೀಷ್ ಮಾಸ್ಟರ್ ಹೇಳಿಕೊಟ್ಟಿದ್ದ ಅರ್ಥವನ್ನು ಜ್ಞಾಪಿಸಿಕೊಳ್ಳಲು ಕಷ್ಟಪಟ್ಟ. ಕವಿ ದೂರದ ತೆಂಕು ರಾಜ್ಯದಲ್ಲಿರುವ ಒಂದು ಹೆಣ್ಣಿಗೆ ಸಂದೇಶ ಕಳುಹಿಸುತ್ತಾನೆ. ಕವಿ ಆ ಹೆಣ್ಣನ್ನು ಪ್ರೀತಿಸುತ್ತಾನೆ. ಪಕ್ಷಿಯ ಹತ್ತಿರ ಎಲ್ಲವನ್ನೂ ಹೇಳಿಕೊಳ್ಳುತ್ತಾನೆ.

**Oh, were I thou that she might take me in**
**And lay me on her bosom and her heart**
**Would rock the snowy craddle till I died.**

ನಾನೇ ನೀನಾಗಿದ್ದಿದರೆ ಅವಳು ನನ್ನನ್ನು ಎದೆಗವುಚಿಕೊಳ್ಳುತ್ತಿದ್ದಳು......

ಮತ್ತೂ ಮನಸ್ಸು ಎಲ್ಲೆಲ್ಲಿಯೋ ಸಂಚರಿಸಿತು. ಅಕ್ಷರಗಳು ಕಣ್ಣೆದುರಿಗಿರುವುದು ಮರೆತು ಹೋಯಿತು. ಮಿಸುಗುವ ಒಂದು ನೀಲಿಯ ರೇಶ್ಮೆಯ ಉಡುಗೆ ಉಟ್ಟ, ಕಾಡಿಗೆ ಹಚ್ಚಿದ, ಅರೆಮುಚ್ಚಿದ ಕಣ್ಣುಗಳು......ಆಹ್ಲಾದವನ್ನುಂಟುಮಾಡುವ ಸುಗಂಧ......

ಅಯ್ಯೋ! ಏನೇನೋ ಯೋಚನೆ ಮಾಡುತ್ತಿದ್ದೇನಲ್ಲಾ?

ಪರೀಕ್ಷೆ ಇನ್ನು ಮೂರು ತಿಂಗಳು ಮಾತ್ರವೇ ಇರುವುದು. ಅವನು ಮತ್ತೂ ಪಾಠದಲ್ಲಿ ಗಮನವಿಟ್ಟು ಓದಲು ಯತ್ನಿಸಿದ.

Why lingereth she to clothe her heart with love
Delaying as the tender arts delays
To clothe herself when all the woods are green.

ತಕ್ಷಣ ಅವನು ಯೋಚಿಸಿದ. ಈಗ ಅಮ್ಮಣ್ಣಿ ಅಕ್ಕ ಏನು ಮಾಡುತ್ತಿರಬಹುದು?

ನಿದ್ದೆ ಮಾಡುತ್ತಿರಬಹುದು. ಮೃದುವಾದ ಹಾಸಿಗೆಯ ಮೇಲೆ ಹಾಯಾಗಿ ಪಕ್ಕಕ್ಕೆ ಹೊರಳಿಕೊಂಡು ಮಲಗಿರಬಹುದು. ಕೆಂಪಾದ ಗಾಜಿನ ಬಳೆಗಳ ಕೈ ತಲೆದಿಂಬನ್ನು ಬಳಸಿರಬಹುದು.

ಮೊದಲು ಯಾವುದೋ ಪತ್ಯ ಪುಸ್ತಕದಲ್ಲಿ ಕಂಡ ನಿದ್ರೆ ಮಾಡುತ್ತಿರುವ ರಾಜ-ಕುಮಾರಿಯ ಚಿತ್ರ ನೆನಪಾಯಿತು.

ನಿದ್ದೆ ಮಾಡುತ್ತಿರುವ ರಾಜಕುಮಾರಿಯ ಆ ಕಥೆ ನಾಲ್ಕನೆಯ ಫಾರಂನಲ್ಲಿ ಓದಿದ್ದಲ್ಲವೆ?

ರಾಜಕುಮಾರಿ ನಿದ್ದೆ ಮಾಡುವುದಕ್ಕೆ ತೊಡಗಿ ಎಷ್ಟೋ ವರ್ಷಗಳಾಗಿವೆ.

ಅಲ್ಲಿಗೊಬ್ಬ ರಾಜಕುಮಾರ ಬಂದ. ಎದುರಿಗಿದ್ದ ತೆರೆಯನ್ನು ಸರಿಸಿ ಮಂಚದ ಹತ್ತಿರಕ್ಕೆ ಹೋಗಿ ಬಾಗಿ ಅವಳ ಕೆನ್ನೆಗೆ ಒಂದು ಮುತ್ತು ಕೊಟ್ಟ. ತೇವಗೊಂಡ ಅವನ ತುಟಿಗಳು ಅವಳ ಕೆನ್ನೆಯ ಮೇಲೆ......

—ನಾಚಿಕೆಯಾಗಿತ್ತು. ಅದನ್ನು ನೆನಸಿಕೊಂಡಾಗ ನಿಗೂಢವಾದ ಒಂದು ಬಗೆಯ ಆನಂದವೂ ನಾಚಿಕೆಯೂ ಉಂಟಾಯಿತು.

"ಇನ್ನು ನನಗೊಂದು ಮುತ್ತು ಕೊಡು."

"ಕೊಡುವುದಿಲ್ಲವಾ?"

"ಒಂದು. ನಾನೆಷ್ಟೊಂದು ಕೊಟ್ಟೆ?"

ಮೆಲ್ಲಮೆಲ್ಲನೆ ತುಟಿಗಳು ಕೆನ್ನೆಯನ್ನು ಸ್ಪರ್ಶಿಸಿದುವು. ಅದರ ನಂತರ......?

ಕತ್ತಿನಲ್ಲೂ ಕೆನ್ನೆಯ ಮೇಲೂ ಒಂದೇ ಸಮನೆ ಮುತ್ತಿಟ್ಟದ್ದೂ ಮುತ್ತಿಟ್ಟದ್ದೇ.

ಉಬ್ಬಿ ಇಳಿಯುತ್ತಿದ್ದ ವಕ್ಷಸ್ಥಳದಲ್ಲಿ ಮುಖ ಒತ್ತಿಕೊಂಡು ಮಲಗಿದಾಗ ಶರೀರವೆಲ್ಲ ಕಚಗುಳಿಯಿಟ್ಟಂತಾಗಿತ್ತು.

ಅವನನ್ನು ಯಾವುದೋ ಭಾವನಾ ಪ್ರಪಂಚಕ್ಕೆ ಕರೆದುಕೊಂಡು ಹೋಗಿದ್ದವಳು ಅಮ್ಮಿಣ್ಣಿ ಅಕ್ಕ.

ದೀಪದ ಹೊಗೆಯಿಂದಾಗಿ ಪುಸ್ತಕದ ಮೇಲೆಲ್ಲ ಮಸಿ ಬಿದ್ದಿತ್ತು. ದೀಪವನ್ನು ಇನ್ನೂ ಸ್ವಲ್ಪ ದೂರದಲ್ಲಿಟ್ಟುಕೊಂಡು ಮತ್ತೂ ಓದಿದ.

**Why linghereth she to....**

"ನಿನಗಿನ್ನೂ ಮಲಗೋ ಹೊತ್ತಾಗಿಲ್ಲವೇನೋ?"

ಯಾವುದೋ ಕೆಲಸಕ್ಕಾಗಿ ಕೆಳಗಿಳಿದು ಬಂದ ದೊಡ್ಡಮ್ಮ ಕೇಳಿದರು.

"ಓದುತ್ತಿದ್ದೇನೆ"

"ರಾತ್ರಿ ಇಡೀ ದೀಪ ಉರಿಸೋದಕ್ಕೆ ನೀನಿಲ್ಲಿ ಟಿನ್ನಿನಲ್ಲಿ ಎಣ್ಣೆ ತಂದಿಟ್ಟಿದ್ದೀಯಲ್ಲವೆ?"

ಅವನು ಕೂಡಲೇ ದೀಪ ಆರಿಸಿದ.

ಕತ್ತಲೆಯಲ್ಲಿ ತಡವರಿಸಿಕೊಂಡು ಏಣಿಯ ಕೋಣೆಗೆ ಹೋದ.

* * * * *

ದೊಡ್ಡ ಮಾವ 'ಹೂದೋಟ'ದ ಜಮೀನಿನ ಹತ್ತಿರ ಹೋಗಿ ಒಂದು ತಿಂಗಳಾಗಿತ್ತು.

ಕುಟ್ಟಿ ಮಾವ ದೂರದ ಹಾಗೆ ತೆಂಗಿನ ಕಾಯಿಯೆಲ್ಲವನ್ನೂ ಕೊಪ್ಪರ ಕಾರನ್ ಕುಂಞಾಲುವಿಗೆ ಒಪ್ಪಂದ ಮಾಡಿ ಹಣವನ್ನು ತೆಗೆದುಕೊಂಡಿದ್ದಾರೆ. ಕುಂಞಾಲುವೇ ಬಂದು ಆ ವಿಷಯವನ್ನು ಹೇಳಿದ್ದು. ಅಡುಗೆ ಮನೆಯ ಹೊರಗಿನ ತೆಂಗಿನ ಮರದ ಕಾಯಿಯನ್ನು ಮಾತ್ರ ಮನೆಯ ಆವಶ್ಯಕತೆಗೆಂದು ಕೀಳಿಸಿಕೊಳ್ಳಬಹುದು. ಉಳಿದಿದ್ದೆಲ್ಲ ಅವನಿಗೆ ಸೇರಿದ್ದು.

ಕುಂಞಾಲು ಎಚ್ಚರಿಕೆ ಕೊಟ್ಟಿದ್ದಾನೆ.

"ನಾನು ರೂಪಾಯಿ ಎಣಿಸಿಕೊಟ್ಟಿದ್ದೇನೆ. ನಮ್ಮ ಆಳುಗಳು ಬರುವ ಮೊದಲು ತೆಂಗಿನ ಕಾಯಿ ಏನಾದರೂ ಕೆಡವಿಸಿದ್ದು ಕಂಡರೆ ಆಮೇಲೆ ಕುಂಞಾಲು ಸ್ವಭಾವವೇ ಬೇರೆ ಆಗುತ್ತೆ."

ಎಲ್ಲರೂ ಅದನ್ನು ಕೇಳಿಸಿಕೊಂಡರು.

ವಡಕ್ಕೇಪಾಟ್ ಕುಟುಂಬದ ಮನೆಯಿಂದ ಉಪ್ಪು, ಎಣ್ಣೆ ತೆಗೆದುಕೊಂಡು ಹೋಗಿ ಹೊಟ್ಟೆ ಹೊರೆದದ್ದು ಕುಂಞಾಲುವಿನ ತಾಯಿ. ಆ ಕುಂಞಾಲು ಬಂದು ಈಗ ಹೀಗೆ ಮಾತನಾಡುತ್ತಿರುವುದು.

ಮಕರ ಮಾಸ ಪ್ರಾರಂಭವಾಗತೊಡಗಿತು. ದೊಡ್ಡ ಮಾವನ ಒಪ್ಪಿಗೆಯನ್ನು ಕೇಳದೆ ದೋಣಿ ಕಡದ ಹತ್ತಿರದಿಂದ ತೊಡಗಿ ಭತ್ತದ ಕೊಯ್ಲಿಗೆ ಪ್ರಾರಂಭಿಸಿದರು. ತೆಂಕು ಕಳದ ಮುಂದೆ ಗುಡ್ಡೆ ಹಾಕಿದರು. ಮನೆಯಲ್ಲಿರುವವರಿಗೆ ಭತ್ತದ ಅಗತ್ಯವನ್ನು ಪೂರೈಸಿಕೊಳ್ಳಬಹುದಲ್ಲ ಎಂದು ಆಶೆಯಿತ್ತು.

ಈಸಲ ಬೆಳೆ ಇಲ್ಲ. ಹೊಳೆ ಬಂದಾಗ ಮಣ್ಣು ಹೇರಿಕೊಂಡಿತ್ತು. ಸಿಕ್ಕಿದ್ದೆಲ್ಲ ಎಲ್ಲೊ ಕೆಲವು ಕಡೆಗಳಲ್ಲಿ ಮಾತ್ರ. ಮಿಕ್ಕ ಕೃಷಿಕಾರರಿಗೆ ಸಿಕ್ಕಿದ್ದು ಬರಿ ಪುರಳು ಮಾತ್ರ. ಹದಿನೈದು ಮೋನಿ* ಸಿಕ್ಕಬಹುದೆಂದು ಹೊಲೆಯರ ಅಭಿಪ್ರಾಯ. ಕೊಯ್ದು ಕೂಲಿ ಕೊಟ್ಟಾದ ಮೇಲೆ, ಭತ್ತ, ಹುಲ್ಲು ಕೈಯಾಲೆಯಲ್ಲಿ ತುಂಬಿ ಬೀಗ ಹಾಕಿಕೊಂಡು ಬೀಗದ ಕೈಯನ್ನು ತಮ್ಮ ವಶದಲ್ಲಿಟ್ಟುಕೊಂಡರು ಕುಟ್ಟಿ ಮಾವ.

ಇದ್ದಕ್ಕಿದ್ದ ಹಾಗೆ ಬೆಳಗ್ಗೆ ಕೂಲಿಯವರು ಬಂದಾಗ ಎಲ್ಲರೂ ಗಾಬರಿಯಾದರು. ಭತ್ತ ಮಾರುವುದಕ್ಕೆ ಹೊರಟಿದ್ದಾರೆ.

ದೊಡ್ಡಮ್ಮ ಹೊರಗೆ ಬಂದು ಕೂಗಿದರು.

"ಕುಟ್ಟಾ ಈ ಹಸಿಭತ್ತಾನೇ ಮಾರ್ತೀಯಾ?"

"ಹ್ಞೂಂ. ಮಾರ್ತೇನೆ."

"ಇಲ್ಲಿ ಮಕ್ಕಳಿಗೆ ಊಟಕ್ಕೆ ಬೇಡವಾ?"

"ಅದಕ್ಕೆ ಇಲ್ಲಿ ಸ್ವಲ್ಪ ಇದೆ. ಇನ್ನೂ ಕುಯ್ಯೋದಿದೆಯಲ್ಲ"

"ನೀನು ತೋರಿದ ಹಾಗೆ ನಡೆದುಕೊಳ್ಳೋದಕ್ಕೆ ಹೊರಟರೆ ಕಷ್ಟವಾಗುತ್ತೆ ಕುಟ್ಟಾ"

"ಕುಂಞಕ್ಕ, ವ್ಯವಸಾಯ ಮಾಡೋನು ನಾನು. ಭತ್ತದ ಬೆಳೆ ತೆಗೆಯೋದಕ್ಕೆ ನಿಮ್ಮ ಕಾಸೇನಾದ್ರೂ ಖರ್ಚಾಯ್ತಾ? ಇಲ್ಲವಲ್ಲ"

ದೊಡ್ಡಮ್ಮ ಕ್ಷೋಭೆಗೊಳಗಾದರು.

"ನೀನು ತೋರಿದ ಹಾಗೆ ನಡೆದುಕೊಳ್ಳೋದಕ್ಕೆ ನಿನ್ನ ಸ್ವತ್ತಾಗಿರಬೇಕು"

"ಬಡಗು ಭಾಗದ ಗದ್ದೆ ಕುಯ್ದು ಬಡಗು ಮನೆಯಲ್ಲಿ ಭತ್ತ ತುಂಬಿ ಹೂದೋಟಕ್ಕೆ ತೆಗೆದುಕೊಂಡು ಹೋದಾಗ ನೀನ್ಯಾಕೆ ಮಾತಾಡಲಿಲ್ಲ. ನಿನ್ನ ನಾಲಿಗೆಗೇನಾಗಿತ್ತು?"

ದೊಡ್ಡಮ್ಮ ನೆಲವನ್ನು ಗಟ್ಟಿಯಾಗಿ ತುಳಿಯುತ್ತ ಮನೆಯೊಳಗೆಲ್ಲ ಅತ್ತಿತ್ತ ತಿರುಗಾಡುತ್ತಿದ್ದರು. ಅಜ್ಜಿ ಏನನ್ನೋ ಕೇಳಿದಾಗ ಅವರ ಮೇಲೂ ಗುಡುಗುಟ್ಟಿದರು. ತಿಂದು ಮುಗಿಸುವುದಕ್ಕೆ ಮಾತ್ರ ಬಂದು ಸೇರಿಕೊಂಡ ಅಪ್ಪಣ್ಣನಯನ್ನೂ ಮಾಳುವನ್ನೂ ಬಾಯಿಗೆ ಬಂದ ಹಾಗೆ ಬಯ್ದರು. ಜೊತೆಗೆ ಚಿಕ್ಕಪ್ಪನ ಹಕ್ಕಿನ ವಿಚಾರವಾಗಿಯೂ ಮಾತನಾಡಿದರು.

---

* ಒಂದಕ್ಕೆ ಹದಿನೈದರಷ್ಟು.

ಕೂಲಿಯವರು ಚೀಲಗಳನ್ನು ತುಂಬಿಸಿಕೊಂಡು ಅಂಗಳ ದಾಟಿಹೋದರು.

ಮನೆಯೊಳಗೆ ಯಾರು ಏನು ಮಾತಾಡಿದರೂ ಅದೊಂದು ವೈಮನಸ್ಯಕ್ಕೆ ಆಸ್ಪದ ಕೊಡುತ್ತಿತ್ತು. ಯಾರಿಗೂ ಯಾರಲ್ಲೂ ವಿಶ್ವಾಸವಿಲ್ಲ. ಎಲ್ಲ ಒಡಕು ವೈಮನಸ್ಯಗಳಿಗೂ ಅಪ್ಪಣ್ಣನೇ ಕಾರಣನಾಗಿದ್ದ. ಒಂದು ಸಲವೂ ತಾನೊಬ್ಬ ಸಂಭಾಷಣೆಯ ವಿಷಯವಾಗಬಾರದೆಂದು ಅವನು ಅಪೇಕ್ಷಿಸುತ್ತಿದ್ದ. ಅದೊಂದು ಅಪೇಕ್ಷೆ ಮಾತ್ರ. ಈ ಹೊಗೆ ಯಾಡುವ ವಾತಾವರಣದಿಂದ ಹೊರಕ್ಕೆ ಓಡಬೇಕು......

ಸ್ಕೂಲ್ ಬಿಟ್ಟು ಬಂದ ಕೂಡಲೇ ಓದುವುದಕ್ಕೆ ಕುಳಿತುಕೊಳ್ಳುತ್ತಿದ್ದ. ಸಾಯಂಕಾಲವಾದ ಮೇಲೆ ಕತ್ತಲೆಯಲ್ಲಿ ಅಕ್ಷರಗಳು ಇನ್ನು ಕಾಣುವುದಿಲ್ಲ ಎನ್ನುವವರೆಗೆ ಓದುತ್ತಿದ್ದ. ಮತ್ತೆ ಎಲ್ಲಿಯಾದರೂ ಒಂದು ಕಡೆ ಬೆಳಕು ಬೀಳುವ ಒಂದು ಮೂಲೆಯಲ್ಲಿ ಹೋಗಿ ಕುಳಿತುಕೊಳ್ಳುತ್ತಿದ್ದ. ಊಟ ಮಾಡುವ ಹೊತ್ತು ಸಮೀಪಿಸುವವರೆಗೆ. ಊಟವಾದ ಮೇಲೆ ಮತ್ತೆ ದೀಪ ಸಿಕ್ಕುವವರೆಗೂ ಕಾದು ಕುಳಿತಿರುತ್ತಿದ್ದ. ಸಿಕ್ಕಿದ ದೀಪವನ್ನು ದೆಚ್ಚು ಹೊತ್ತು ಉರಿಸುವಂತೆಯೂ ಇಲ್ಲ. ಚಿಮಣಿ ಎಣ್ಣೆಗೆ ತುಂಬ ಬೆಲೆ.

ಒಂದು ಅಗುಳು ಅನ್ನ ಎಲೆಯಿಂದ ಬಿದ್ದರೆ, ಒಂದು ತೊಟ್ಟು ನೀರು ಚೆಲ್ಲಿದರೆ ಎಲ್ಲರೂ ಬಯ್ಯುವುದಕ್ಕಾರಂಭಿಸಿದ್ದರು.

ಬೆಳಗ್ಗೆ ಹೊತ್ತಿಗೆ ಮುಂಚೆ ಏಳುತ್ತಿದ್ದ. ಬಾವಿಯ ಕೈರಾಟೆ ಶಬ್ದ ಮಾಡುವುದನ್ನು ಕೇಳಿದಾಗ ಏಳುತ್ತಿದ್ದ. ಕಾಗೆ ಕೂಗುವುದಕ್ಕೆ ಮೊದಲು ಮೂನಾಕ್ಷಕ್ಕ ಏಳುತ್ತಾಳಲ್ಲವೆ? ಮಂಜು ಬೀಳುತ್ತಿದ್ದ, ಚಳಿಯಾಗುತ್ತಿದ್ದ, ಪ್ರಭಾತ ಸಮಯದಲ್ಲಿ ಪಡಸಾಲೆಯಲ್ಲಿ ಬೀಳುತ್ತಿದ್ದ ಬೆಳಕಿನಲ್ಲಿ ಓದುತ್ತಾ ಕುಳಿತುಕೊಳ್ಳುತ್ತಿದ್ದ.

ಕಾಯುತ್ತಾ ಕಾಯುತ್ತಾ ಇದ್ದ; ಮಾರ್ಚಿ ಹದಿನೈದು ಬಂತು. ಪರೀಕ್ಷೆ ಪ್ರಾರಂಭವಾಗುವುದು ಆ ದಿನ.

ಮನಸ್ಸಿನಲ್ಲೆಲ್ಲ ಅದೇ ಪ್ರಾರ್ಥನೆಯಾಗಿತ್ತು. ಒಂದು ಪ್ರಶ್ನೆಯೂ ಕೈಬಿಟ್ಟು ಹೋಗಲಿಲ್ಲ. ಒಂದೊಂದು ಪೇಪರನ್ನೂ ಬರೆದು ಮುಗಿಸಿದಾಗಲೂ ಭರವಸೆಯುಂಟಾಗುತ್ತಿತ್ತು. ಶುಕ್ರವಾರ ಪರೀಕ್ಷೆಯ ಕೊನೆಯ ದಿನ. ಅದೂ ಕಳೆಯಿತು.

ಹಿಂದಿರುಗಿ ಹೋಗುವಾಗ ಒಂದು ದೊಡ್ಡ ಭಾರವನ್ನಿಳಿಸಿದಷ್ಟು ಸಂತೋಷವುಂಟಾಗಿತ್ತು.

ಆದರೆ ಮನೆಗೆ ಹೋದಾಗ ಅವನ ಉತ್ಸಾಹವೆಲ್ಲ ಕುಗ್ಗಿತು. ಅಲ್ಲಿ ಕುಟ್ಟಿ ಮಾವನೂ ದೊಡ್ಡ ಮಾವನೂ ಪರಸ್ಪರ ಜಗಳವಾಡುತ್ತಿದ್ದರು.

ಯಾರೂ ಕೇಳಲಿಲ್ಲ, ಪರೀಕ್ಷೆ ಕಳೆಯಿತೇ ಎಂದು; ಚೆನ್ನಾಗಿ ಬರೆದೆಯಾ ಎಂದು. ಅವನು ಜಯಿಸಲಿ. ಜಯಿಸದೇ ಇರಲಿ ಅದರಿಂದ ಯಾರಿಗೂ ಏನೂ ಆಗ ಬೇಕಾಗಿಲ್ಲ. ಅಜ್ಜಿ ಮಾತ್ರ ಕೆಲವು ಸಲ ಆಶೀರ್ವದಿಸುತ್ತಾರೆ:

'ತಿವನು ಅನ್ನ ಹುಟ್ಟಿಸಿಕೊಳ್ಳೋ ಹಾಗಾಗಲಿ" ಎಂದು.

ಯಾವಾಗಲೂ ರಜಾಕಾಲವನ್ನು ಕಳೆಯುವುದು ಕಷ್ಟವೆನ್ನಿಸುತ್ತಿತ್ತು. ಆದರೆ ಇನ್ನು ಇರುವುದೇ ರಜಾಕಾಲ. ಪರೀಕ್ಷೆಯ ಫಲಿತಾಂಶ ತಿಳಿಯುವ ವರೆಗಂತೂ ರಜವೇ. ಆ ಮೇಲೆ—? ಬಂದದ್ದು ಬರಲಿ.

# 7

ಅನಿರೀಕ್ಷಿತವಾಗಿ ರಾಮಕೃಷ್ಣನ್ ಮಾಸ್ಟರನ್ನು ಮನೆಯ ಮುಂದೆ ಕಂಡ. ಸುಮ್ಮನೆ ಮೆಟ್ಟಲಿನ ಹತ್ತಿರ ನಿಂತಿದ್ದಾಗ ಮಾಸ್ಟರ್ ಆ ದಾರಿಯಲ್ಲಿ ಬರುತ್ತಿದ್ದರು. ಅಪ್ಪುಣ್ಣಿ ಅವರ ಹತ್ತಿರಕ್ಕೆ ಹೋದ.

"ಏನು ಅಪ್ಪುಣ್ಣಿ?"

"ಏನೂ ಇಲ್ಲ ಸಾರ್."

"ಇಲ್ಲೇ ಹತ್ತಿರದಲ್ಲೇನಾ ಮನೆ?"

"ಹೌದು ಸಾರ್ ಇದೇ"

ಅವನು ವಡಕ್ಕೇಪಾಟ್ ಕಡೆಗೆ ಬೆರಳು ಮಾಡಿ ತೋರಿಸಿದ. "ರಿಸಲ್ಟ್ ಬರೋದು ಇನ್ನೂ ಸ್ವಲ್ಪ ದಿನ ಇದೆ ಅಲ್ಲ? ಈಗೇನು ಮಾಡ್ತಾ ಇದ್ದೀ?"

"ಏನೂ ಇಲ್ಲ ಸಾರ್. ಏನಾದರೂ ಓದೋಣ ಅಂದರೆ ಇಲ್ಲಿ ಏನೂ ಇಲ್ಲ."

"ನಮ್ಮ ಮನೆಗೆ ಬಾ. ಬಂದದ್ದೆಷ್ಟೋ ಪುಸ್ತಕಗಳಿವೆ."

ಅಪ್ಪುಣ್ಣಿಗೆ ಸಂತೋಷವುಂಟಾಯಿತು.

ಸ್ಕೂಲಿನಿಂದ ಸ್ವಲ್ಪ ಈಕಡೆಗೆ ರಾಮಕೃಷ್ಣಯ್ಯರ್ ಮನೆ. ಮಾಸ್ಟರ್ ವಿಷಯವಾಗಿ, ತುಂಬ ಪುಸ್ತಕಗಳನ್ನು ಓದುತ್ತಾರೆ, ಕವಿತೆಗಳನ್ನು ಬರೆಯುತ್ತಾರೆ ಎಂದೆಲ್ಲ ಕೇಳಿದ್ದ. ಸಾಯಂಕಾಲದ ಹೊತ್ತು ಅದೊಂದು ಪದ್ಧತಿಯನ್ನಾಗಿ ಮಾಡಿಕೊಂಡ. ಮಾಸ್ಟರಮನೆ-ವರೆಗೆ ಒಂದು ಸಲ ಹೋಗುತ್ತಾನೆ. ಮೂರು ಮೈಲಿ ಇದೆ ಅವರ ಮನೆ. ಟಪ್ಪಾಲಾಫೀ-ಸಿನ ಹತ್ತಿರ ಮನೆ. ಪತ್ರಿಕೆಯನ್ನು ಆಸಕ್ತಿಯಿಂದ ಓದುತ್ತಿದ್ದ. ಮಾಸ್ಟರ್ ಯಾವು-ದಾದರೂ ಒಂದು ಪುಸ್ತಕವನ್ನು ತೆಗೆದುಕೊಡುತ್ತಿದ್ದರು. ಅವರು ತುಂಬ ಮಾತನಾಡುವ ಪ್ರವೃತ್ತಿಯುಳ್ಳವರಾಗಿದ್ದರು. ಅವರು ಹೇಳುವುದನ್ನು ಕೇಳುತ್ತಾ ಕುಳಿತುಕೊಳ್ಳುವುದೇ ಒಂದು ಸಂತೋಷ ಅಪ್ಪುಣ್ಣಿಗೆ.

ಒಂದು ದಿನ ಸಾಯಂಕಾಲ ಮನೆಗೆ ಹಿಂದಿರುಗಿ ಬಂದಾಗ ದೊಡ್ಡ ಮಾವನ ಎರಡನೆಯ ಮಗ ಗೋಪಿ ಬಂದಿದ್ದ. ಅವನನ್ನು ಗೋಪಿ ಎಂದಲ್ಲ ಅಪ್ಪುಣ್ಣಿ ಕರೆಯು-ವುದು, ಗೋಪಣ್ಣ ಎಂದು. ಆತನನ್ನು ಒಂದು ಸಲವೂ ನೋಡಿರಲಿಲ್ಲ. ಅಜ್ಜಿಯೂ ದೊಡ್ಡಮ್ಮನೂ ಹೇಳುತ್ತಿದ್ದುದನ್ನು ಕೇಳಿದ್ದ.

ತನ್ನ ಪಾಲಿನ ಆಚಾರವನ್ನು ಪಾಲಿಸುವುದಕ್ಕಾಗಿ ಅವನ ಕಡೆಗೊಂದು ಸಲ ನೋಡಿ ನಗು ಮುಖ ಮಾಡಿಕೊಂಡು ಅಲ್ಲಿಂದ ಹೋದ.

"ಒಳ್ಳೇದಾಯ್ತು. ಅವಳಿಗೊಬ್ಬ ಮಗ ಹುಟ್ಟಲಿ. ಹೆಣ್ಣು ಮಕ್ಕಿಗೆ ಮನೇಲಿ ಎಷ್ಟು ಸಂಪತ್ತಿದ್ದರೆ ತಾನೇ ಅದಕ್ಕೆ ಸಮನಾದೀತಾ?"—ಎಂದು ಹೇಳುತ್ತಿದ್ದರು.

"ಎಂಥಾದ್ದು ಒಳ್ಳೆಯದಾದದ್ದು?"

ಗೋಪಣ್ಣ ಹೋದ ಮೇಲೆ ಅಪ್ಪುಣ್ಣಿ ಅಲ್ಲಿಗೆ ಹೋದ. ಅಜ್ಜಿ ಕೇಳಿದರು.

"ಎಲ್ಲರನ್ನೂ ಕರೆದಿದ್ದಾರೆ. ನೀನೂ ಹೋಗ್ತೀಯಾ ಅಪ್ಪುಣ್ಣಿ?"

"ಎಲ್ಲಿಗೆ?"

"'ಹೂದೋಟ'ದ ಮನೆಗೆ. ಇಪ್ಪತ್ತೊಂದನೇ ತಾರೀಖು ಮದುವೆ ಅಲ್ಲವಾ?"

"ಯಾರದು?"

"ಅಮ್ಮಿಣ್ಣಿಯದು."

"ಹ್ಞೂಂ"

ತಕ್ಷಣ ಮತ್ತೇನನ್ನೂ ಹೇಳಲಿಲ್ಲ. ಅಂತು ಅಜ್ಜಿ ಮಾತಾಡಿಕೊಂಡಿದ್ದರು. ವರ, ತೆಕ್ಕನ್‌ಕಂಡದ ಮಾಧವನ್ ನಾಯರ್. ಹಳೆಯ ನಂಟು. ಮಾಧವನ್ ನಾಯರ್ ಕೆಲವು ವರ್ಷಗಳಿಗೆ ಮೊದಲು ಊರು ಬಿಟ್ಟು ಹೋಗಿದ್ದ. ಸಿಲೋನಿನಲ್ಲಿದ್ದ. ಈಗಲೇ ಊರಿಗೆ ಬಂದಿರುವುದು. ಕೈಯಲ್ಲಿ ಒಳ್ಳೆಯ ಹಣವಿದೆ.

"ಅವಳಿಗೊಳ್ಳೇದಾಯ್ತು"

ಒಳ್ಳೆಯದಾಗಲಿ. ಅಪ್ಪುಣ್ಣಿಯೂ ತನ್ನ ಮನಸ್ಸಿನಲ್ಲೇ ಹೇಳಿಕೊಂಡ. ಅಮ್ಮಿಣ್ಣಿ-ಯಕ್ಕ ಸುಖವಾಗಿರಲಿ.

ಆದರೂ ಅವನಿಗೆ ಅವ್ಯಕ್ತವಾದ ಒಂದು ವೇದನೆಯುಂಟಾಯಿತು. ಇನ್ನು ಯಾವಾಗ ಲಾದರೂ ಕಾಣುವುದಿದ್ದರೆ ಬರಿಯ ಅಮ್ಮಿಣ್ಣಿಯಕ್ಕನನ್ನಲ್ಲ. ಮಾಧವನ್ ನಾಯರ ಹೆಂಡತಿಯನ್ನು. ಕಾಣುವುದಿಲ್ಲ; ಕಂಡರೆ ತನ್ನನ್ನು—

ಏಣಿಯ ಕೋಣೆಯ ಚಳಿಯಲ್ಲಿ ಕಳೆದ ಕೆಲವು ರಾತ್ರಿಗಳು ನೆನಪಾದುವು. ತಾನು ಹುಟ್ಟಿದ್ದು ಸ್ವಲ್ಪ ತಡವಾಯಿತು. ಐದಾರು ವರ್ಷಗಳು ಮೊದಲೇ ಹುಟ್ಟಿದಿದ್ದರೆ ಈಗ ದೊಡ್ಡವನಾಗಿರುತ್ತಿದ್ದೆ.

ಆದರೆ—

ಮನಸ್ಸು ತೀರ ಅಸ್ವಸ್ಥವಾಯಿತು.

ಊರಿನಲ್ಲಿ ಯಾರ ಮನೆಯಲ್ಲಾದರೂ ಮದುವೆಯಿದೆ ಅನ್ನುವ ಸುದ್ದಿ ಅಜ್ಜಿಗೆ ತಿಳಿದರೆ ಸಾಕು. ಆಮೇಲೆ ಯಾವಾಗಲೂ ಅಜ್ಜಿಗೆ ಅದೇ ಸುದ್ದಿ.

ಒಂದೊಂದು ದಿನ ಕಳೆದಾಗಲೂ ಅಜ್ಜಿ ಬೆರಳೆಣಿಸಿಕೊಂಡು ಹೇಳುತ್ತಾರೆ "ಈವ-ತ್ತಿಗೆ ಹದಿನೈದು ದಿನ......ಈವತ್ತಿಗೆ ಹತ್ತುದಿನ......ಚಪ್ಪರ ಹಾಕುವ ದಿನ ಬಂತು.."

ತಂಗಕ್ಕನನ್ನು ಕಂಡಾಗ ಅಜ್ಜಿ ಹೇಳುತ್ತಾರೆ: "ಇನ್ನು ನನ್ನ ತಂಗನಿಗೆ ಒಂದು ವರ

ಸಿಕ್ಕಿ ಮದುವೆ ಆಗೋದನ್ನ ಕಣ್ಣಲ್ಲಿ ನೋಡಿ ಬಿಡಬೇಕು. ಆ ಪುಣ್ಯ ಇದೆಯೋ ಇಲ್ಲವೋ !" ಎಂದು.

ತಂಗಕ್ಕ ಅದನ್ನು ಕೇಳಿದಾಗ ತಲೆ ತಗ್ಗಿಸಿಕೊಂಡು ತುಸು ನಾಚಿಕೊಳ್ಳುತ್ತಿದ್ದಳು.

ಅದಕ್ಕೆ ದೊಡ್ಡಮ್ಮ ಹೇಳಿದರು: "ಅಮ್ಮಾ ನೀನಿನ್ನೂ ಹತ್ತು ವರ್ಷ ಬದು-ಕಿರ್ತೀಯೆ. ಏನೂ ಹೆದರಿಕೊ ಬೇಡ." ಎಂದು.

ತಂಗಕ್ಕ ಅಪ್ಪಣ್ಣಿಗಿಂತ ಒಂದು ವರ್ಷ ದೊಡ್ಡವಳು. ಅಲ್ಲಿಗೆ ಹತ್ತೊಂಬತ್ತಾಯಿತು. ದೊಡ್ಡಮ್ಮ ಅಣಿ ಮಾಡಿಟ್ಟು ವರ್ಷಗಳೇ ಆಗಿವೆ.

ಇಪ್ಪತ್ತೊಂದನೇ ತಾರೀಖು ಬೆಳಗ್ಗೆ ಎದ್ದಾಗ ಮೊದಲು ನೆನಸಿಕೊಂಡದ್ದು ಈವತ್ತು ಅಮ್ಮಣಿಯ ಮದುವೆ ಎಂದು.

ಮಾವ, ಮಕ್ಕಳು ಹಿಂದಿನ ದಿನವೇ ಹೋಗಿದ್ದಾರೆ. ಮಾಳುವೂ ಅವರ ಜೊತೆಯಲ್ಲಿ ಹೋಗಿದ್ದಾರೆ.

ಮೀನಾಕ್ಷಕ್ಕನೂ ಹೋಗಬೇಕೂಂತ ಅಂದುಕೊಂಡಿದ್ದರು. ಆದರೆ ಅಜ್ಜಿ ಹೇಳಿದರು: "ಎಲ್ಲರೂ ಹೋದರೆ ನನಗೆ ಯಾರು ಬೇಯಿಸಿ ಹಾಕೋರು" ಎಂದು.

"ನಾನೀ ಮನೇಲಿ ಅಡಿಗೆ ಮನೇಲೇ ಕೊಳೀಬೇಕೂಂತ ನನ್ನ ಹಣೇಲಿ ಬರೆದಿ-ರೋದು" ಎಂದು ಗೊಣಗಿಕೊಂಡು ಮೀನಾಕ್ಷಕ್ಕ ಹೋಗುವುದು ಬೇಡವೆಂದು ತೀರ್ಮಾನಿಸಿದರು.

ಅಪ್ಪಣ್ಣಿ ಮಾಸ್ಟರ ಮನೆಯಿಂದ ತಂದಿದ್ದ ಒಂದು ಪುಸ್ತಕದ ಕಥೆಯಲ್ಲಿ ಯಾವ ಆಕರ್ಷಣೆಯೂ ಇದ್ದಂತೆ ತೋರಲಿಲ್ಲ. ಮನೆಯೊಳಗೆ ಕುಳಿತರೆ ಅಜ್ಜಿಯ ಕಾಟ. ಒಂದೊಂದು ನಿಮಿಷಕ್ಕೂ ಮದುವೆ ಮನೆಯಲ್ಲಿ ಈಗೇನು ನಡೆಯುತ್ತಿರಬಹುದೆಂದು ಅಜ್ಜಿಯ ಚಿಂತೆ.

ರಾತ್ರಿಯಲ್ಲಿ ಊಟ ಮಾಡುವುದಕ್ಕೆ ಕುಳಿತಾಗ ಅಜ್ಜಿ ಬಾಗಿಲಿನ ಹತ್ತಿರ ಬಂದು ಕುಳಿತುಕೊಂಡರು.

"ಗಂಟೆ ಎಷ್ಟು ಅಪ್ಪಣ್ಣೀ?"

"ಎಂಟೋ ಒಂಬತ್ತೋ ಆಗಿರಬೇಕು."

"ಇಷ್ಟು ಹೊತ್ತಿಗೆ ಊಟಕ್ಕೆ ಎಲೆ ಹಾಕಿರಬೇಕು."

ಆಮೇಲೆ ಅವನಿಗೊಂದು ಉಪದೇಶವನ್ನೂ ಮಾಡಿದರು:

"ನೀನೂ ಹೋಗಬೇಕಾಗಿತ್ತು ಕಣೋ. ಒಂದು ಒಳ್ಳೆ ಊಟ ಆದ್ರೂ ಸಿಕ್ತಾ ಇತ್ತು."

ಅದಕ್ಕೆ ಅವನು ಏನೂ ಮಾತಾಡದೆ ಊಟ ಮುಗಿಸಿ ಎದ್ದ. ಮೆಣಸಿನ ಕಾಯಿ ಪಚ್ಚಿಗೆ ಹಾಕಿದ್ದ ಸಾರು. ಹುಳಿಯೂ ಇಲ್ಲ, ಮತ್ತೊಂದಿಲ್ಲ; ಊಟದಲ್ಲಿ ಯಾವ ರುಚಿಯೂ ಇದ್ದಂತೆ ತೋರಲಿಲ್ಲ.

ಮಲಗುವುದಕ್ಕೆ ಹೋದಾಗ ಅಜ್ಜಿ ಮಾತನಾಡುತ್ತಿದ್ದುದು ಕೇಳಿಸಿತು.

"ಜನರೆಲ್ಲ ಊಟಮಾಡಿ ಆಗಿರಬೇಕು."

ಅಜ್ಜಿಯ ಮನಸ್ಸು ಸದಾ ಮದುವೆಯ ಮನೆಯಲ್ಲಿತ್ತು. ಅಷ್ಟಿದ್ದ ಮೇಲೆ ಒಂದು ಸಲ ಅಲ್ಲಿಗೆ ಹೋಗುವುದಕ್ಕಾಗುತ್ತಿರಲಿಲ್ಲವೆ? ಒಂದೊಂದು ನಿಮಿಷವೂ ಅಲ್ಲಿ ಏನು ನಡೆಯುತ್ತಿದೆ ಎಂದು ಊಹಿಸಿಕೊಂಡು ಮಾತನಾಡುತ್ತ ಕುಳಿತುಕೊಂಡಿರುವುದಕ್ಕಿಂತ?

ಮಹಡಿಯ ಮೆಟ್ಟಿಲಿನ ಪಕ್ಕದಲ್ಲಿ ಮಲಗಿಕೊಂಡಾಗ ನಿಧಾನವಾಗಿ ಅವನ ಮನಸ್ಸು ತಾನೊಂದು ಸಲವು ನೋಡಿಲ್ಲದ ಆ ಮನೆಯನ್ನು ಪ್ರವೇಶಿಸಿತು.

......ಚಪ್ಪರದಲ್ಲಿ ತುಂಬ ಜನರಿರಬಹುದು. ಮನೆಯೊಳಗೆಲ್ಲ ಸ್ತ್ರೀಯರೂ ಮಕ್ಕಳೂ ತುಂಬಿರಬಹುದು. ತುಂಬ ಗದ್ದಲವಿರಬಹುದು.

......ಈಗ ಎಲ್ಲರೂ ಮಲಗಿರಬಹುದು. ಅಮ್ಮಿಣಿ ಅಕ್ಕ ಮಲಗಿದ್ದಾಳೆ. ಒಬ್ಬಳೇ ಅಲ್ಲ. ಜೊತೆಯಲ್ಲಿ ಆ ಮನುಷ್ಯನೂ ಇದ್ದಾನೆ—ಇಪ್ಪತ್ತು ವರ್ಷ ಸಿಲೋನಿನಲ್ಲಿದ್ದ ಆ ಮನುಷ್ಯ.......ಇಪ್ಪತ್ತು ವರ್ಷಗಳ ಮೇಲೆ ಅವನೇತಕ್ಕೆ ಹಿಂದಿರುಗಿ ಬಂದ?

ತುಂಬು ಮೀಸೆಯ, ಹಚ್ಚೆ ಹುಯ್ಯಿಸಿಕೊಂಡ ಕೈಗಳ ಮೂಳೆ ಹೊರಟುಕೊಂಡ ಮುಖದ ಮನುಷ್ಯನ ಕಲ್ಪನೆಯ ಚಿತ್ರವನ್ನು ತನ್ನ ಮನಸ್ಸಿನಲ್ಲಿ ಚಿತ್ರಿಸಿಕೊಂಡ. ಅವನು ಯಾರಿರಬಹುದು? ಯಾರಾದರೂ ಆಗಿರಲಿ. ಅಪ್ಪಣ್ಣಿಗೆ ಆ ಮನುಷ್ಯನ ಬಗ್ಗೆ ಸಿಟ್ಟಿದೆ. ಅಪ್ಪಣ್ಣಿಗೆ ಅವನೇನೂ ಮಾಡಿಲ್ಲ, ಆದರೂ ಸಿಟ್ಟಿನಿಂದಲ್ಲದೆ ಆ ಚಿತ್ರವನ್ನು ಕಲ್ಪಿಸಿ-ಕೊಳ್ಳಲು ಸಾಧ್ಯವಿರಲಿಲ್ಲ ಅಪ್ಪಣ್ಣಿಗೆ.

ಮೃದುವಾದ ಹಾಸಿಗೆಯ ಮೇಲೆ ಆ ಕಪ್ಪು ಮನುಷ್ಯನ ಜೊತೆಯಲ್ಲಿ ಅಮ್ಮಿಣಿ ಅಕ್ಕ ಮಲಗಿದ್ದಾಳೆ. ಬೆಳ್ಳನೆಯ ಎಳೆ ಬಾಳೆ ಸುಳಿಯಂತೆ ಸುಂದರಿಯಾದ ಅಮ್ಮಿಣಿ ಅಕ್ಕ.

ನಾನು ಯಾಕೆ ಇವನ್ನೆಲ್ಲ ಆಲೋಚಿಸಬೇಕು? ಅಪ್ಪಣ್ಣಿ ಎದ್ದು ಆ ಕೋಣೆಯ ಕಿಟಿಕಿಗಳನ್ನೆಲ್ಲ ತೆರೆದ. ಹೊರಗೆ ಬೆಳದಿಂಗಳು ಹರಡಿತ್ತು. ಆದರೂ ವಿಪರೀತ ಸೆಕೆ-ಯಿತ್ತು.

ವನದ ಕೊಟ್ಟಿಗೆಯ ಹಿಂದೆ ಬಾಳೆಗಿಡಗಳ ಸಮೂಹದ ಮೇಲೂ ಬೆಳದಿಂಗಳು ಬಿದ್ದಿದೆ. ತುಂಬ ಬೆಳ್ಳಗಿದೆ. ಒಣಗಿದ ಅಯಿನಿ ಮರದ ನೆಳಲು ಐದು ತಲೆಯಿರುವ ಯಾವುದೋ ಪಿಶಾಚಿನಿಯಂತೆ ಅಲ್ಲಾಡದೆ ನಿಂತಿದೆ. ನೆಳಲು ಬೆಳಕು ವ್ಯಾಪಿಸಿ ನಿಂತಿದ್ದ ಹೊರಗಿನ ಪ್ರಕೃತಿ ಭಯಪಡಿಸುವ ರುದ್ರ ಸೌಂದರ್ಯದಿಂದೊಡಗೂಡಿತ್ತು.

ಬೆಳದಿಂಗಳು ಮರೆಯಾಗುವವರೆಗೆ ಹಾಗೇ ಕಣ್ಣು ಬಿಟ್ಟುಕೊಂಡು ಮಲಗಿದ್ದ. ಪ್ರಭಾತ ಸಮಯದ ಗಾಳಿ ಕಿಟಕಿಯ ಮೂಲಕ ನುಗ್ಗಿ ಬಂದಾಗ ಅಪ್ಪಣ್ಣಿ ಕಣ್ಣು ರೆಪ್ಪೆ-ಯನ್ನು ಮುಚ್ಚಿದ್ದು.

* * * * *

ರಿಸಲ್ಟ್ ಬಂದು ಅಪ್ಪುಣ್ಣಿಗೆ ಪಾಸಾಗಿದೆ. ಜೂನ್‌ನಲ್ಲಿ ಬರಬೇಕಾಗಿದ್ದದ್ದು. ಆದ್ದರಿಂದ ಯಾವ ದುಗುಡವೂ ಇಲ್ಲದೆ ಇದ್ದ. ಒಂದು ದಿನ ಮಾಸ್ಟರ ಮನೆಗೆ ಹೋದಾಗ ಪತ್ರಿಕೆಯನ್ನು ತೆಗೆದು ಅವನ ಕೈಗೆ ಕೊಟ್ಟು ಮಾಸ್ಟರ್ ಹೇಳಿದರು.

"ಟೇ ಬರಲಿ ಅಪ್ಪುಣ್ಣೀ"

"ಯಾಕೆ ಸಾರ್"

"ಅಪ್ಪುಣ್ಣಿಗೆ ಪಾಸಾಗಿದ. ನಂಬರ್ ಇದರಲ್ಲಿದೆ."

ನಂಬರ್‌ಗಳ ಒಂದು ಸಮುದ್ರವೇ ಆ ಪತ್ರಿಕೆಯಲ್ಲಿತ್ತು. ಅದರಲ್ಲಿ ತನ್ನ ವಿಜಯವನ್ನು ಸಾರುತ್ತಿದ್ದ ಆ ನಂಬರಿನ ಅಡಿಯಲ್ಲಿ ಮಾಸ್ಟರ್ ಒಂದು ಗೆರೆ ಹಾಕಿದ್ದರು.

ನೋಡಿದಷ್ಟೂ ಸಾಕಾಗಲಿಲ್ಲ. ಉಂಟಾಗಿದ್ದ ಉನ್ಮೇಷವೆಲ್ಲ ಇಳಿದ ಮೇಲೆ ಮುಹಮ್ಮದನ ನಂಬರನ್ನು ಹುಡುಕಿದ. ಇಲ್ಲ. ಮುಹಮ್ಮದ್ ಪಾಸಾಗಿಲ್ಲ. ಮತ್ತೆ ಯಾರ ನಂಬರೂ ಅವನಿಗೆ ಗೊತ್ತಿಲ್ಲ.

ಎರಡು ಕಡೆಗಳಲ್ಲೂ ಕುಂದ ಪುಷ್ಪದ ಗೊಂಚಲನ್ನು ಹಿಡಿದುಕೊಂಡು ನಿಂತಿದ್ದ ಕಾವಲುಗಾರರಂತೆ ತೆಂಗಿನ ತೋಟಗಳು ಬೆಳೆದಿದ್ದ ಕೆಮ್ಮಣ್ಣಿನ ಹಾದಿಯಲ್ಲಿ ಅಪ್ಪುಣ್ಣಿ ನಡೆಯುತ್ತಿದ್ದಾಗ ಪ್ರಪಂಚಕ್ಕೆಲ್ಲಾ ಕೇಳಿಸುವಂತೆ ಗಟ್ಟಿಯಾಗಿ "ಅಪ್ಪುಣ್ಣಿಗೆ ಪಾಸಾಗಿದ" ಎಂದು ಕೂಗಿ ಹೇಳಬೇಕು ಎನ್ನಿಸಿತು. ಅಪ್ಪುಣ್ಣಿ ಕತ್ತೆತ್ತಿ ನಡೆಯುತ್ತಿದ್ದ.

ಮನೆಗೆ ಹೋದ ಮೇಲೆ ಅವರಿಗೆ ಕೇಳುವುದಕ್ಕೆ ಇಷ್ಟವಿಲ್ಲದಿದ್ದರೂ ಒಂದು ಸಲ ಹೇಳಬೇಕು ಎಂದುಕೊಂಡು ಅಂಗಳಕ್ಕೆ ಕಾಲಿರಿಸಿದ. ಮೆಟ್ಟಿಲು ಹತ್ತುವಾಗಲೇ ದೊಡ್ಡ ಮಾವನ ಧ್ವನಿ ಕೇಳಿ ಬಂದಿತು. ತುಂಬ ದಿನಗಳ ಬಳಿಕ ಹಿಂದಿರುಗಿದ್ದಾರೆ.

ಆವೇಶವೆಲ್ಲ ಇಳಿಯಿತು. ಏನೂ ನಡೆದಿಲ್ಲವೆಂಬಂತೆ ಅವನು ಒಳಗೆ ಹೋದ.

ಷರಟು ಬಿಚ್ಚಿ ಟವಲನ್ನು ತೆಗೆದು ಭುಜದ ಮೇಲಿಟ್ಟುಕೊಂಡು ಹೊರಗೆ ಬಂದ. ತಲೆ ಕಡವೆಯ ಹಾಗೆ ಹರಡಿಕೊಂಡಿತ್ತು. ಎಣ್ಣೆ ಹಚ್ಚಿ ಎಷ್ಟೋ ತಿಂಗಳಾಗಿವೆ. ಹೊಳೆಯ ಪಾಲದ ಕೆಳಕ್ಕೆ ಹೋದರೆ ತುಂಬ ನೀರಿದೆ. ಅಲ್ಲಿ ಸ್ನಾನ ಮಾಡುವುದಕ್ಕೆ ಹಿತ.

ಬಲಿ ನೆಲದ ಮಾರ್ಗವಾಗಿ ಹೊಳೆಗೆ ಹೊರಟ. ಬತ್ತಿದ ಹೊಳೆ. ರಾಶಿಯಾಗಿ ಬಿದ್ದಿರುವ ಮರಳ ಹರವಿನ ಪಕ್ಕದಲ್ಲಿ ಶೋಧಿಸಿದ ನೀರಿನ ಕಾಲುವೆಯಂತೆ ಹೊಳೆ ಹರಿಯುತ್ತಿತ್ತು.

ಮೊದಲು ಊರನ್ನೆಲ್ಲ ನೀರಿನಲ್ಲಿ ಮುಳುಗಿಸಿದ್ದು ಇದೇ ಹೊಳೆಯೆ? ಎಂದು ಆಲೋಚಿಸಿದಾಗ ಅದರಲ್ಲೂ ಒಂದು ಸಮಾಧಾನ ದೊರೆಯಿತು. ಅಲ್ಲಲ್ಲಿ ಗುಂಡಿಗಳನ್ನು ತೋಡಿಕೊಂಡು ಜನರು ಸ್ನಾನ ಮಾಡುವುದು.

ಮರಳಿನ ರಾಶಿಯ ಹತ್ತಿರಕ್ಕೆ ಬಂದ. ಪಾಲದ ಹತ್ತಿರಕ್ಕೆ ಹೋಗಬೇಕಾದರೆ ನಾಲ್ಕೈದು ಫರ್ಲಾಂಗ್ ನಡೆಯಬೇಕಾಗಿತ್ತು.

ಸೇತುವೆಗೆ ಸ್ವಲ್ಪ ಮೇಲು ಭಾಗದಲ್ಲಿಯೇ ಭಾರತ ಪೊಳೆಗೆ ಒಂದು ಉಪನದಿ ಬಂದು ಸೇರುವುದು. ಆದ್ದರಿಂದ ಸೇತುವೆಯ ಕೆಳಗೆ ಬೇಸಗೆ ಕಾಲದಲ್ಲಿಯೂ ಒಳ್ಳೆಯ ನೀರನ್ನು ಕಾಣಬಹುದು. ಮೇಲೆ ಒಂದು ರೈಲು ಬಂಡಿಯ ಸೇತುವೆ. ಸ್ವಲ್ಪ ದೂರದಲ್ಲಿ ಕೆಳಗೆ ಇಬ್ಬರು ಕುಂಬಾರ್ತಿಯರು ಸ್ನಾನ ಮಾಡುತ್ತಿದ್ದರು.

ದಡದಲ್ಲಿ ಸಣ್ಣ ಸಣ್ಣ ಕಲ್ಲು ಬಂಡೆಗಳು. ನೀರಿಗಿಳಿಯದೆ ಸ್ವಲ್ಪ ಸಮಯ ಒಂದು ಬಂಡೆಯ ಮೇಲೆ ಕುಳಿತುಕೊಂಡ. ತಲೆಯ ಮೇಲೆ ಒಂದು ಪ್ಯಾಸೆಂಜರ್ ಗಾಡಿ ಶಬ್ದ ಮಾಡುತ್ತ ಹೋಯಿತು. ಸೇತುವೆಯೂ ಭೂಮಿಯೂ ಗಡಗಡನೆ ಶಬ್ದಮಾಡಿದುವು. ಬಂಡಿಯ ಬಾಗಿಲಿನಲ್ಲೂ ಕಿಟಕಿಯಲ್ಲೂ ತುಂಬ ಜನರನ್ನು ಕಾಣಬಹುದಾಗಿತ್ತು. ತನಗೆ ಪರಿಚಯವಿಲ್ಲದ ಜನರು. ನಾನಾ ರೀತಿಯ ಜನರು. ಎಲ್ಲಿಂದಲೋ ಬರುತ್ತಿದ್ದಾರೆ. ಎಲ್ಲಿಗೋ ಹೋಗುತ್ತಿದ್ದಾರೆ.

ಈ ಬಂಡಿ ಮದರಾಸಿಗಿರಬೇಕು. ಇಲ್ಲದಿದ್ದರೆ ಕೊಯಮುತ್ತೂರಿಗಿರಬೇಕು. ಅಪ್ಪುಣ್ಣಿ ಆಲೋಚಿಸಿದ. ಇದುವರೆಗೆ ರೈಲು ಬಂಡಿಯಲ್ಲಿ ಕುಳಿತಿಲ್ಲ. ಊರಿನ ಸುತ್ತು ಮುತ್ತು ಮತ್ತು ಹೈಸ್ಕೂಲಿನ ದಾರಿಯಲ್ಲದೆ ಬೇರೆ ಏನನ್ನೂ ಅವನು ನೋಡಿಲ್ಲ. ದೊಡ್ಡ ನಗರಗಳು ಹೇಗಿರಬಹುದೆಂಬುದನ್ನು ಅವನು ಊಹಿಸಿಕೊಳ್ಳಲೂ ಅಸಮರ್ಥನಾಗಿದ್ದ.

ಕಪ್ಪಾದ ಕಬ್ಬಿಣದ ಸೇತುವೆಯ ದಪ್ಪನೆಯ ಕಾಲುಗಳಲ್ಲಿ ಒಂದನ್ನು ಅವನು ಒಂದು ಕಲ್ಲಿನಿಂದ ಕುಟುಕಿದ. ಲೋಹದ ಮೊಳಗುವ ಶಬ್ದ. ಆ ಕಬ್ಬಿಣದ ಕಂಬಗಳನ್ನು ಕಂಡಾಗ ಅವನಿಗೆ ಭಯವುಂಟಾಯಿತು. ಯಾವುದೋ ಒಂದು ಕಾಲಿನೊಳಗೆ ಒಬ್ಬ ಮನುಷ್ಯ ಸತ್ತು ಮಲಗಿದ್ದಾನೆ.

ಹಾಗೆಂದು ಊರಿನಲ್ಲಿ ಕಥೆ ಹೇಳುತ್ತಾರೆ.

ಸೇತುವೆಯನ್ನು ಕಟ್ಟಿದ ಕಾಲದಲ್ಲಿ ಕಂಬಗಳು ನಿಲ್ಲುತ್ತಿರಲಿಲ್ಲ. ಬಿಳಿಯವನಾದ ಇಂಜಿನಿಯರ್ ತನ್ನೆಲ್ಲಾ ಬುದ್ಧಿವಂತಿಕೆಯನ್ನು ಖರ್ಚುಮಾಡಿ ನೋಡಿದ. ಸಾಧ್ಯವಾಗ-ಲಿಲ್ಲ. ಕೊನೆಗೆ ಕಂಬಗಳು ನಿಲ್ಲಬೇಕಾಗಿದ್ದರೆ ಒಬ್ಬ ಮನುಷ್ಯನನ್ನು ಬಲಿಕೊಡಬೇಕೆಂದು ಕಂಟ್ರಾಕ್ಟರ್ ಜ್ಯೋತಿಷ್ಯ ಕೇಳಿ ತಿಳಿದುಕೊಂಡು ಬಂದು ಹೇಳಿದ. ಮರಳು ತುಂಬಿದ್ದ ಕುಕ್ಕೆಯನ್ನು ಹೊತ್ತಿದ್ದ ಒಬ್ಬ ಕೂಲಿಯವನ ಮೇಲೆ ಮೇಲಿನಿಂದ ಕಲ್ಲುಗಳು ಕುಸಿದವು. ಅವನು ಮತ್ತೆ ಮೇಲೆ ಬರಲಿಲ್ಲ. ಸೇತುವೆ ನಿಂತಿತು. ಆ ಕಥೆ ನಿಜವಾಗಿದ್ದರೆ ಆತ ಉಸಿರು-ಕಟ್ಟಿ ಸತ್ತಿರಬೇಕು. ಅಂತೂ ಕಬ್ಬಿಣದ ಕಂಬದ ಒಳಗೂ ಒಬ್ಬ ಮನುಷ್ಯನ ಆತ್ಮ ಸೆರೆಯಾಗಿದೆ ಎನ್ನಿಸಿತು.

ಮೇಲೆ ನೀಲಿಯ ಬಣ್ಣದ ತಿಳಿಯಾದ ಆಕಾಶ. ಸೂರ್ಯ ಅಸ್ತಮಿಸಿ ಆಗಿದೆ. ಪಶ್ಚಿಮ ದಿಕ್ಕು ಕೆಂಪು ಕಪ್ಪು ಬೆರೆತ ಎಷ್ಟೋ ಮೇಘ ಮಾಲೆಗಳನ್ನು ಹರಡಿದೆ. ಸೂರ್ಯನ ಕೆಂಪು ರಶ್ಮಿಗಳು ನೀರಿನ ಮೇಲಿನಿಂದ ಇನ್ನೂ ಮರೆಯಾಗಿಲ್ಲ.

ಅವನು ಸ್ನಾನಕ್ಕಿಳಿದ.

ಚೆನ್ನಾಗಿ ಕತ್ತಲೆಯಾದ ಮೇಲೆ ನೀರಿನಿಂದ ಮೇಲೆ ಬಂದ. ಕಬ್ಬಿಣದ ಸೇತುವೆ ಸಾಲು ಸಾಲಾದ ಕಾಲುಗಳುಳ್ಳ ಒಂದು ಭಯಂಕರ ಪ್ರಾಣಿಯಂತೆ ನಿಂತಿದೆ. ಕಬ್ಬಿಣದ ಕಂಬಗಳ ಸುತ್ತ ನೀರು ಹರಿಯುವ ಶಬ್ದ ಮಾತ್ರವೇ ಕೇಳಿಸುತ್ತದೆ. ದೂರದಲ್ಲಿ ರೈಲ್ವೇ ಸಿಗ್ನಲ್ ಬೆಳಕು ಕತ್ತಲೆಯ ಕೆಂಗಣ್ಣಿನಂತೆ ಕಾಣಿಸುತ್ತಿತ್ತು. ಪ್ರಶಾಂತವಾದ ಆ ಪರಿಸರಣವನ್ನು ಬಿಟ್ಟು ಬರಲು ಅಪ್ಪುಣ್ಣಿಗೆ ಇಷ್ಟವೇ ಇರಲಿಲ್ಲ.

ಒಂದು ವಾರದಲ್ಲಿ ಸರ್ಟಿಫಿಕೇಟು ಬಂದಿತು. ನೀಲಿಯ ರಟ್ಟಿನ ಒಂದು ಪುಸ್ತಕ. ಪಬ್ಲಿಕ್ ಪರೀಕ್ಷೆಯ ಅಂಕಗಳನ್ನು ಕೆಂಪು ಅಕ್ಷರದಲ್ಲಿ ಬರೆದಿತ್ತು. ಆರು ಸಬ್ಜೆಕ್ಟುಗಳಿಂದ ಒಟ್ಟು ನಾನೂರ ಹತ್ತು ಅಂಕಗಳನ್ನು ಪಡೆದಿದ್ದ.

ಅದನ್ನು ನೋಡಿದಾಗ ರಾಮಕೃಷ್ಣ ಮಾಸ್ಟರು ಆಶ್ಚರ್ಯಪಟ್ಟರು. ಇಂಗ್ಲೀಷಿನಲ್ಲಿ ಎಪ್ಪತ್ತೊಂದು; ಮ್ಯಾಥಮೆಟಿಕ್ಸ್‌ನಲ್ಲಿ ತೊಂಬತ್ತೇಳು.

"ಅಪ್ಪುಣ್ಣಿ ಇನ್ನೂ ಮುಂದಕ್ಕೆ ಓದಿದ್ದರೆ ಚೆನ್ನಾಗಿತ್ತು." ಎಂದರು.

ಅಪ್ಪುಣ್ಣಿ ವೇದನೆಯಿಂದ ನಗುತ್ತ ಒಂದು ಸಲ ಹ್ಞೂಂಗುಟ್ಟಿದ.

ಇಂಗ್ಲಿಷು ಪತ್ರಿಕೆಗಳಲ್ಲಿ ಜಾಹೀರಾತುಗಳನ್ನು ನೋಡಲು ಪ್ರತಿದಿನ ಮಾಸ್ಟರ ಮನೆಗೆ ಹೋಗುತ್ತಿದ್ದ.

ಅರ್ಜಿ ಹಾಕಲು ಕೇಳಿದ್ದ ಒಂದು ಜಾಹೀರಾತನ್ನು ನೋಡಿದ್ದು ಒಂದು ತಿಂಗಳಾದ ಮೇಲೆ. ರೈಲ್ವೇ ಡಿಪಾರ್ಟ್‌ಮೆಂಟಿಗೆ ಕ್ಲಾರ್ಕ್ಸನ್ನು ತೆಗೆದುಕೊಳ್ಳುತ್ತಾರೆಂದು ಮಾಸ್ಟರು ನಿರ್ದೇಶನ ನೀಡಿದರು.

"ಅಪ್ಲೈ ಮಾಡು ಅಪ್ಪುಣ್ಣಿ. ಒಳ್ಳೆ ಮಾರ್ಕ್ಸ್ ಬಂದಿದೆ. ಕೆಲಸ ಸಿಕ್ಕುತ್ತದೆ" ಎಂದರು.

ಒಂದು ರೂಪಾಯಿ ಬೇಕು ಫೋರ್ಮುಕೊಳ್ಳಲು. ಒಂದು ರೂಪಾಯಿ ಎಲ್ಲಿಂದ ಸಿಕ್ಕೀತು?

ಹದಿನೈದನೇ ತಾರೀಕಿನ ವರೆಗೆ ಸಮಯವಿದೆ. ಇನ್ನು ಇಪ್ಪತ್ತು ದಿವಸಗಳು. ಆದರೆ ದಿನಗಳಿವೆಯೆನ್ನುವುದು ಒಂದು ಸಮಾಧಾನವಾಗಿ ಅಪ್ಪುಣ್ಣಿಗೆ ತೋರಲಿಲ್ಲ. ಎರಡು ಮೂರು ದಿವಸಗಳಿಂದಲೂ ಒಂದೂವರೆ ರೂಪಾಯಿಗೋಸ್ಕರ ಆಲೋಚಿಸುವುದಕ್ಕೆ ಪ್ರಾರಂಭಿಸಿದ್ದಾನೆ. ದೇವರೇ ಒಂದೂವರೆ ರೂಪಾಯಿ ಎಷ್ಟೊಂದು ದೊಡ್ಡ ಸಂಖ್ಯೆ!

ಸೇತುವೆಯ ಕೆಳಗೆ ಸ್ನಾನಮಾಡಿ ಬಿಳಿ ಮಳಲಿನಲ್ಲಿ ದೃಷ್ಟಿಯನ್ನಿಟ್ಟು ನಡೆದು ಬರುತ್ತಿದ್ದಾಗ ಒಬ್ಬ ಹುಡುಗ ಹಿಂದಿನಿಂದ ಓಡಿ ಬಂದು ಹೇಳಿದ:

"ಅವರು ನಿಮ್ಮನ್ನು ಕರೆಯುತ್ತಾರೆ."

"ಯಾರು?"

"ಸೈದಾಲಿಕುಟ್ಟಿ ಆ ಬಲಿನೆಲವ ಕಲ್ಲುಕಟ್ಟೆ ಪತ್ತಿರ ನಿಂತುಕೊಂಡಿದ್ದಾರೆ."

ಅಪ್ಪುಣ್ಣಿ ಹಣೆಯ ಮೇಲೆ ಹರಡಿಕೊಂಡಿದ್ದ ತಲೆಕೂದಲನ್ನು ಹಿಂದಕ್ಕೆ ಸರಿಪಿ-ಕೊಂಡು ಕಲ್ಲುಕಟ್ಟೆಯ ಪತ್ತಿರಕ್ಕೆ ಬಂದ. ಅಲ್ಲಿ ಸೈದಾಲಿ ಕುಟ್ಟಿ ಬೀಡಿ ಸೇದುತ್ತಾ ಕೆಂಪನೆಯ ಕಣ್ಣುಗಳಿಂದಲೂ ಒಂದು ಸಣ್ಣ ನಗುವಿನಿಂದಲೂ ಕೂಡಿ ನಿಂತುಕೊಂಡಿದ್ದ. ಪತ್ತಿರ ಹೋದಾಗ ಸೈದಾಲಿಕುಟ್ಟಿ ಹೇಳಿದ:

"ಏನು ನಾಯರುಕುಟ್ಟಿ ಬೆಳೆದದ್ದು ಬೆಳೆದದ್ದೆ".

ಅಪ್ಪುಣ್ಣಿ ನಕ್ಕ.

"ತರವಾಡು ಮನೆ ಊಟ ಚೆನ್ನಾಗಿ ಒಗ್ಗುತ್ತದೆಂದು ಕಾಣಿಸುತ್ತೆ."

ಅದನ್ನು ಕೇಳಿಸಿಕೊಳ್ಳಲಿಲ್ಲವೋ ಎಂಬಂತೆ ಅಪ್ಪುಣ್ಣಿ ಕೇಳಿದ.

"ಸೈದಾಲಿ ಕುಟ್ಟಿ ಯಾವಾಗ ಬಂದದ್ದು?"

"ನಿನ್ನೆ ಸಂಜೆ."

"ಈಗ ಯಾವ ಊರಿನಲ್ಲಿರೋದು?"

"ವೈನಾಡಿನಲ್ಲಿ. ಮತ್ತೆಲ್ಲಿಗೆ ಹೋಗ್ಲಿ?

ಇನ್ನೇನು ಸಮಾಚಾರ ನಾಯರ್‌ಕುಟ್ಟಿ?"

"ಹೀಗೆ ಕಳೀತಾ ಇದೆ."

"ಈಗ ಯಾವ ಕ್ಲಾಸು?"

"ಓದಿಯಾಯಿತು; ಪಾಸಾಯಿತು."

"ಪತ್ತನೇ ಕ್ಲಾಸು ಪಾಸಾಯ್ತಾ?"

"ಆಯ್ತು."

"ಮುಂದೆ ಏನು ಮಾಡಬೇಕೂಂತ"

"ಇನ್ನು......ಇನ್ನೊಂದು ಕೆಲಸ ಹುಡುಕ್ಬೇಕು. ಇನ್ನು ಇಲ್ಲೇ ಬಿದ್ದು ಒದ್ದಾ-ಡೋದು ಕಷ್ಟ......"

"ಎಲ್ಲಾದರೂ ನೋಡಿದ್ದೀರಾ?"

"ನೋಡಬೇಕು......ಅದಕ್ಕಾಗಿ—"

ಒಂದೂವರೆ ರೂಪಾಯಿಯ ಪ್ರಶ್ನೆ ಮುಂದೆ ಬಂದಿತು. ಸೈದಾಲಿ ಕುಟ್ಟಿಯ ಪತ್ತಿರ ಹೇಳಿದರೂ? ಅಭಿಮಾನ ಅಡ್ಡ ಬಂದಿತು.

"ನೀವು ಏನೂ ಬೇಜಾರು ಮಾಡಿಕೋಬೇಡಿ. ಸ್ವಲ್ಪ ಕಾಲ ಕಾದರೆ ಕೆಲಸ ಸಿಕ್ಕುತ್ತೆ..."

"ಉದ್ಯೋಗ ಸಿಕ್ಕಬೇಕಾಗಿದ್ದರೆ ಅದಕ್ಕಾಗಿ ಕಷ್ಟಬೇಕು. ಅದಕ್ಕಾಗಿ ಕಷ್ಟ ಪಡುವ ಜನರೂ ಬೇಕು. ನನಗೆ ಅದು ಎರಡೂ ಇಲ್ಲ......ನಾನು ಯಾರಿಗೂ ಬೇಡದವನು."

ಸೈದಾಲಿಕುಟ್ಟಿ ಬೀಡಿಯನ್ನು ಜೋರಾಗಿ ಎಳೆಯುತ್ತಾ ಮೌನವಾಗಿ ಕೇಳಿಸಿಕೊಳ್ಳು-

ತ್ತಿದ್ದ. ಆತ ಏನನ್ನೋ ಆಲೋಚಿಸುತ್ತಿದ್ದ. ವಿಷಯವನ್ನು ಬದಲಾಯಿಸಲು ಆತ ಕೇಳಿದ. "ಕುಟುಂಬದ ಮನೆಯ ಕೇಸು ವಗೈರೆ ಎಲ್ಲಿಗೆ ಬಂತು?"

ಅಪ್ಪುಣ್ಣಿ ಅಸಮಾಧಾನದಿಂದ ಹೇಳಿದ.

"ಅದನ್ನೆಲ್ಲಾ ಹೇಳಿ ಏನು ಪ್ರಯೋಜನ? ಬೇರೆ ಎಲ್ಲೂ ಜಾಗ ಇಲ್ಲದಿರುವುದರಿಂದ ಇಲ್ಲಿದ್ದೇನಷ್ಟೆ"

"ದೇವರಿಗೆ ಒಪ್ಪಿಗೆಯಾಗದ ರೀತಿಯಲ್ಲಿ ಮಾತಾಡಬಾರದು ನಾಯರ್‌ಕುಟ್ಟಿ. ಎಲ್ಲರಿಗೂ ದೇವರು ಒಂದು ದಾರಿ ತೋರಿಸ್ತಾನೆ."

ಅಪ್ಪುಣ್ಣಿ ಅರ್ಥರಹಿತವಾಗಿ ಒಂದು ಸಲ 'ಹ್ಞೂಂ' ಎಂದ.

"ಇನ್ನು ಎರಡು ದಿನ ಕಳೆದು ನಾನು ಹೋಗ್ತೀನಿ. ಸಮಯ ಸಿಕ್ಕಿದರೆ ಮತ್ತೆ ಕಾಣ್ತೀನಿ."

ಅಪ್ಪುಣ್ಣಿ ಒದ್ದೆಯಾದ ಟವಲ್‌ನಿಂದ ಕತ್ತನ್ನೂ ಮುಖವನ್ನೂ ಒರೆಸಿಕೊಂಡು ಹೊರಡಲು ಸಿದ್ಧನಾದ. ಎರಡು ಹೆಜ್ಜೆ ನಿಧಾನವಾಗಿ ಇರಿಸಿದಾಗ ಸೈದಾಲಿಕುಟ್ಟಿ ಮತ್ತೂ ಹೇಳಿದ.

"ನೋಡಿ, ಬೇಯಿಸೋ ಅಷ್ಟು ಹೊತ್ತು ಆರೋದಕ್ಕೆ ಬೇಡ. ದೇವರು ದಾರಿ ತೋರಿಸ್ತಾನೆ."

ರಸ್ತೆಯಿಂದ ಗದ್ದೆಯ ಅಂಚಿಗಿಳಿದಾಗ ಅಪ್ಪುಣ್ಣಿ ಪರಿಹಾಸಪೂರ್ವಕವಾಗಿ ಆಲೋಚಿಸಿದ. ದೇವರು ದಾರಿ ತೋರಿಸಿಯೇ ತೋರಿಸುತ್ತಾನೆ. ಹಾಗಿದ್ದರೆ ಒಂದೂವರೆ ರೂಪಾಯಿಗೋಸ್ಕರ ಮನಸ್ಸು ಹುಣ್ಣಾಗಬೇಕಾಗಿರಲಿಲ್ಲ.

* * * * *

ದೇವರು ತೋರಿಸುವ ದಾರಿಗಳು ವಿಚಿತ್ರವಾಗಿರುತ್ತವೆ ಎಂದು ಅಪ್ಪುಣ್ಣಿಗೆ ತೋರಿತು.

ಯಾರೂ ಅವನಿಗೆ ಕಾಗದ ಬರೆಯುವವರಿಲ್ಲ. ಪೆನ್ಸಿಲಿನಲ್ಲಿ ಮಲಯಾಳದಲ್ಲಿ ಅಡ್ರೆಸ್ ಬರೆದಿದ್ದ ಆ ಕಾಗದವನ್ನು ಸಂಶಯಪಟ್ಟುಕೊಂಡು ಒಡೆದ. ಮೇಲೆ ಅಸ್ಪಷ್ಟವಾದ ಅಕ್ಷರಗಳಲ್ಲಿ 'ಬಿ' ಎಂದು ಬರೆದಿತ್ತು.

ಕೆಳಗೆ

"ಗೌರವಕ್ಕೆ ಪಾತ್ರರಾದ ಅಪ್ಪುಣ್ಣಿ ನಾಯರ್......"

[ಅಪ್ಪುಣ್ಣಿ ನಾಯರ್?

ಅಪ್ಪುಣ್ಣಿ, ಅಪ್ಪುಣ್ಣಿ ನಾಯರಾಗಿದ್ದಾನೆ.]

"ಅತ್ಯಂತ ಪ್ರೀತಿಯ ಅಪ್ಪುಣ್ಣಿ ನಾಯರ್‌ಗೆ ಸೈದಾಲಿ ಕುಟ್ಟಿಯು ಬರೆಯುವುದೇನೆಂದರೆ:

ನಿಮ್ಮ ವಿಷಯವಾಗಿ ಎಸ್ಟೇಟಿನ ಮ್ಯಾನೇಜರ್ ಹತ್ತಿರ ಮಾತಾಡಿದ್ದೇನೆ. ಅನುಕೂಲಮಾಡಿಕೊಡೋಣ ಎಂದು ಹೇಳಿದ್ದಾರೆ. ಸ್ವಲ್ಪವೂ ತಡಮಾಡದೆ ನೀವಿಲ್ಲಿಗೆ ಬನ್ನಿ. ಸರ್ಟಿಫಿಕೇಟ್ ಮುಂತಾದುವುಗಳನ್ನು ಸಿದ್ಧಪಡಿಸಿಕೊಂಡು ಬರಬೇಕು. ಕಲ್ಲಿಕೋಟೆಯಿಂದ ಮಾನಂತವಾಡಿ ಬಸ್ಸಿನಲ್ಲಿ ಬಂದು—ಇಲ್ಲಿ ಇಳಿಯಬೇಕು. ಅಂಗಡಿಯಲ್ಲಿ ಕೇಳಿದರೆ ನನ್ನ ಮನೆಯನ್ನು ತೋರಿಸಿಕೊಡುತ್ತಾರೆ. ಬರುವ ದಿವಸವನ್ನು ತಿಳಿಸಿ ಒಂದು ಕಾರ್ಡು ಬರೆದು ಹಾಕಿದರೆ ಬಸ್ಸಿನ ಪತ್ತಿರಕ್ಕೆ ಬಂದು ನಾನೋ ಹುಡುಗನೋ ಕಾದುನಿಂತಿರುತ್ತೇವೆ. ದೇವರು ಸಹಾಯ ಮಾಡುತ್ತಾನೆ.

ಇತಿ ವಂದನೆಗಳು,

ಸೈದಾಲಿಕುಟ್ಟಿ."

ಮೊದಲು ಸೈದಾಲಿಕುಟ್ಟಿಯೇ ದೇವರು ಅಂದುಕೊಂಡ.

ಕತ್ತಲೆ ಕವಿದ ಏಣಿಯ ಕೋಣೆಯಿಂದ ಬಿಡುಗಡೆಯಾಗುತ್ತದೆ ಎನ್ನುವ ಸಂತೋಷ ಮೊದಲು ಉಂಟಾದದ್ದು.

ಸೈದಾಲಿಕುಟ್ಟಿ ಬರೆದಿರುವುದು ನಿಜವಾಗಬಹುದೆ?

ಯಾರೂ ಸಹಾಯ ಮಾಡುವುದಿಲ್ಲವೆಂದು ಭಾವಿಸಿದ್ದಾಗ ಒಮ್ಮೆಯೂ ಸಹಾಯವನ್ನು ಅಪೇಕ್ಷಿಸದ ಮನುಷ್ಯರು ಕೈನೀಡುವರು.

ಉಳಿದವೆಲ್ಲವನ್ನೂ ತಾತ್ಕಾಲಿಕವಾಗಿ ಮರೆತ. ಬೇಗ ವೈನಾಡಿಗೆ ಹೋಗಬೇಕು. ಪಳ್ಳಿಪುರದಿಂದ ಕಲ್ಲಿಕೋಟೆಗೆ ರೈಲು ಚಾರ್ಜಿಗೆ. ಅಲ್ಲಿಂದ ಮುಂದಕ್ಕೆ ಬಸ್ ಚಾರ್ಜಿಗೆ; ದಾರಿಯಲ್ಲಿ ಊಟ ತಿಂಡಿ ಖರ್ಚಿಗೆ ಹಣ ಬೇಕು. ಯಾರ ಹತ್ತಿರ ಕೇಳುವುದು?

ನೇರವಾಗಿ ಮಾಸ್ಟರ ಮನೆಗೆ ಬಂದ. ಮಾಸ್ಟರು ತೋಟದಲ್ಲಿ ಕೆಲಸ ಮಾಡಿಸುತ್ತ ನಿಂತಿದ್ದರು. ಯಾವುದರಲ್ಲೂ ನಂಬಿಕೆಯನ್ನಿಡಬಹುದಾಗಿದ್ದ ಸಮಯವಾಗಿತ್ತು ಅದು. ಸಂಶಯಪಟ್ಟುಕೊಳ್ಳದೆ ಮಾಸ್ಟರ ಹತ್ತಿರ ವಿಷಯವನ್ನು ಹೇಳಿದ.

"ಅವರಲ್ಲೇನು ತೊಂದರೆ?"

ಮಾಸ್ಟರಿಗೂ ಸಂತೋಷವೇ.

"ಕುಳಿತುಕೊ ಅಪ್ಪುಣ್ಣಿ. ನಾನೀಗ ಬಂದೆ." ಎಂದು ಹೇಳಿ ಹೊರಗೆ ಹೋದರು. ಸ್ವಲ್ಪ ಹೊತ್ತು ಬಿಟ್ಟು ಬಂದರು. ಬಂದಾಗ ಮಾಸ್ಟರ್ ನಗುತ್ತಾ ಹೇಳಿದರು.

"ಅಪ್ಪುಣ್ಣಿ ತುಂಬ ಅದೃಷ್ಟವಂತ. ಇಗೋ."

ಹತ್ತು ರೂಪಾಯಿಯ ನೋಟು!

ಕೃತಜ್ಞತೆಯಿಂದ ಅವನ ಕಣ್ಣುಗಳು ತೇವಗೊಂಡುವು. ಗಂಟಲಿನಿಂದ ಮಾತುಗಳೇ ಹೊರಡದಾದುವು. ತುಂಬ ಕಷ್ಟಪಡಬೇಕಾಯಿತು. ಬಾಯಿ ಬಿಡಲು.

"ಬರ್ತೇನೆ ಸಾರ್"

"ಹೋಗಿ ಬಾ. ವಿಷ್ ಯು ಗುಡ್ ಲಕ್......"

ತಾನು ಕ್ರಮೇಣ ಹೊರಗಿನ ವಾತಾವರಣದಲ್ಲಿ ಬೆರೆಯುತ್ತಿದ್ದೇನೆ ಎನ್ನಿಸಿತು ಅಪ್ಪುಣ್ಣಿಗೆ.

ಒಂದು ಸುಳಿಗಾಳಿಯಂತೆ ವೇಗವಾಗಿ ಅವನು ಹೊರಟ.

ವಿಷ್ ಯು ಗುಡ್ ಲಕ್......

ನಿನಗೆ ಒಳ್ಳೆಯದನ್ನು ಹಾರೈಸುತ್ತೇನೆ......ನಾಳೆ ಶುಕ್ರವಾರ. ಮುಹಮ್ಮದನನ್ನು ಕಂಡು ಪ್ರಯಾಣವನ್ನು ತಿಳಿಸಬೇಕು. ನಾಡಿದ್ದು ಬೆಳಗ್ಗೆ ಹೊರಡುವುದು.

ಇನ್ನು ಈ ಊರಿಗೆ ಹಿಂದಿರುಗಿಬರದಂತಾಗಲಿ.

ಇನ್ನೆಂದೂ ಆ ಏಣಿಯ ಕೋಣೆಯಲ್ಲಿ ಬಿದ್ದು ಕೊಳೆಯಬೇಕಾದ ಸಂದರ್ಭ ಬರದಿರಲಿ.

ಮುಹಮ್ಮದನ ಹತ್ತಿರ ಹೇಳಬೇಕು. ಮುಹಮ್ಮದನ ಹತ್ತಿರ ಮಾತ್ರವೇ ಹೇಳಬೇಕಾಗಿರುವುದು? ಓ! ಅದೆಲ್ಲ ಕೈಬಿಟ್ಟ ವಿಷಯ. ನೆನಪುಗಳು ಮಾತ್ರ.

ಆ ರಾತ್ರಿ ಯಾರ ಹತ್ತಿರವೂ ಹೇಳಲಿಲ್ಲ. ಯಾರಿಗೂ ಈಗ ತಿಳಿಯುವುದು ಬೇಡ.

ಬೆಳಗ್ಗೆ ಮುಹಮ್ಮದನ ಮನೆಗೆ ಹೋದ.

ಆತನ ತಾಯಿ ಮಾತ್ರ ಇದ್ದಳು. ಮುಹಮ್ಮದನೂ ಅವನ ತಮ್ಮನೂ ಪೊನ್ನಾನಿ ಹತ್ತಿರಕ್ಕೆ ಹೆಣ್ಣು ಮಕ್ಕಳನ್ನು ಮದುವೆ ಮಾಡಿ ಕೊಟ್ಟಿರುವ ಸ್ಥಳಕ್ಕೆ ಹೋಗಿದ್ದಾರೆ.

"ಅಮ್ಮಾ, ಮುಹಮ್ಮದ್ ಬಂದಾಗ ನಾನು ಬಂದು ಕೇಳಿದೆ ಅಂತ ಹೇಳಿಬಿಡಿ."

"ಯಾರು ಬಂದದ್ದು ಅಂತ ಹೇಳಲಿ"

"ಮುಹಮ್ಮದನ ಕ್ಲಾಸಿನಲ್ಲಿ ಓದುವ ಒಬ್ಬ ಹುಡುಗ ಬಂದಿದ್ದ ಅಂತ ಹೇಳಿದರೆ ಸಾಕು. ಅಪ್ಪುಣ್ಣಿ."

"ಪಾರುಕುಟ್ಟಿ ಅಮ್ಮನ ಮಗ ಅಪ್ಪುಣ್ಣಿಯಾ?"

ಅಪ್ಪುಣ್ಣಿ ಮೌನವಾಗಿ ಸಮ್ಮತಿಸಿದ.

"ಬಂದು ಕಾಣೋ ಹಾಗೆ ಹೇಳ್ತೀನಿ."

"ನಾನು ನಾಳೆ ಹೋಗ್ತೀನಿ."

"ಎಲ್ಲಿಗೆ ಮಗಾ?"

"ಬೇರೆ ಊರಿಗೆ ಹೋಗ್ತೀನಿ. ಒಂದು ಕೆಲಸ ಹುಡುಕಿಕೊಂಡು. ಮುಹಮ್ಮದನ ಹತ್ರ ಹೇಳಿಬಿಡಿ."

"ಹೇಳ್ತೀನಿ."

ಅವನು ಅಲ್ಲಿಂದ ಹೊರಟು ಮುಂದೆ ಹೋದಾಗ ಆಕೆ ಹೇಳಿದಳು:

"ಆಯಮ್ಮನ ಮಗನಿಗೆ ದೇವರು ಒಳ್ಳೇ ಆಯುಸ್ಸು ಕೊಡಲಿ."

ಹೊರಡುವುದಕ್ಕೆ ಸಿದ್ಧಪಡಿಸಿಕೊಳ್ಳಲು ಹೆಚ್ಚಿಗೆ ಏನೂ ಇರಲಿಲ್ಲ. ಪ್ರಯಾಣ ಮಾಡುವಾಗ ಹಾಕಿಕೊಳ್ಳಬೇಕಾಗಿದ್ದ ಷರಟು, ಲುಂಗಿಯನ್ನು ಬದಲಾಯಿಸಿದ. ಮತ್ತೂ ಎರಡು ಷರಟು ಲುಂಗಿಗಳನ್ನು ಚೀಲದಲ್ಲಿ ಮಡಿಸಿಟ್ಟುಕೊಂಡ. ಕೊಳೆಯಾದ ಟಪಲನ್ನೂ ಸರ್ಟಿಫಿಕೇಟ್ ಪುಸ್ತಕವನ್ನೂ ಹೆಡ್‌ಮಾಸ್ಟರ್ ಬರೆದು ಕೊಟ್ಟಿದ್ದ ಕಾಂಡಕ್ಟ್ ಸರ್ಟಿಫಿಕೇಟನ್ನೂ ಇಟ್ಟುಕೊಂಡ. ಬೆಳಗ್ಗೆ ಒಂಬತ್ತೂವರೆಯಿರಬೇಕು, ಪಳ್ಳಿಪುರದಿಂದ ರೈಲು ಹೊರಡುವುದು.

ಚೀಲವನ್ನು ತೆಗೆದುಕೊಂಡು ಅಜ್ಜಿಯ ಕೋಣೆಗೆ ಹೋದ.

"ಏನು ಅಪ್ಪುಣ್ಣೀ"

"ನಾನು ಹೋಗ್ತೇನೆ ಅಜ್ಜಿ."

"ಎಲ್ಲಿಗೆ?"

"ನನಗೊಂದು ಕೆಲಸ ಸಿಕ್ಕಬಹುದು ಅಂದುಕೊಂಡಿದ್ದೇನೆ."

"ಹೌದಾ ! ನನ್ನ ಕಂದಾ ! ನಿನಗೆ ದೇವರು ಒಳ್ಳೇದು ಮಾಡಲಿ—"

ಅಜ್ಜಿ ಎದ್ದು ನಿಂತಳು.

"ಎಲ್ಲಿ?"

"ಪೈನಾಡು—ಅಂತ ಹೆಸರು."

"ನಿನ್ನ ಕಷ್ಟದ ಕಾಲ ಕಳೀತು."

ಮತ್ತೂ ಒಂದು ಸಲ ಏಣಿ ಕೊಠಡಿಗೆ ಹೋಗಿ ನಿಂತುಕೊಂಡ. ಏನಾದರೂ ಮರೆತಿರಬಹುದೆ? ಮರೆಯುವುದಕ್ಕೆ ಏನೂ ಇಲ್ಲ. ಆದರೂ ಒಂದು ಸಂಶಯ. ಹೊರಗೆ ಬಂದಾಗ ದೊಡ್ಡಮ್ಮ ತೆಂಕು ಮನೆಯಿಂದ ಹೊರಗೆ ಬಂದು ಕರೆದರು.

"ಅಪ್ಪುಣ್ಣೀ ನಿಂತುಕೋ"

"ಏನೂ ಮಾತನಾಡದೇ ಹೋಗ್ತೀಯಾ?"

ದೊಡ್ಡಮ್ಮನ ಮಾತುಗಳಲ್ಲಿ ವಾತ್ಸಲ್ಯವಿತ್ತು.

"ಗಂಜಿ ಬೇಯಿಸಿ ಆಗಿರಬಹುದು. ಕುಡಿದುಬಿಟ್ಟು ಹೋಗು."

ಅವನು ತಗ್ಗಿದ ಧ್ವನಿಯಲ್ಲಿ ಹೇಳಿದ—

"ಬೇಡ"

"ದಾರಿ ಖರ್ಚಿಗೇನಾದರೂ ಬೇಕಾಗಿದ್ದರೆ—"

ಆ ಔದಾರ್ಯವನ್ನು ಕಂಡಾಗ ಅವನಿಗೆ ಆಶ್ಚರ್ಯವೆನಿಸಲಿಲ್ಲ. ಇನ್ನು ಪ್ರಾರಂಭ... ಹಿಂದಿರುಗಿ ನೋಡದೆ ಹೊರಗೆ ಹೋಗುತ್ತಿದ್ದಾಗ ಅವನು ಹೇಳಿದ.

"ಬೇಡ"

ಹೊರಗೆ ಮೆಟ್ಟಲಿಳಿಯುತ್ತಿದ್ದಾಗ ಮೊಗಸಾಲೆಯ ಕಡೆಗೆ ಒಂದು ಸಲ ತಿರುಗಿ

ನೋಡಿದ. ಹೊರಗಿನ ಬಾಗಿಲಿನಲ್ಲಿ ಒಂದು ಮುಖ ಕಾಣಿಸಿತು. ಮಾಳು ! ಅವಳ ಹತ್ತಿರ ಹೇಳಬೇಕಾಗಿತ್ತು.

ಮುಚ್ಚಿದ್ದ ಪಡಸಾಲೆಯ ಬಾಗಿಲನ್ನು ತೆರೆದು ಹೊರಗೆ ಬರುತ್ತಿದ್ದಾಗ ಎದುರಿಗೆ ಕುಟ್ಟ ಮಾವ ಬರುತ್ತಿದ್ದರು. ಅವರ ಮುಖದ ಕಡೆಗೆ ನೋಡದೆ ಒಂದು ಕಡೆಗೆ ದಾರಿ ಬಿಟ್ಟುಕೊಂಡು ನಿಂತ.

ಗದ್ದೆಯ ಬೆನ್ನೆಲುಬಿನಂತಿದ್ದ ದಿಂಡಿನ ಮೇಲೆ ಅಪ್ಪುಣ್ಣಿ ಬೇಗ ಬೇಗ ಹೆಜ್ಜೆ ಹಾಕಿದ.

# 8

ಬಸ್ಸು ಘಟ್ಟ ಹತ್ತುತ್ತಿತ್ತು. ಒಂದು ಕಡೆ ಕಡಿದಾದ ಬೆಟ್ಟದ ಸಾಲುಗಳು. ಮತ್ತೊಂದು ಕಡೆ ಕಾಡು ಮುಚ್ಚಿಕೊಂಡಿದ್ದ ತೊರೆಗಳು. ತುಂಬ ಡೊಂಕಾಗಿದ್ದ ರಸ್ತೆಯ ತಿರುವುಗಳನ್ನು ಒಂದೊಂದನ್ನಾಗಿ ನಿಧಾನವಾಗಿ ಹತ್ತುತ್ತ ಬಸ್ಸು ಹೆಚ್ಚು ಶಬ್ದಮಾಡು-ತ್ತಿತ್ತು. ಅಪ್ಪಣ್ಣ ಹೊರಗೆ ನೋಡಿದ. ಬೆಳಗಿನ ಬಿಸಿಲಿನಿಂದ ಹೊಳೆಯುವ ಮರದ ಎಲೆಗಳು, ಬಹುದೂರದ ವರೆಗೂ ಹಬ್ಬಿದ ವನಾಂತರಗಳು, ಕಾಡು ಬಾಳೆಗಳು ಸಮೃದ್ಧಿ-ಯಾಗಿ ಬೆಳೆದಿದ್ದ ದೊಡ್ಡ ದೊಡ್ಡ ಬಂಡೆಗಳು—ಕಾಣಿಸುತ್ತಿದ್ದುವು.

ಪಳ್ಳಿಪುರದಲ್ಲಿ ಬಂಡಿ ಹತ್ತಿದಾಗಿನಿಂದ ತಾನು ಸಂಪೂರ್ಣವಾಗಿ ಬದಲಾಯಿಸಿ ಹೋಗಿದ್ದೇನೆಯೋ ಎನ್ನಿಸಿತು. ಓಂದಿನ ಅಪ್ಪಣ್ಣ ಅಲ್ಲ ಈಗ. ಬೆಳೆದ ಒಬ್ಬ ಹೊಸ ಮನುಷ್ಯ.

ಬಸ್ಸಿನಲ್ಲಿ ಜನರು ಸಾಧಾರಣವಾಗಿದ್ದರು. ಬೆಳಗಿನ ಬಿಸಿಲು ಬೀಳುತ್ತಿದ್ದರೂ ಕತ್ತಿನಲ್ಲಿ ಉಲ್ಲನ್ ಮಫ್ಲರ್ ಸುತ್ತಿದ್ದ, ಕಿವಿಯಲ್ಲಿ ಟಿಕ್ಕಿ*ಯನ್ನು ಧರಿಸಿದ್ದ ಒಬ್ಬರು ದೊಡ್ಡ ಮನುಷ್ಯರು ಸ್ವಲ್ಪ ಹತ್ತಿರದಲ್ಲಿ ಕುಳಿತಿದ್ದರು. ಮುಂದಿನ ಎರಡು ಸೀಟುಗಳಲ್ಲಿ ಸ್ತ್ರೀ-ಯರೂ ಮಕ್ಕಳೂ ಕುಳಿತಿದ್ದರು. ಅವರಲ್ಲೊಬ್ಬಳು ದಾರಿಯುದ್ದಕ್ಕೂ ಹೊರಕ್ಕೆ ತಲೆ ಹಾಕಿಕೊಂಡು ವಾಂತಿಮಾಡಿಕೊಳ್ಳುತ್ತಿದ್ದಳು. ಘಟ್ಟ ಹತ್ತಿ ಮೇಲಕ್ಕೆ ಹೋದಾಗ ಅಪ್ಪಣ್ಣ ಹೊರಗೆ ತಲೆಹಾಕಿ ಕೆಳಗಡೆಗೆ ಒಂದು ಸಲ ನೋಡಿದ. ಪರ್ವತದ ಶರೀರವನ್ನು ಸುತ್ತಿಕೊಂಡಿದ್ದ ಕಪ್ಪನೆಯ ರಸ್ತೆಯ ರೇಖೆಗಳು ಅಂಕುಡೊಂಕಾಗಿ ಕಾಣಿಸುತ್ತಿದ್ದುವು. ಕೆಳಗಿನಿಂದ ಬರುವ ಖಾಲಿ ಲಾರಿಗಳು ಕಟ್ಟಿರುವೆಗಳ ಹಾಗೆ ನಿಧಾನವಾಗಿ ಘಟ್ಟವನ್ನು ಹತ್ತುತ್ತಿದ್ದುವು. ಮೇಲೆ ನಿಂತಾಗ ಕೆಳಗಿನ ಅಗಾಧತೆಯನ್ನು ಊಹಿಸಬಹುದಾಗಿತ್ತು. ಬಲಗಡೆ ಮುಳ್ಳಿನ ಪೊದೆಗಳೂ. ಕಪ್ಪಾದ ಎಲೆಗಳೂ ನೆಲವನ್ನು ಆವರಿಸಿದ್ದ ಸಣ್ಣ ಸಣ್ಣ ಪೊದರುಗಳೂ ಕಾಣಿಸುತ್ತಿದ್ದುವು. ಮೇಲೆ ಕಾಡು ಕತ್ತರಿಸಿ ಬಯಲಾದ ಸ್ಥಳಗಳಲ್ಲಿ ಬುಡ ಕತ್ತರಿಸಿದ ಮೋಟು ಮರಗಳು ಅಲ್ಲಲ್ಲಿ ಕಾಣಿಸುತ್ತಿದ್ದುವು.

ಕೆಮ್ಮಣ್ಣಿನ ಬಣ್ಣ ಕಾಣಿಸುತ್ತಿದ್ದ ಆ ವಿಶಾಲವಾದ ಭೂಭಾಗವನ್ನು ಕಂಡಾಗ ಟಿಕ್ಕಿ ಹಾಕಿದ್ದ ದೊಡ್ಡ ಮನುಷ್ಯರು ಆ ಕಡೆಗಿದ್ದ ಕೆಂಪು ಗಡ್ಡದವನನ್ನು ಉದ್ದೇಶಿಸಿ ಏನನ್ನೋ ಕೇಳಿದರು.

---

* ಕೊಂಡಿಲು, ಕಿವಿಯ ಆಭರಣ.

"ರಬ್ಬರ್ ತೋಟ ಮಾಡಿಸೋದಕ್ಕೆ ನಮ್ಮ ಕೋಯಕುಟ್ಟಿ ಹಾಜಿ ಮಕ್ಕಳು ಈ ಸ್ಥಳನೆಲ್ಲ ಕೊಂಡು ಕೊಂಡಿದ್ದಾರೆ" ಎಂದ.

ಬಿಸಿಲಿನ ತಾಪವನ್ನು ಹೋಗಲಾಡಿಸುವ ತಂಗಾಳಿ ಬಸ್ಸಿನೊಳಕ್ಕೆ ಸುಯ್ ಎಂದು ಬೀಸುತ್ತಿತ್ತು.

ಒಂದು ಸಾಲು ಅಂಗಡಿಗಳಿದ್ದ ಸ್ಥಳಕ್ಕೆ ಬಂದಾಗ ಕಂಡಕ್ಟರ್ ಬಸ್ಸು ನಿಲ್ಲಿಸಲು 'ಸ್ಟಾಪ್' ಎಂದ. ಬಸ್ಸು ನಿಂತಿತು.

"ಇದೇ ಸ್ಥಳ."

"ಬಂತಾ?"

ಅಪ್ಪುಣ್ಣಿ ಮತ್ತೊಂದು ಸಲ ಕೇಳಿದ. ಕಂಡಕ್ಟರ್ 'ಹೌದು' ಎಂದ. ಅವನು ಚೀಲವನ್ನು ಹಿಡಿದುಕೊಂಡು ಬಸ್ಸಿನಿಂದ ಇಳಿದ.

ಉರುಟು ಕಲ್ಲಿನ ದಂಟೆ. ಅದರ ಪಕ್ಕದಲ್ಲಿ ತಟ್ಟಿ ಹೊದಿಸಿದ ಅಂಗಡಿಗಳ ಸಮೂಹ. ಹೆಂಚು ಹೊದಿಸಿದ್ದ ಅಂಗಡಿಗಳು ಎರಡೇ ಇದ್ದದ್ದು. ಸೈದಾಲಿ ಕುಟ್ಟಿಗೆ ಮೊದಲೇ ಕಾಗದ ಬರೆದಿಲ್ಲ. ಬಸ್ಸಿನಿಂದ ಇಳಿದು ಹೋದಾಗ ಅಪ್ಪುಣ್ಣಿಗೆ ಅವ್ಯಕ್ತವಾದ ಒಂದು ರೀತಿಯ ಭಯವುಂಟಾಯಿತು. ಮೊದಲು ಸಿಕ್ಕಿದ ಒಂದು ಅಂಗಡಿಯಲ್ಲಿ ಕೇಳಿದ.

"ಸೈದಾಲಿಕುಟ್ಟಿ ಅಂಗಡಿ ಯಾವುದು?"

ಅಲ್ಲಿ ಸಾಮಾನುಗಳನ್ನು ತೆಗೆದು ಕೊಡುತ್ತಿದ್ದ ಹುಡುಗನಿಗೆ ತಿಳಿದಿರಲಿಲ್ಲ. ಅಪ್ಪುಣ್ಣಿ ಅಲ್ಲಿಂದ ಹೊರಟು ಮತ್ತೊಂದು ಅಂಗಡಿಯಲ್ಲಿ ಕೇಳಿದ. ನರೆತ ಕೊಂಬು ಮೀಸೆಯೂ ಎದೆಯಲ್ಲಿ ದೊಡ್ಡದೊಂದು ಕಬ್ಬಿಣದ ಕ್ರಾಸ್ ತೂಗುಹಾಕಿಕೊಂಡಿದ್ದ ಒಬ್ಬ ಮನುಷ್ಯ ಆ ಅಂಗಡಿಯವನು.

ಅವನು ತೋರಿಸಿಕೊಟ್ಟು "ಅದೋ ಆ ಹೆಂಚು ಹಾಕಿದ ಅಂಗಡಿ ಆಚೆ ಕಡೆ ಇರೋದು." ಎಂದು.

ಅಪ್ಪುಣ್ಣಿಗೆ ಆಗ ಉಸಿರಾಡುವಂತಾಯಿತು.

ತಟ್ಟಿ ಹೊದಿಸಿದ ಒಂದು ಅಂಗಡಿ. ಅದರ ಹಿಂದೆ ಕಲ್ಲು ಗೋಡೆಯ ಒಂದು ಸಣ್ಣ ಮನೆ. ಅಂಗಡಿಯಲ್ಲಿ ಸಾಮಾನು ತೆಗೆದುಕೊಳ್ಳಲು ಬಂದವರು ಯಾರೂ ಇಲ್ಲ.

ಒಂಬತ್ತೋ ಹತ್ತೋ ವಯಸ್ಸಿನ ಒಬ್ಬ ಹುಡುಗ ಪೆಟ್ಟಿಗೆಯ ಮುಂದೆ ಕುಳಿತಿದ್ದ. ಇದೇ ಅಲ್ಲವೆ? ಎಂದು ಅಪ್ಪುಣ್ಣಿ ಅನುಮಾನಿಸುತ್ತಾ ನಿಂತಿದ್ದಾಗ "ಏನು ಆಗಬೇಕು ಹೇಳಿ ಮಾಡುತ್ತೇನೆ" ಎನ್ನುವ ರೀತಿಯಲ್ಲಿ ಗೌರವದಿಂದ ನೋಡಿದ.

"ಸೈದಾಲಿಕುಟ್ಟಿಯ ಅಂಗಡಿ ಯಾವುದು?"

"ಇದೇ. ಏನು ಬೇಕಾಗಿತ್ತು?"

"ಸೈದಾಲಿಕುಟ್ಟಿ ಇಲ್ಲವಾ?"

ಹುಡುಗನಿಗೆ ಆತ ಯಾರೆಂದು ಗೊತ್ತಿಲ್ಲದೇ ಇದ್ದುದರಿಂದ ಸ್ವಲ್ಪ ತಾತ್ಸಾರದಿಂದಲೇ ಕೇಳಿದ.

"ಏನಾಗಬೇಕು ಹೇಳಿ."

"ಸೈದಾಲಿಕುಟ್ಟಿಯನ್ನು ಕಾಣಬೇಕು."

ಹುಡುಗ ಕುಳಿತಲ್ಲಿಂದಲೇ ಕರೆದ. "ಅಪ್ಪಾ ಇದೋ ಕರೀತಾರೆ."

"ಯಾರೋ?"

ಹೌದು ಸೈದಾಲಿಕುಟ್ಟಿಯ ಧ್ವನಿ.

"ಯಾರೋ ಅದು?"

ಅಂಗಡಿಯ ಹಿಂದಿದ್ದ ಮನೆಯ ಬಾಗಿಲಿನಲ್ಲಿ ತಂಗು ಹಾಕಿದ್ದ ಗೋಣೀಚೀಲದ ತೆರೆಯನ್ನು ಸರಿಸುತ್ತ ಸೈದಾಲಿಕುಟ್ಟಿ ಹೊರಗೆ ಬಂದ. ಆತ ಕೈ ಕಟ್ಟಿಹಾಕಿ ನಿಂತುಕೊಂಡು ಆಶ್ಚರ್ಯದಿಂದ ನೋಡಿ ಹೇಳಿದ.

"ಅರೇ ಅಲ್ಲಾ, ನಾಯರ್‌ಕುಟ್ಟಿ ಅಲ್ಲವಾ?"

ಅಪ್ಪುಣ್ಣಿ ನಕ್ಕ.

"ಈ ಕಡೆಗೆ ಬನ್ನಿ. ಕುಳಿತುಕೊಳ್ಳಿ."

"ಲೋ ಆ ಮಣೆ ತಂದು ಹಾಕು."

ಅಪ್ಪುಣ್ಣಿ ಹಣೆಯ ಮೇಲಿನ ಬೆವರೊರೆಸಿಕೊಳ್ಳುತ್ತ ಹೊರಗೆ ನಿಂತಿದ್ದವನು ಅಂಗಡಿಯೊಳಕ್ಕೆ ಹೋದ.

"ಒಳ್ಳೆ ಜನ. ಒಂದು ಕಾರ್ಡು ಬರೆದು ಹಾಕೋದಕ್ಕೆ ಏನು ಕಷ್ಟ ಆಗಿತ್ತು?"

"ಬೇಗ ಹೊರಟೆ."

"ಅದೂ ಒಳ್ಳೆಯದೇ ಆಯ್ತು. ದಾರೀಲಿ ತೊಂದರೆ ಏನೂ ಆಗಲಿಲ್ಲ ತಾನೆ?"

"ಏನೂ ಇಲ್ಲ."

"ಅಲ್ಲ ಮೊಟ್ಟಮೊದಲು ದೂರದಿಂದ ಬರೋದಲ್ಲವೆ?"

ಆ ಮಧ್ಯೆ ಸೈದಾಲಿಕುಟ್ಟಿ ಒಳಕ್ಕೆ ಹೋದ. ಬೇಗ ಹಿಂದಿರುಗಿ ಬಂದ.

ಸೈದಾಲಿಕುಟ್ಟಿ ಆ ಸ್ಥಳದ ವಿಚಾರವಾಗಿ ವಿವರಿಸಿದ. ತಿರುವಾಂಕೂರಿನಿಂದ ಬಂದ ಕೆಲವು ಕ್ರಿಶ್ಚಿಯನ್ನರು ಅಲ್ಲಲ್ಲಿ ಬಂದು ನೆಲಸಿದ್ದಾರೆ. ಬಯಲಾಗಿ ಕಾಣುತ್ತಿರುವ ಸ್ಥಳಗಳೆಲ್ಲ ಮೊದಲು ಕಾಡುಗಳಾಗಿದ್ದುವು. ಒಳಗಡೆ ಹೋದರೆ ಇಂಗ್ಲೀಷಿನವರ ಟೀತೋಟಗಳಿವೆ. ಅಂಗಡಿಯಲ್ಲಿ ವ್ಯಾಪಾರ ಮಾಡುವವರೂ ಕ್ರಿಶ್ಚಿಯನ್ನರೇ. ಒಬ್ಬ ನಾಯರ್ ವ್ಯಾಪಾರಿಯೂ ಇದ್ದಾನೆ. ಅಂದ್ರುಮಾನ್ ಕಾಕನ ಒಂದು ಒಣ ಮೀನಿನ ಅಂಗಡಿಯೂ ಇದೆ.

ಈ ಪರ್ವತಗಳ ಪ್ರದೇಶದಲ್ಲಿ ಅಂಗಡಿ ಇಟ್ಟರೆ ವ್ಯಾಪಾರಕ್ಕೆ ಜನವಿರುತ್ತಾರೋ

ಎಂದು ಅಪ್ಪುಣ್ಣಿಗೆ ಸಂಶಯವುಂಟಾಯಿತು.

ಸುಮಾರು ಐನೂರರ ವರೆಗೆ ಜನರು ಸುತ್ತಮುತ್ತ ವಾಸಮಾಡುತ್ತಾರೆ. ಅವರಿಗೆ ಸಾಮಾನೆಲ್ಲ ಈ ಅಂಗಡಿಗಳಿಂದಲೇ ಸಿಕ್ಕಬೇಕು. ತೋಟದಲ್ಲಿ ಸ್ಟೋರ್ ಪ್ರಾರಂಭವಾಗುವ ಮೊದಲು ಒಳ್ಳೆಯ ವ್ಯಾಪಾರವಿತ್ತು. ಈಗ ಆಗೊಮ್ಮೆ ಈಗೊಮ್ಮೆ ಅಂಗಡಿಗೆ ಬರುತ್ತಾರೆ.

ನಾನಾ ರೀತಿಯ ವ್ಯಾಪಾರ ಸೈದಾಲಿಕುಟ್ಟಿಯದು. ಸೈದಾಲಿಕುಟ್ಟಿಯದಲ್ಲದ ಬೇರೆ ಒಂದು ಚಿಲ್ಲರೆ ಅಂಗಡಿಯೂ ಇದೆ. ಆದ್ದರಿಂದ ಸೈದಾಲಿಕುಟ್ಟಿಗೆ ತೊಂದರೆ.

ಹದಿಮೂರು ವರ್ಷಗಳಾಗಿವೆ, ಸೈದಾಲಿಕುಟ್ಟಿ ಇಲ್ಲಿಗೆ ಬಂದು. ತೋಟದಲ್ಲಿ ಕೆಲಸ ಮಾಡಿಕೊಂಡಿದ್ದ. ಆ ಮೇಲೆ ಒಣಮೀನಿನ ವ್ಯಾಪಾರ. ಜನರು ಬಂದು ಹೆಚ್ಚಾಗುವುದಕ್ಕಾರಂಭಿಸಿದಾಗ ಒಂದು ಚಿಲ್ಲರೆ ಅಂಗಡಿಯನ್ನು ತೆರೆದ. ಆದರೆ ಈಗ ದಿನ ಕಳೆದರೆ ಸಾಕು ಎಂದು ಪ್ರಾರ್ಥಿಸುತ್ತಾನೆ. ವಾಸದ ಮನೆ, ಅಂಗಡಿಮನೆ ಎರಡೂ ಸ್ವಂತದ್ದಲ್ಲ. ಎಂಟು ರೂಪಾಯಿ ಬಾಡಿಗೆ ಕೊಡಬೇಕು. ಸ್ವಲ್ಪ ಹಣ ಸಂಪಾದನೆಯಾದರೆ ಅದನ್ನು ಕೊಂಡುಕೊಳ್ಳಬೇಕೆಂಬ ಆಶೆಯಿದೆ. ಆದರೆ ಅದು ಸಾಧ್ಯವೆನ್ನಿಸುವುದಿಲ್ಲ.

ಮಾತನಾಡುತ್ತಿದ್ದವನ್ನು ಸೈದಾಲಿಕುಟ್ಟಿ. ಅಪ್ಪುಣ್ಣಿ ಎಲ್ಲವನ್ನೂ ಕೇಳಿಸಿಕೊಳ್ಳುತ್ತ ಕುಳಿತ್ತಿದ್ದ. ಆಗ ಒಳಗಿನಿಂದ ಗೋಣಿ ಚೀಲದ ತೆರೆ ಮರೆಯಿಂದ ಒಂದು ಶಬ್ದ ಕೇಳಿಸಿತು.

"ಇಲ್ಲಿನೋಡಿ."

ಸೈದಾಲಿಕುಟ್ಟಿ ಎದ್ದು ನಿಂತು ಹೇಳಿದ.

"ನಾವು ಒಂದು ತೊಟ್ಟು ನೀರು ಕುಡಿಯೋಣ."

ಸೈದಾಲಿಕುಟ್ಟಿ ಒಳಕ್ಕೆ ಹೋದ. ಅಪ್ಪುಣ್ಣಿ ಸಂಶಯ ಪಡುತ್ತಾ ನಿಂತಿದ್ದಾಗ ಸೈದಾಲಿಕುಟ್ಟಿ ಹೇಳಿದ:

"ಒಳಗೆ ಬನ್ನಿ ಪರವಾಯಿಲ್ಲ. ನಮ್ಮ ಮನೆಯರೇ ಇರೋದು."

ವೈಮನಸ್ಯದಿಂದ ಒಳಕ್ಕೆ ಹೋದ.

ಬಾಗಿಲು ದಾಟಿದರೆ ಒಂದು ಪಡಸಾಲೆ ಅಲ್ಲಿ ಎರಡು ಗ್ಲಾಸುಗಳಲ್ಲಿ ಟೀ. ಒಂದು ಬಾಳೆ ಎಲೆ ತುಂಡಿನ ಮೇಲೆ ಚಿಪ್ಸ್ ಮತ್ತು ಮೈಸೂರು ಬಾಳೆ ಹಣ್ಣು ಇರಿಸಲಾಗಿತ್ತು.

"ಕುಳಿತುಕೊಳ್ಳಿ."

ಮಣೆಯನ್ನು ತೋರಿಸುತ್ತ ಸೈದಾಲಿಕುಟ್ಟಿ ಹೇಳಿದ.

"ಬಂಡೀಲೂ ಬಸ್ಸಿನಲ್ಲೂ ಬಂದದ್ದಲ್ಲವಾ? ಆಯಾಸವಾಗಿರಬೇಕು ಕುಡಿಯಿರಿ."

ಅಪ್ಪುಣ್ಣಿ ಕುಳಿತ.

ಗ್ಲಾಸನ್ನು ತುಟಿಯ ಹತ್ತಿರಕ್ಕೆ ತೆಗೆದುಕೊಂಡು ಕುಡಿದು ಮುಗಿಸಿದ.

ಒಳಗಿನ ಬಾಗಿಲಿನಿಂದ ಕಪ್ಪಾದ ಉಡುಗೆಯನ್ನುಟ್ಟಿದ್ದ ಒಬ್ಬ ಹೆಂಗಸು ಬಂದಳು.

"ಪಾತುಮ್ಮಾ ಇದ್ಯಾರು ಗೊತ್ತಾ?"

"ಯಾರು?"

"ನಮ್ಮೂರಿನವರೊಬ್ಬರ ಮಗ."

"ಹೌದಾ? ನನಗೆ ಗೊತ್ತಿಲ್ಲವಲ್ಲಾ?"

"ನಮ್ಮ ಕೋಂದುಣ್ಣ್ಯಾರ್ ಇರಲಿಲ್ಲವಾ? ಅವರ ಮಗ."

ಅಪ್ಪುಣ್ಣಿ ತಲೆ ಎತ್ತಿ ನಗುತ್ತ ಸೈದಾಲಿಕುಟ್ಟಿಯ ತಾಯಿಯನ್ನು ನೋಡಿದ.

"ಅರೆ ಅಲ್ಲಾ! ಇದೇನೀಗ ನಾನು ಕೇಳ್ತಿರೋದು? ಈ ಹುಡುಗನನ್ನ ನಾ ಕಂಡಾಗ ಇಷ್ಟೇ ಇದ್ದದ್ದು."

ಪಾತುಮ್ಮ ಒಂದು ಕೋಳಿ ಮರಿಯ ಗಾತ್ರವನ್ನು ತೋರಿಸುವಂತೆ ಎರಡು ಕೈ-ಗಳಿಂದಲೂ ತೋರಿಸಿದಳು. ಸೈದಾಲಿಕುಟ್ಟಿ ನಕ್ಕ.

"ಅದು ಮೊದಲಲ್ಲವಾ ಪಾತುಮ್ಮಾ, ಆಗ ನೀನಿಷ್ಟು ಮುದುಕಿಯಾಗಿದ್ದೆಯಾ?"

ಅಷ್ಟರಲ್ಲಿ ಸೈದಾಲಿಕುಟ್ಟಿಯ ಮಗ ಒಳಗೆ ನಡೆಯುತ್ತಿದ್ದ ಮಾತುಕತೆಯಲ್ಲಿ ಸೇರಿ-ಕೊಳ್ಳಲು ಬಂದ.

"ಅಂಗಡೀಲಿ ಹೋಗಿ ಕೂತುಕೊಳ್ಳೋ. ಜನರು ಬರೋ ಹೊತ್ತು."

ಅವನು ಅಂಗಡಿಯ ಹತ್ತಿರಕ್ಕೆ ಹೋದಾಗ ಸೈದಾಲಿಕುಟ್ಟಿ ಹೇಳಿದ:

"ಅವನಿಗೆ ವ್ಯಾಪಾರ ಮಾಡೋದನ್ನ ಕಲಿಸ್ತಿದ್ದೀನಿ."

ಅಂಗಡಿಯಲ್ಲಿ ದೀಪ ಹಚ್ಚಿಟ್ಟ.

ಕಿಟಕಿಯ ಮೂಲಕ ಹೊರಗೆ ಸಂಜೆಯ ಬೆಳಕು ಮಾಯವಾಗುತ್ತಿತ್ತು. ಶೂನ್ಯವಾದ ಮಲೆಗಳ ಮೇಲಿನಿಂದ ನೀಲಿಯ ಬಣ್ಣ ಮರೆಯಾಗುತ್ತಿತ್ತು. ಪೂರ್ವ ದಿಕ್ಕಿನ ಮೋಡ-ಗಳು ಮಂಜಿನ ತೆರೆಗಳಂತೆ ಕಾಣಿಸಿಕೊಳ್ಳುತ್ತಿದ್ದುವು.

ಸೈದಾಲಿಕುಟ್ಟಿ ಗ್ಲಾಸುಗಳನ್ನು ಗೋಡೆಯ ಹತ್ತಿರದಲ್ಲಿ ತೆಗೆದಿಟ್ಟು ಹೇಳಿದ:

"ಇಬ್ಬರು ಮೂವರು ಅಂಗಡೀಗೆ ಬರೋ ಹೊತ್ತು. ಕೂತು ಕೊಂಡಿರಿ...... ನಾನು ಈಗ ಬಂದೆ." ಎಂದು ಹೇಳಿ ಸೈದಾಲಿಕುಟ್ಟಿ ಅಂಗಡಿಯೊಳಕ್ಕೆ ಹೋದ.

ಪಾತುಮ್ಮ ಊರಿನ ವರ್ತಮಾನಗಳನ್ನೆಲ್ಲ ವಿಚಾರಿಸಿದಳು. ಎರಡೇ ವರ್ಷವಾಗಿದೆ, ಅವರೂ ಮಕ್ಕಳೂ ಊರಿನಿಂದ ಅಲ್ಲಿಗೆ ಬಂದು. ಅಲ್ಲಿದ್ದ ಮನೆಯನ್ನು ಮೊದಲು ಅಡ ಹಾಕಿದ್ದರು. ಅದನ್ನು ಮಾರಿ ಸಾಲ ತೀರಿಸಿದರು. ಊರಿನಲ್ಲಿ ಸ್ವಂತ ಮನೆ ಜಮೀನು ಮಾಡಿಕೊಂಡ ನಂತರವೇ ಇನ್ನು ಹಿಂದಿರುಗಿದರಾಯ್ತು ಎಂದು ಭಾವಿಸಿ ಅವರು ಮಾಪಿಳ್ಳೆಯ ಹತ್ತಿರ ಹೇಳಿರುವುದು.

"ಆಳು ತುಂಬ ಬೆಳೆದಿದ್ದೀ. ನಾನು ಅಮ್ಮುಟ್ಟಿ ವೈದ್ಯರ ತಾವಕ್ಕೆ ಬರುತ್ತಿದ್ದಾಗ ನಿಮ್ಮನೆಗೆ ಬಂದಿದ್ದೆ, ತುಂಬ ಹಿಂದೆ. ಆಗ ಎದೆ ಹಾಲು ಕುಡೀತಿದ್ದ ವಯಸ್ಸು."

ಅಪ್ಪುಣ್ಣಿ ಗೋಡೆ ಒರಗಿಕೊಂಡು ಕುಳಿತು ಆಲೋಚಿಸಿದ. ಬೆಳೆದಿದ್ದೇನೆ. ಇನ್ನೂ ಬೆಳೆಯುತ್ತೇನೆ.

"ಪಾರುಕುಟ್ಟಿ ಅಮ್ಮಂಗೆ ಮತ್ತೇನೂ ಇಲ್ಲ ತಾನೆ?"

"ಇಲ್ಲ."

"ಅಂತೂ ಸುಖವಾಗಿದ್ದಾಳೆ."

"ಹ್ಞೂಂ"

ಇನ್ನು ಏನನ್ನೂ ಕೇಳದೆ ಇರಲಿ ಎಂದು ಪ್ರಾರ್ಥಿಸುತ್ತಿದ್ದ.

ಪಾತುಮ್ಮನ ಹಿಂದಿನಿಂದ ಎರಡು ಕಪ್ಪನೆಯ ಕಣ್ಣುಗಳು ಇಣುಕಿ ನೋಡಿದುವು. ಪಾತುಮ್ಮ ಆಕಡೆಗೆ ತಿರುಗಿದಾಗ ಅವಳನ್ನು ಸರಿಯಾಗಿ ಕಾಣುವುದಕ್ಕಾದದ್ದು.

ಬೆಳ್ಳನೆಯ ತೆಳ್ಳನೆಯ ಹುಡುಗಿ. ಅವಳ ಮುಖದಲ್ಲಿ ಆಶ್ಚರ್ಯ ತುಂಬಿದ ಒಂದು ನಗು ಮೂಡಿತ್ತು.

"ಯಾಕೆ ಹಾಂಗೆ ನೋಡ್ತೀಯಾ? ಕುಡಲ್ಲೂರಿನೋರಲ್ಲವಾ?" ಆ ಹುಡುಗಿ ನಾಚಿಕೆಯಿಂದ ಹಿಂದಕ್ಕೆ ಸರಿದಳು. ಪಾತುಮ್ಮ ಹೇಳಿದಳು:

"ನಬೀಸಾ. ಮೊದಲನೆಯವಳು. ಅವಳು ಹೇಳೋದು ಇಲ್ಲಿಗಿಂತ ಊರೇ ಚೆನ್ನಾಗಿತ್ತು ಅಂತ"

ಅಪ್ಪುಣ್ಣಿ ಮನೆಯೊಳಗೆಲ್ಲ ಒಂದು ಸಲ ಕಣ್ಣಾಡಿಸಿದ. ಅಟ್ಟವಿಲ್ಲ. ಮೇಲೆ ಹುಲ್ಲು ಹೊದಿಸಿದೆ. ಸಾರಣೆ ಮಾಡದ ಇರುವ ಮುರಕಲ್ಲಿನ ಗೋಡೆಗಳು. ಒಳಗೆ ಎರಡು ರೂಮುಗಳ ಬಾಗಿಲುಗಳು ಕಾಣಿಸುತ್ತವೆ. ಅದರಿಂದಾಚೆಗೆ ಮನೆಯಮ್ಮ ಹತ್ತಿರಕ್ಕೆ ಒಂದು ಜಗಲಿಯಿದೆ. ಅದರ ಮೇಲೆ ಒಂದು ಹಣತೆ ಹಚ್ಚಿಟ್ಟಿದೆ. ಅದರ ಕೆಳಗೆ ನಬೀಸ ಅಡಿಗೆ ಮನೆಗೆ ಹೋಗುವುದನ್ನೂ ತಿರುಗಿ ಬರುವುದನ್ನೂ ಅಪ್ಪುಣ್ಣಿ ನೋಡಿದ. ದೀಪದ ಬೆಳಕಿನ ಹತ್ತಿರಕ್ಕೆ ಬಂದಾಗ ಅವಳ ಕತ್ತಿನಲ್ಲಿದ್ದ ಏಲಸ್ಸುಗಳು ಪ್ರಕಾಶಿಸುತ್ತಿದ್ದುವು. ಇನ್ನೂ ಕತ್ತಲಾವರಿಸದಿದ್ದ ಸಂಧ್ಯಾ ಸಮಯದಲ್ಲಿ ಸೇತುವೆಯ ಕೆಳಗೆ ಬಂಡೆಯ ಮೇಲೆ ಕುಳಿತು ಆಕಾಶದ ಕಡೆಗೆ ನೋಡುತ್ತಿದ್ದಾಗ ಮೇಘಮಾಲೆಗಳ ಮಧ್ಯೆ ಅರೆಮರೆಯಾಗಿ ಕಾಣಿಸಿಕೊಳ್ಳುತ್ತಿದ್ದ ಚಂದ್ರ ಕಾಂತಿಯಂತಿದ್ದಳು ಅವಳು.

ಸೈದಾಲಿಕುಟ್ಟಿ ಬರುವವರೆಗೆ ಪಾತುಮ್ಮ ಹೊಸಿಲಿನ ಮೇಲೆ ಕುಳಿತು ಮಾತಾಡಿಕೊಂಡಿದ್ದಳು.

ಸೈದಾಲಿಕುಟ್ಟಿ ಹೇಳಿದ:

"ಸರಿಯಾಗಿ ಕೂತುಕೊಳ್ಳೋದಕ್ಕೆ ಮಲಗೋದಕ್ಕೆ ಅನುಕೂಲವಿಲ್ಲ. ಆದರೂ ಹೇಗೋ ಸುಧಾರಿಸೋಣ ಅಲ್ವಾ?"

ಅಪ್ಪಣ್ಣೆ ನಗುವನ್ನು ಮಾತ್ರ ತೋರಿಸಿಕೊಂಡ. ಅಲ್ಲಿ ವಾಸಮಾಡುವುದಕ್ಕಲ್ಲವಲ್ಲ ತಾನು ಬಂದದ್ದು......

"ಸ್ನಾನ ಮಾಡೋದಿಲ್ಲವಾ?"

ಅಪ್ಪಣ್ಣೆ ಅನುಮಾನಿಸುತ್ತಿದ್ದ.

"ಪರವಾಯಿಲ್ಲ. ಇಲ್ಲೇ ಹತ್ತಿರದಲ್ಲಿ ಒಂದು ಹಳ್ಳ ಹರೀತದೆ. ಫಸ್ಟ್‌ಕ್ಲಾಸ್ ನೀರು."

ಸ್ನಾನಮಾಡಬೇಕು.

"ತಣ್ಣೀರಿನಲ್ಲಿ ಮಿಂದರ ಆಯಾಸ ಹೋಗುತ್ತೆ. ಷರಟು ಬಿಚ್ಚು."

ಅಪ್ಪಣ್ಣೆ ಷರಟು ಬಿಚ್ಚಿ ಕೈಚೀಲದಿಂದ ಟವಲ್ ತೆಗೆದುಕೊಂಡು ಹೆಗಲಿನ ಮೇಲೆ ಹಾಕಿಕೊಂಡ.

"ಪಾತುಮ್ಮಾ, ಒಳ್ಳೆದೊಂದಷ್ಟು ಎಣ್ಣೆ ಇದ್ದರೆ ತಾ. ನಂಗೂ ಒಂದು ತೊಟ್ಟುಬೇಕು.

ಪಾತುಮ್ಮ ಅಪ್ಪಣ್ಣೆಯ ಬೊಗಸೆಗೆ ಎಣ್ಣೆ ಹಾಕಿದಳು.

ಕಡಪೆಯಂತೆ ಹರಡಿಕೊಂಡಿದ್ದ ತಲೆಗೂದಲಿಗೆ ಅಪ್ಪಣ್ಣೆ ಎಣ್ಣೆ ಹಚ್ಚಿಕೊಂಡ.

"ನಬೀಸಾ, ಬಾಬನ ಟಾರ್ಚ್ ಕೊಡು."

ಅಡಿಗೆ ಮನೆಯಲ್ಲಿದ್ದ ನಬೀಸ ಅದಕ್ಕೆ ಹತ್ತಿರದಲ್ಲಿದ್ದ ಕೋಣೆಗೆ ಹೋದಳು. ಕೋಣೆಯಿಂದ ಹೊರಗೆ ಬರುತ್ತ ಟಾರ್ಚನ್ನು ಆಶ್ಚರ್ಯದಿಂದ ಮುಖದ ಕಡೆಗೆ ಬಿಟ್ಟು ಕೊಂಡಳು. ತಕ್ಷಣ ಬೆಳಕು ಬಿದ್ದಾಗ ಅವಳು ಬಿಳುಪಾದ ಪುಟ್ಟ ಹಲ್ಲುಗಳನ್ನೆಲ್ಲ ತೋರಿಸಿ ಕೊಂಡು ನಕ್ಕಳು. ಬೇಗ ಬಾಗಿಲಿನ ಹತ್ತಿರ ಬಂದು ತಂದೆಯ ಕೈಯಲ್ಲಿ ಟಾರ್ಚನ್ನು ಕೊಟ್ಟಳು.

ಸೈದಾಲಿಕುಟ್ಟಿ ಮುಂದೆ, ಅಪ್ಪಣ್ಣೆ ಹಿಂದೆ ಹೊರಟರು. ರೋಡಿನಿಂದ ಉರುಟು ಕಲ್ಲಿದ್ದ ಬಯಲಿಗೆ ಬಂದು ಅದನ್ನೂ ದಾಟಿ ಸ್ವಲ್ಪ ದೂರ ಬಂದರು. ಕಡಿದಾದ ಇಳಿ ಜಾರನ್ನು ಇಳಿವಾಗ ಬಂಡೆಗಳ ಮಧ್ಯೆ ಹರಿದು ಹೋಗುವ ನೀರಿನ ಶಬ್ದ ಕೇಳಿಸುತ್ತಿತ್ತು.

ಮೇಲೆ ವಿಶಾಲವಾದ ಆಕಾಶ. ದೂರದಲ್ಲಿ ಕಟ್ಟಿ ಹಾಕಿದ ಕತ್ತಲೆಯ ಹಾಗೆ ವೃಕ್ಷ ಸಮೂಹ. ಆ ಕಡೆಯ ಕತ್ತಲೆಯ ಕೊಳ್ಳಿಯಲ್ಲಿ ಎಲೆಗಳ ಸಮೂಹದ ಮಧ್ಯೆ ಸಾವಿರಾರು ಮಿಣುಕು ಹುಳುಗಳು ಇಣುಕು ಮಿಣುಕಾಟವಾಡುತ್ತಿದ್ದುವು. ಆಶ್ಚರ್ಯದ ನೋಟವಾಗಿತ್ತು ಅದು. ಅರಣ್ಯದ ತೊರೆಯನ್ನು ಆವರಿಸಿದ್ದ ಕತ್ತಲೆಯೂ, ಮೌನತೆಯೂ ಆ ಪರ್ವತ ರಾಶಿಯ ಗಾಂಭೀರ್ಯವೂ ಅಪ್ಪಣ್ಣೆಯನ್ನು ತದೇಕ ಚಿತ್ತನನ್ನಾಗಿ ಮಾಡಿದ್ದುವು.

ಒಳ್ಳೆಯ ತಂಪಿದೆ. ತಕ್ಷಣ ನೀರಿಗಿಳಿಯಬೇಕು ಅನ್ನಿಸಲಿಲ್ಲ. ಒಂದು ಕಲ್ಲಿನ ಮೇಲೆ ಹತ್ತಿ ಕುಳಿತುಕೊಂಡ. ಕೆಳಗೆ ಮರಳು, ಬೆಣಚುಕಲ್ಲುಗಳಿಂದ ಕೂಡಿದ ತೊರೆಯ ಪಾದದಲ್ಲಿ ಕುಳಿತ. ಅಪ್ಪಣ್ಣೆ ಕೆಲಸದ ವಿಷಯವಾಗಿ ಆಲೋಚಿಸುತ್ತಿದ್ದ.

"ನಾವು ನಾಳೆ ಹೋಗಿ ಮೆನನ್ ಕಂಡು ಬರೋಣ."

"ಯಾವ ಮೆನನ್"

ಎಸ್ಟೇಟಿನ ಮ್ಯಾನೇಜರ್. ಸಾಹೇಬರು ಇಂಗ್ಲೆಂಡಿಗೆ ಹೋಗಿದ್ದಾರೆ. ಅವನೇ ಈಗ ನೋಡಿಕೊಳ್ಳುವವನು.

"ಅನುಕೂಲವಾದೀತಾ?"

"ಆಗದಿದ್ರೆ ನಿಮಗೆ ನಾನಿದ್ದೀನಲ್ಲ. ನಾಯರ್‌ಕುಟ್ಟೀ ನಿಮ್ಮ ಚಿಂತೆ ನಂಗೆ ಗೊತ್ತುಂಟು."

ಸೈದಾಲಿಕುಟ್ಟಿ ಎದ್ದುನಿಂತು ಅವನ ಮುಂದಿದ್ದ ಮತ್ತೊಂದು ಕಲ್ಲಮೇಲೆ ಕುಳಿತು-ಕೊಂಡ. ಸೊಂಟದಿಂದ ಬೀಡಿ ತೆಗೆದುಕೊಂಡು ಹಚ್ಚುತ್ತಾ ಹೇಳಿದ:

"ನಾನು ಹೇಳಿದರೆ ಅವನು ಕೇಳ್ತಾನೆ. ಅವನೂ ನಮ್ಮ ಊರಿನ ಹತ್ರದವನೇ."

ಸೈದಾಲಿಕುಟ್ಟಿ ಶಂಕರ ಮೆನನ್ ಕುರಿತು ಹೇಳಿದ.

ಕುಡಲ್ಲೂರಿನಿಂದ ಐದಾರು ಮೈಲಿ ದೂರದಲ್ಲಿ ಆತನ ಊರಿರುವುದು. ಊರಿನಲ್ಲಿ-ದ್ದಾಗಿನಿಂದಲೇ ಅವನಿಗೆ ಸೈದಾಲಿಕುಟ್ಟಿ ಗೊತ್ತಿತ್ತು. ಹೊಳೆ ಬಂದಾಗ ಸೈದಾಲಿಕುಟ್ಟಿ ಅವನಿಗೆ ಎಷ್ಟೋ ಹುಲಿ ಮೀನು ತಗೆದುಕೊಂಡು ಹೋಗಿ ಕೊಟ್ಟದ್ದುಂಟು. ಅವನಿಗಾಗಿ ತುಂಬ ಕೆಲಸವನ್ನು ಮಾಡಿದ್ದಾನೆ.

ಅಂತೂ ಅಪ್ಪುಣ್ಣಿ ಸಂಶಯಪಟ್ಟುಕೊಂಡಿದ್ದ.

"ದೊಡ್ಡ ಮನುಷ್ಯರು ಅದನ್ನೆಲ್ಲ ನೆನಪಿಟ್ಟುಕೊಂಡಿರ್ತಾರಾ?"

"ಅದನ್ನು ಕೇಳಿ ಸೈದಾಲಿಕುಟ್ಟೀನ ಮರೆಯೋದಕ್ಕೆ ಸಾಧ್ಯವೇ ಇಲ್ಲ."

ಸೈದಾಲಿಕುಟ್ಟಿಯ ಧ್ವನಿ ಎಂದಿಗಿಂತ ಹೆಚ್ಚಾಗಿ ಗಂಭೀರವಾಗಿತ್ತು. ಅದೇನು ಎಂದು ಕೇಳಬೇಕಾಗಿ ಬರಲಿಲ್ಲ.

ಸೈದಾಲಿಕುಟ್ಟಿ ಹೇಳಿದ:

ಅದೊಂದು ಕಥೆ

ವೈನಾಡಿಗೆ ಊರಿನಿಂದ ಮೊತ್ತ ಮೊದಲು ಉತ್ತು ಬಿತ್ತುವ ಕಾಲದಲ್ಲಿ ಶಂಕರ ಮೆನನ್ ಮಲೆಯ ಒಂದು ತೋಟದಿಂದ ಇಲ್ಲಿಗೆ ವರ್ಗವಾಗಿ ಬಂದದ್ದು.

ಸೈದಾಲಿಕುಟ್ಟಿ ಹೋಗಿ ಅವನನ್ನು ಕಂಡ. ಅವನು ಐದು ರೂಪಾಯಿ ಕೊಟ್ಟ. ಸೈದಾಲಿಕುಟ್ಟಿಗೆ ಬೇಕಾಗಿದ್ದದ್ದು ಐದು ರೂಪಾಯಿಯಲ್ಲ. ಕೆಲಸ. ಊರಿನಿಂದ ಹುಲಿ ಮೀನು, ಬಾಳೆ ಮೀನು ಕೊಟ್ಟಿದ್ದೊಂದನ್ನೂ ಆತ ನೆನಪಿನಲ್ಲಿಟ್ಟುಕೊಂಡಿರಲಿಲ್ಲ.

"ಒಳ್ಳೆಯ ಸ್ಥಿತಿಗೆ ಬಂದಾಗ ಮನುಷ್ಯರಿಗೆ ಸ್ವಲ್ಪ ನೆನಪು ಕಡಿಮೆ" ಎನ್ನುವ ಒಂದು ಸಾಮಾನ್ಯ ತತ್ವವನ್ನು ಕಂಡುಕೊಂಡು ಸೈದಾಲಿಕುಟ್ಟಿ ಹಿಂದಿರುಗಿದ.

ಸೈದಾಲಿಕುಟ್ಟಿ ನಿರಂತರವಾಗಿ ಅವನ ಹತ್ತಿರಕ್ಕೆ ಅಲೆದಾಗ ಆತ ತೋಟದಲ್ಲಿ ಕೂಲಿ

ಕೆಲಸಕೊಟ್ಟ. ಒಂದು ದಿನಕ್ಕೆ ಒಂದು ರೂಪಾಯಿ ಕೂಲಿ. ಮೆನನ್ ಈಗ ಅಸಿಸ್ಟೆಂಟ್ ಮ್ಯಾನೇಜರ್ ಆಗಿದ್ದ. ವಾಸಕ್ಕೆ ಎಸ್ಟೇಟಿಗೇ ಸೇರಿದ ಒಂದು ದೊಡ್ಡ ಬಂಗಲೆಯಿದೆ. ಆ ಬಂಗಲೆಯಲ್ಲಿ ದೊಡ್ಡ ಅಗ್ಗಿಷ್ಟಿಕೆಯಿದ್ದ ಪಡಸಾಲೆಯಲ್ಲಿ ಸೈದಾಲಿಕುಟ್ಟಿ ಮಲಗು-ತ್ತಿದ್ದದ್ದು.

ಆಗ ಮೆನನ್‌ಗೆ ಮದುವೆಯಾಗಿರಲಿಲ್ಲ. ಆದರೂ ಕೂಲಿ ಕೆಲಸಗಾರರ ಸಂಪರ್ಕ-ವಿತ್ತು. ಮೇಸ್ತ್ರಿ ಕುಞ್ಞಕಣ್ಣನಿಗೆ ಕೆಲವು ಸೌಲಭ್ಯಗಳು ದೊರೆತಿದ್ದರ ಹಿಂದೆ ಒಂದು ಕಥೆ-ಯಿತ್ತು. ಅದೆಲ್ಲಾ ಸೈದಾಲಿಕುಟ್ಟಿಗೆ ಬೇಕಾಗಿರಲಿಲ್ಲ. ಆದರೆ ಎಲ್ಲಿಂದಲೋ ಒಬ್ಬಳು ಕೆಲಸದವಳು ಬಂದು ಸೇರಿದಾಗಿನಿಂದ ಸೈದಾಲಿಕುಟ್ಟಿಯ ಅಭಿಪ್ರಾಯ ಬದಲಾಯಿಸಿತು. ಅಡಿಗೆ ಮಾಡಿ ಊಟಕ್ಕೆ ಬಡಿಸುವುದಕ್ಕೆ ಗೋಪಾಲನಿದ್ದಾನೆ. ಹೇಳಿದ ಕೆಲಸ ಮಾಡು-ವುದಕ್ಕೆ ಎಸ್ಟೇಟಿನ ಆಳುಗಳಿದ್ದಾರೆ. ಮೆನನ್ ಹೇಗಿದ್ದರೂ ಒಬ್ಬಂಟಿಗ.

"ಸಣ್ಣ ಪ್ರಾಯದವಳು. ನಾಯರ್ ಜಾತಿಯವಳು ಆಗಿರಲಾರಳು ಎಂದು ಕೊಂಡಿದ್ದೆ."

ಅವಳು ಕೆಲಸದವಳಾಗಿ ಬಂದಿದ್ದರೂ ಏನೂ ಕೆಲಸ ಮಾಡುತ್ತಿರಲಿಲ್ಲ. ಮೆನನ್‌ಗೆ ಮೇಜಿನ ಮೇಲೆ ಊಟ ತೆಗೆದುಕೊಂಡು ಹೋಗಿ ಬಡಿಸುತ್ತಿದ್ದಳು ಅಷ್ಟೆ.

ಮೇಲೆ ಒಂದೇ ರೂಮು ಇದ್ದದ್ದು. ಮಧ್ಯಾಹ್ನ ಸಾಯಂಕಾಲವೆಲ್ಲ ಅವಳು ಮೇಲಿನ ರೂಮಿನಲ್ಲೇ ಇರುತ್ತಿದ್ದಳು.

ಕೆಲಸದವರು ಅದನ್ನು ಕಂಡೂ ಕಾಣದಂತಿದ್ದರು.

ಗೋಪಾಲನ್ ಗೊಣಗಾಡಲು ತೊಡಗಿದ್ದು ಅವಳು ತನ್ನ ಮೇಲೆ ಅಧಿಕಾರ ತೋರಿಸುವುದಕ್ಕೆ ಬಂದಾಗ.

ಅವರ ಮಧ್ಯೆ ಸೈದಾಲಿಕುಟ್ಟಿ "ಪಾಡಿ"ಗೆ ವಾಸವನ್ನು ಬದಲಾಯಿಸಿದ.

ಕೆಲವು ದಿವಸಗಳು ಕಳೆಯುವಷ್ಟರಲ್ಲಿ ಕೆಲಸದವಳು ಒಂದು ಸಲವೂ ಮೇಲಿನ ರೂಮಿನಿಂದ ಕೆಳಕ್ಕೆ ಇಳಿದು ಬರುತ್ತಿರಲಿಲ್ಲ.

ತಿಂಗಳುಗಳು ಕಳೆದುವು. ಒಂದು ದಿನ ರಾತ್ರಿ ಬಟ್ಲರ್ ಗೋಪಾಲನ್ ಬಂದು ಸೈದಾಲಿಕುಟ್ಟಿಯನ್ನು ಕರೆದ.

"ಯಾಕೆ?" ಎಂದು ಕೇಳಿದ. ಗೋಪಾಲನ್ ತನಗೆ ಗೊತ್ತಿಲ್ಲ ಎಂದ. ಆಗ ರಾತ್ರಿ ಹತ್ತು ಗಂಟೆಯಾಗಿತ್ತು. ಅವನ ಜೊತೆಯಲ್ಲಿ ಹೋದ. ಮೆನನ್ ಸಿಗರೇಟು ಸೇದುತ್ತಾ ಅತ್ತ ಇತ್ತ ಸುತ್ತಾಡುತ್ತಿದ್ದ. ಗೋಪಾಲನ್‌ಗೆ ಬಾಗಿಲು ಹಾಕಿಕೊಂಡು ಮಲಗಿಕೋ ಹೋಗು ಎಂದು ಹೇಳಿದ. ಅವರಿಬ್ಬರೇ ಉಳಿದಾಗ ಮೆನನ್ ಸೈದಾಲಿಕುಟ್ಟಿಯನ್ನು ಒಳಗಿನ ರೂಮಿಗೆ ಕರೆದ. "ಸೈದಾಲಿಕುಟ್ಟಿ".

ಎಂದಿನಂತೆ ಆತನ ಸ್ವರ ಗಡುಸಾಗಿರಲಿಲ್ಲ.

"ಸೈದಾಲಿಕುಟ್ಟೀ ನಿನ್ನಿಂದ ನನಗೊಂದು ಕೆಲಸ ಆಗಬೇಕಲ್ಲ."

"ಏನಾಗಬೇಕು ಹೇಳಿ."

"ಸ್ವಲ್ಪ ಹೊತ್ತು ಬಿಟ್ಟು ಹೇಳ್ತೇನೆ. ಇಲ್ಲೇ ಕುಳಿತಿರು."

ಸೈದಾಲಿಕುಟ್ಟಿ ಆ ರೂಮಿನೊಳಗೆ, ಅಲ್ಲಿದ್ದ ಒಲೆಯ ಹತ್ತಿರ ಬೆಂಕಿ ಕಾಯುತ್ತಾ ಕುಳಿತ. ಅವನಿಗೆ ಆಶ್ಚರ್ಯವೂ ಭಯವೂ ಗಾಬರಿಯೂ ಉಂಟಾದಂತೆ ತೋರಿತು. ಗೋಪಾಲನೂ ಮಲಗಿರಬೇಕು. ಓದುವ ಕೋಣೆಯೊಳಗೆ ಸೈದಾಲಿಕುಟ್ಟಿ ಗೋಡೆಯಲ್ಲಿ ಪುಸ್ತಕಗಳನ್ನು ಜೋಡಿಸಿಟ್ಟಿದ್ದ ಗಾಜಿನ ಅಲಮೇರಗಳ ಕಡೆಗೂ ಉರಿಯುತ್ತಿದ್ದ ಒಲೆಯ ಕಡೆಗೂ ನೋಡುತ್ತಾ ಕುಳಿತಿದ್ದ.

ಮತ್ತೆ ಮೆನನ್‌ನ ಶಬ್ದ ಕೇಳಿದಾಗ ಸೈದಾಲಿಕುಟ್ಟಿ ಎದ್ದುನಿಂತ.

"ಬಾ" ಎಂದಷ್ಟೇ ಹೇಳಿದ. ಅವನು ಮಹಡಿಯ ಏಣಿಯನ್ನು ಹತ್ತಿದ. ಹೆದರುತ್ತಾ ಹೆದರುತ್ತಾ ಸೈದಾಲಿಕುಟ್ಟಿ ಅವನನ್ನು ಹಿಂಬಾಲಿಸಿದ.

ಮೇಲಿನ ರೂಮಿನಲ್ಲಿ ಸಣ್ಣಗೆ ಮಾಡಿಟ್ಟಿದ್ದ ದೊಡ್ಡ ಮೇಜಿನ ದೀಪದ ಕುಡಿಯನ್ನು ಸ್ವಲ್ಪ ಎತ್ತರಿಸಿದ. ದೀಪದ ಬೆಳಕು ಚೆಲ್ಲಿತು. ಮಂಚದ ಕಡೆಗೆ ನೋಡಿದ. ಬಿಳಿಯ ಹೊದಿಕೆಯ ಒಳಗೆ ಕಣ್ಣು ಮುಚ್ಚಿಕೊಂಡು ಮಲಗಿದ್ದಳು ಕೆಲಸದವಳು. ಸಣ್ಣಗೆ ನರಳುತ್ತಿದ್ದಳು. ಆಗ ಸೈದಾಲಿಕುಟ್ಟಿ ಮತ್ತೂ ಒಂದನ್ನು ಕಂಡ. ನೆಲದ ಮೇಲೂ, ಸ್ನಾನದ ಕೋಣೆಯ ಬಾಗಿಲಿನ ಹತ್ತಿರವೂ ರಕ್ತ ಕಾಣಿಸುತ್ತಿತ್ತು.

"ಅರೆ ಅಲ್ಲಾ !" ಎಂದು ಸೈದಾಲಿಕುಟ್ಟಿ ಪರವಶನಾಗಿ ಬಿಟ್ಟ.

ಮೆನನ್ ಮತ್ತೊಂದು ಕಡೆ ಮಂಚದ ಮೇಲಿದ್ದ ಒಂದು ಬಿಳಿಯ ಬಟ್ಟೆಯ ಗಂಟನ್ನು ತೋರಿಸುತ್ತ ತಗ್ಗಿದ ಧ್ವನಿಯಲ್ಲಿ ಹೇಳಿದ.

"ಅದನ್ನು ತೆಗೆದುಕೊಂಡು ಹೋಗಿ ಹೂಳಿಬಿಟ್ಟು ಬಾ."

ಆಗ ಆತ ದಿಕ್ಕು ತಪ್ಪಿದವನಂತಾಗಿದ್ದ.

"ಆಳದಲ್ಲಿ ಹೂಳಬೇಕು. ಎಲ್ಲಿಯಾದರೂ ಸ್ವಲ್ಪ ಹೊತ್ತು ಬಿಟ್ಟು ಮೂರನೆಯವರಿಗೆ ತಿಳಿಯಬಾರದು."

ಸೈದಾಲಿಕುಟ್ಟಿ ಆ ಬಟ್ಟೆಯ ಗಂಟನ್ನು ಕೈಗೆತ್ತಿಕೊಂಡ. ಕೈ ಮರಗಟ್ಟಿ ಹೋದಂತಾಯಿತು. ಮೃದುವಾದ ತಣ್ಣಗಿದ್ದ ಯಾವುದೋ ಒಂದು. ಮುಸುಕು ತೆಗೆದು ನೋಡಿದಾಗ ಆಗತಾನೇ ಜನಿಸಿದ ಒಂದು ಶಿಶು; ಜೀವಿಸಿಲ್ಲ.

"ಸೌದೆ ಮನೆ ಹಿಂದೆ ಗುದ್ದಲಿ ಇರಬೇಕು ಬೇಗ." ಬಟ್ಟೆಯಿಂದ ಮುಚ್ಚಿದ್ದ ಆ ವಸ್ತುವನ್ನು ಕೈಗೆತ್ತಿಕೊಂಡು ಸೈದಾಲಿಕುಟ್ಟಿ ಹೊರಟ.

"………ಅಲ್ಲಿ ಈಗ ಒಂದು ಹೂವಿನ ಮರ ನಿಂತಿದೆ."…

"ಮ್ಯಾನೇಜರ ಹತ್ರ ಹೋದಾಗ ತೋರಿಸ್ತೀನಿ."

"ಮೂರನೆಯದೊಂದು ಜೀವಿಗೆ ತಿಳಿದದ್ದು ಈಗ."

ಐಸ್‌ನಂತೆ ಕೊರೆಯುತ್ತಿತ್ತು ತೊರೆಯ ನೀರು. ಮೀಯುವುದೂ ಬೇಡವೆನ್ನಿಸಿತು. ಸೈದಾಲಿಕುಟ್ಟಿ ಮೀಯಲು ಪ್ರಾರಂಭಿಸಿದಾಗ ತಾನು ಒಂದು ಮುಳುಗಿ ಹಾಕಿ ಮೇಲೆದ್ದ.

ಒಂದಿರುಗಿ ಹೋಗುವಾಗ ವೈನಾಡೂ ನೌಕರಿಯ ವಿಷಯವೂ ಸೈದಾಲಿಕುಟ್ಟಿಯೂ ಎಲ್ಲವೂ ಮನಸ್ಸಿನಿಂದ ತತ್ಕಾಲಕ್ಕೆ ಮರೆತು ಹೋದ ಹಾಗೆ ತೋರಿತು. ಉಳಿದದ್ದು ಒಂದು ಮಾತ್ರ.

ಅಲ್ಲಿ ಒಂದು ಹೂವಿನ ಮರ ಬೆಳೆದಿದೆ.

ಬೇರೆ ಜಾತಿಯ ಮನೆಯಲ್ಲಿ ಮೊತ್ತ ಮೊದಲಾಗಿ ಊಟ ಮಾಡುತ್ತಿದ್ದವನ್ನು. ಮಾಪಿಳ್ಳೆ ಮುಟ್ಟಿದ ನೀರು ಕುಡಿಯಬಾರದು ಎಂದಾಗಿತ್ತು ಮೊದಲಿನ ಅಭಿಪ್ರಾಯ. ಈಗ ಒಂದು ಪಕ್ಕದಲ್ಲಿ ಸೈದಾಲಿಕುಟ್ಟಿ ಮತ್ತೊಂದು ಪಕ್ಕದಲ್ಲಿ ಮುಹಮ್ಮದ್‌ಕುಟ್ಟಿ. ಎದುರಿಗೆ ಹಳದಿಬಣ್ಣದ ಅಂಗಡಿ ಅಕ್ಕಿಯ ಹೊಗೆಯಾಡುತ್ತಿರುವ ಅನ್ನ. ಕೆಂಪು ಬಣ್ಣ-ಕ್ಕಿದ್ದ ಸಾರು. ಬಡಿಸಿದ್ದು ಪಾತುಮ್ಮ.

ವಡಕ್ಕೇ ಪಾಟ್ಟಿನ ಚೌಕಟ್ಟಿನ ಮನೆಯಿಂದ ಹೊರಗೆ ಬರಬೇಕೆಂದು ತೀರ್ಮಾನಿಸಿದ ಮೇಲೆ ಊಟ ಮಾಡಬೇಕು. ಅಲ್ಲಿ ಹೊಲೆಯರು ಬಾವಿಯ ಹತ್ತಿರ ಕೂಡ ಹೋಗ-ಬಾರದು.

ಪಾತುಮ್ಮ ಬಡಿಸಿದ ಅನ್ನ ಸಾರು ಊಟ ಮಾಡುತ್ತಿದ್ದಾಗ ಅಪ್ಪುಣ್ಣಿಗೆ ಬೇಸರ-ವಾಗಲಿಲ್ಲ. ನಡೆದುಕೊಂಡು ಬಂದ ಸಂಪ್ರದಾಯವನ್ನು ಛಿದ್ರಗೊಳಿಸುತ್ತಿದ್ದೇನೆಯೋ ಎನ್ನುವ ಅನುಭವವುಂಟಾಯಿತು.

ಮಲಗುವ ಹೊತ್ತಾದಾಗ ತಳದಲ್ಲಿ ಅಪ್ಪುಣ್ಣಿಗೆ ಹಾಸಿಗೆ ಹಾಸಿಕೊಟ್ಟ. ಹರಕ-ಲಾಗಿದ್ದ ಹಳೆಯ ಒಂದು ತಟ್ಟನ್ನು ಸುತ್ತಿ ತಲೆದಿಂಬೂ ಮಾಡಿಕೊಟ್ಟ. ಅನಲೀವ ಅತ್ತರ್‌ನ ಪರಿಮಳ ಮೂಗಿಗೆ ಬಡಿಯುತ್ತಿತ್ತು.

"ಏನಾದ್ರೂ ಮಧ್ಯೆ ಏಳಬೇಕಾಗಿದ್ದರೆ ಎಬ್ಬಿಸಿ" ಸೈದಾಲಿಕುಟ್ಟಿ ಹೇಳಿದ. "ಟಾರ್ಚ್ ಹತ್ತಿರ ಇರಲಿ. ಹೊರಗೇನಾದರೂ ಹೋಗಬೇಕಾದರೆ ಬೇಕಾಗುತ್ತೆ."

"ಉ್ಞ"

"ಹೆದರಿಕೆಯಿಲ್ಲ ತಾನೆ?"

"ಉಹ್ಞುಂ"

"ಹೆದರಬೇಕಾಗಿಲ್ಲ. ನೀವೀಗ ಸಣ್ಣ ಹುಡುಗನೇನಲ್ಲ."

ಸೈದಾಲಿಕುಟ್ಟಿ ಒಂದು ಸಲ ನಕ್ಕ.

ತುಂಬ ಆಯಾಸವಾಗಿದ್ದ ಹಾಗೆ ತೋರಿತು. ಗಾಳಿಯೂ ತಣ್ಣಗೆ ಬೀಸುತ್ತಿತ್ತು.

ತಲೆದಿಂಬಿನ ಕಡೆಗೆ ಮುಖಮಾಡಿ ಅಪ್ಪುಣ್ಣಿ ಆಲೋಚಿಸಿದ. ನಾನು ತುಂಬ ದ್ವೇಷಿಸು-
ತ್ತಿದ್ದ ಒಬ್ಬ ಮನುಷ್ಯನ ಅತಿಥಿಯಾಗಿದ್ದೇನೆ ಈಗ.

* * * * *

# 9

ತಿರುವೋಣಕ್ಕೆ ಇನ್ನು ಐದೇ ದಿವಸಗಳಿದ್ದುವು. ಓಣಂ ಸಮಯದಲ್ಲಿ ಕಣ್ಣಾನ್ ತಳಿ ಮರಗಳಿಂದ ತುಂಬಿದ, ರೋಮಾಂಚನಗೊಳಿಸುವ ಊರಿನ ಗುಡ್ಡಗಳು ಜ್ಞಾಪಕಕ್ಕೆ ಬಂದುವು.

ಊರು ಬಿಟ್ಟು ಬಂದು ಐದಲ್ಲ, ಐವತ್ತು ವರ್ಷಗಳು ಕಳೆದು ಹೋಗಿವೆಯೋ ಎನ್ನಿಸುತ್ತಿತ್ತು. ಹೊಳೆ, ಕರುನ್ನೂರ್ ಸೇತುವೆ, ಗದ್ದೆ ಬಯಲು. ಕೇದಿಗೆ ವನಗಳು. ಗುಡ್ಡಗಳು......ಎಷ್ಟೋ ವರ್ಷಗಳ ಹಿಂದೆ ಕಂಡಂತೆ. ಹಗಲಿನಲ್ಲೂ ರಾತ್ರಿಯಲ್ಲೂ ಕತ್ತಲು ಕವಿದಿರುತ್ತಿದ್ದ ಆ ಇಕ್ಕಟ್ಟಿತ ಏಣಿಯ ಕೋಣೆ ಮನಸ್ಸಿನಲ್ಲಿ ಇನ್ನೂ ಮಾಸದಂತೆ ಉಳಿದಿದೆ. ಅದರ ಒಂದು ಮೂಲೆಯಲ್ಲಿ ಕೇದಿಗೆ ಓಲೆಯ ಚಾಪೆಯನ್ನೂ ಸುತ್ತಿ ನಿಲ್ಲಿಸಿಬಂದಿದ್ದ.

ಐದು ವರ್ಷಗಳ ಆಚೆಯ ದಡದಲ್ಲಿ ನಿಂತು ಈಗ ಒಮ್ಮೆ ಹಿಂತಿರುಗಿ ನೋಡಬೇಕು ಎನ್ನಿಸಿದೆ. ಜೀವತದ ಕಹಿಯಲ್ಲವೂ ಈಗ ಕಳೆದು ಹೋಗಿದೆ. ಭಾಸ್ಕರನ್ ನಂಬಿಯಾರನನ್ನೂ. ಕುರುಪ್ಪನನ್ನು, ಜೋಸೆಫ್‌ನನ್ನೂ ಎಲ್ಲರನ್ನೂ ನೋಡಬೇಕು ಎನ್ನಿಸಿದೆ. ಹುಡುಗನಾಗಿದ್ದ ಕಾಲದ ಎಷ್ಟೋ ಅನುಭವಗಳನ್ನು ಹೇಳಬೇಕಾದದ್ದಿವೆ, ಓದುತ್ತಿದ್ದ ಕಾಲದ ವಿಶೇಷತೆಗಳನ್ನೂ. ಅವರು ಹೇಳುತ್ತಿದ್ದುದನ್ನೆಲ್ಲಾ ಕೇಳಿಸಿಕೊಂಡು ನಿಶ್ಶಬ್ದವಾಗಿ ಕುಳಿತಿರುತ್ತಿದ್ದುದು ಅವನ ಅಂದಿನ ಪದ್ಧತಿಯಾಗಿತ್ತು. ಆಗ ಅವನಿಗೆ ಏನನ್ನು ಹೇಳಿಕೊಳ್ಳುವ ಅವಕಾಶವಿರಲಿಲ್ಲ.

ಇಲ್ಲಿಗೆ ಬರುವಾಗ ಒಂದು ಕೈಚೀಲ, ಎರಡು ಸೆಟ್ ಬಟ್ಟೆ. ಒಂದು ಟವಲ್—ಇಷ್ಟೇ ಅವನ ಹತ್ತಿರ ಇದ್ದದ್ದು.

ಆಗ ಸೈದಾಲಿಕುಟ್ಟಿಯ ವಿಷಯ ನೆನಪಾಯಿತು. ಎಲ್ಲವೂ ಸೈದಾಲಿಕುಟ್ಟಿಯೇ ಮಾಡಿದ್ದು. ಸಾಯಂಕಾಲ ಎಸ್ಟೇಟ್ ಮ್ಯಾನೇಜರನ ಬಂಗಲೆಗೆ ಹೋದ. ಸೈದಾಲಿಕುಟ್ಟಿ ಹಿಂದಿರುಗಿ ಬರುವಾಗ ವಾಗ್ದಾನ ಪಡೆದುಕೊಂಡೇ ಬಂದಿದ್ದ.

ಕೇವಲ ಒಂದು ವಾರ ಕಾಯಬೇಕಾಗಿ ಬಂದದ್ದು. ಫೀಲ್ಡ್ ರೈಟರಾಗಿ ನೇಮಕ ಮಾಡಿದ್ದೇವೆ ಎಂದು ಹೇಳಿದ ನಂತರವೇ ಅರ್ಜಿಯನ್ನು ಬರೆದುಕೊಟ್ಟದ್ದು.

ನೂರ ನಲ್ವತ್ತೈದು ರೂಪಾಯಿ ಸಂಬಳ. ಅಷ್ಟೊಂದು ಹಣ! ಅಷ್ಟು ಬೇಗ! ನೂರನಲವತ್ತೈದು ರೂಪಾಯಿ! ವಾಸ ಮಾಡುವುದಕ್ಕೆ ಸ್ಥಳವೂ ಬಿಟ್ಟಿ!

ಮೊದಲು ಪರಿಚಯವಾದದ್ದು ಭಾಸ್ಕರನ್ ನಂಬಿಯಾರ್. ಆತನ ಜೊತೆಯಲ್ಲಿದ್ದ ಕ್ಲಾರ್ಕ್‌ಗೆ ಮದುವೆಯಾದ ಮೇಲೆ ಅವರು ಅಲ್ಲಿ ಒಂಟಿಯಾಗಿದ್ದರು. ಅವಿವಾಹಿತರಿ-

ಗಾಗಿಯೇ ಅಲ್ಲಿ ಒಂದು ಕ್ವಾರ್ಟರ್ಸ್ ಇದೆ. ಅಪ್ಪುಣ್ಣಿಗೆ ಅಲ್ಲಿ ವಾಸಕ್ಕೆ ಸ್ಥಳ ಸಿಕ್ಕಿತು.

ತಿಂಗಳಿಗೆ ನೂರ ನಲವತ್ತೈದು ರೂಪಾಯಿ.

ಜೀವನದಲ್ಲಿ ಒಂದು ನೂರು ರೂಪಾಯಿಯ ನೋಟನ್ನು ಎಂದೂ ಕಂಡವನಲ್ಲ.

ಭಾಸ್ಕರ್ ನಂಬಿಯಾರ್ ಹೇಳಿದರು:

"ಪರವಾ ಇಲ್ಲ, ವರ್ಷಕ್ಕೆ ಐದಾರು ತಿಂಗಳ ಬೋನಸ್ ಕೂಡಾ ಸಿಗುತ್ತದೆ. ಅದೂ ಒಂದು ಮುಖ್ಯವಾದ ಸಂಗತಿ."

ಒಂದು ವರ್ಷ ಕೆಲಸ ಮಾಡಿದರೆ ಐದೋ ಆರೋ ತಿಂಗಳ ಸಂಬಳ ಹೆಚ್ಚಿಗೆ ದೊರೆಯುತ್ತದೆ !

ಆಮೇಲೆ ಅಬ್ರಹಾಮನ ಪರಿಚಯವಾದದ್ದು. ಪರಿಚಯ ಮಾಡಿಕೊಳ್ಳಲು ಯಾವಾಗಲೂ ಹಿಂಜರಿಯಬೇಕಾಗಿದ್ದ ಅನುಭವಗಳು ಅವನಿಗೆ ಆಗಿದ್ದುವು.

"ಯಾವೂರು?"

ಊರನ್ನು ಹೇಳಿದ.

"ಊರಿನಲ್ಲಿ ಯಾರ್ಯಾರಿದ್ದಾರೆ?"

ಅದೊಂದು ಮಾತ್ರ ಉತ್ತರಿಸಲು ಕಷ್ಟವಾಗುವ ಪ್ರಶ್ನೆ.

"ಹೇಳಿಕೊಳ್ಳುವಂಥವರು ಯಾರೂ ಇಲ್ಲ."

"ತಂದೆ?"

"ಇಲ್ಲ."

"ತಾಯಿ?"

"ಇಲ್ಲ" ಎಂದು ಹೇಳಲು ನಾಲಗೆಯ ತುದಿಯಲ್ಲಿ ಬಂದು ಹೋಯಿತು. ಆತ್ಮವಂಚನೆ ಮಾಡಿಕೊಳ್ಳುತ್ತಿದ್ದ......ಆ ವಂಚನೆ ಹೃದಯದ ಆಳದಿಂದ ಬಂದದ್ದಲ್ಲ. ಒಂದು ತರಹ ಭಾರವಾಗಿ ಕಾಣಿಸಿತು. ಆ ಮೇಲೆ ಅದನ್ನು ಹೋಗಲಾಡಿಸಿಕೊಳ್ಳಲು ಸಾಧ್ಯವಾಗಲಿಲ್ಲ:

"ಬ್ರದರ್ಸ್, ಸಿಸ್ಟರ್ಸ್ ಇಲ್ವಾ?"

"ಇಲ್ಲ."

"ಅದೃಷ್ಟವಂತ, ನಿಜವಾಗಿಯೂ ಅದೃಷ್ಟವಂತ." ಭಾಸ್ಕರನ್ ನಂಬಿಯಾರ್ ಹೇಳಿದರು. "ನನಗೆ ಸಕಲ ಭಂಡಾರವೂ ಇದೆ. ಎಲ್ಲರಿಗೂ ಹಣ ಕಳುಹಿಸಿ ಕೊಡಬೇಕು. ವಿಪರೀತ ಕಷ್ಟ."

ಒಂದು ತಿಂಗಳು ಮಾತ್ರ ಸ್ವಲ್ಪ ಕಷ್ಟವಾಗಿ ತೋರಿತು. ಆ ಮೇಲೆ ಕೆಲಸ ಪರಿಚಯವಾಯಿತು.

ನೂರ ನಲವತ್ತೈದು ರೂಪಾಯಿ ಎಣಿಸಿ ಕೈಯಲ್ಲಿ ಹಿಡಿದುಕೊಂಡಾಗ, ಅಪ್ಪು

ಹಣವೂ ತನ್ನದೇ ಎನ್ನಿಸಿದಾಗ ಅದನ್ನು ಏನು ಮಾಡಬೇಕು ಅನ್ನುವುದು ತಿಳಿಯಲಿಲ್ಲ. ಕ್ವಾರ್ಟರ್ಸ್ ಖರ್ಚು ಬರೀ ನಲವತ್ತ ಮೂರು ರೂಪಾಯಿಗಳು ಅಷ್ಟೆ.

ಹೊಸ ಜೀವನಕ್ಕೆ ಹೊಂದಿಕೊಳ್ಳುತ್ತಿದ್ದ. ಕೃಷ್ಣನ್ ಕುಟ್ಟಿ ಬಂದು ಹೇಳಿದ:

"ನೀರು ಬಿಸಿಯಾಗಿದೆ ಸಾರ್ ಸ್ನಾನ ಮಾಡ್ತೀರಾ?"

"ಬಂದ"

"ಆ್ಞ?"

"ಬಂದೆ ಅಂದೆ"

ಅವನು ಹೋದ.

ಹೊರಗೆ ತಂತಿ ಬೇಲಿಯ ಆಚೆ ಟೀ ಗಿಡಗಳು ರಾತ್ರಿಯ ಕತ್ತಲೆಯಲ್ಲಿ ಒಂದಾಗಿ ಬೆರೆಯುತ್ತಿದ್ದುವು. ಉಡುಪು ಬದಲಾಯಿಸಬೇಕು. ಸ್ನಾನ ಮಾಡಬೇಕು, ಊಟಮಾಡ-ಬೇಕು. ಆದರೆ ಆ ಆರಾಮ ಕುರ್ಚಿಯನ್ನು ಒರಗಿಕೊಂಡು ಹಾಗೆಯೇ ಆಲೋಚಿಸುತ್ತಾ ಕುಳಿತುಕೊಳ್ಳುವುದೂ ಅವನಿಗೆ ಒಂದು ರೀತಿಯ ಸಂತೋಷವನ್ನುಂಟು ಮಾಡುತ್ತಿತ್ತು.

ಮೊದಲ ತಿಂಗಳ ಸಂಬಳವನ್ನು ತೆಗೆದುಕೊಂಡು ಅದರ ಮೂರನೆಯ ದಿನ ಸೈದಾಲಿಕುಟ್ಟಿಯನ್ನು ಕಾಣಲು ಹೋದ. ಆ ದಿನ ಈಗಲೂ ಸ್ಪಷ್ಟವಾಗಿ ನೆನಪಿದೆ. ರಜಾದಿನವಾಗಿತ್ತು. ಸೈದಾಲಿಕುಟ್ಟಿಯ ಮುಂದೆ ಕೈನೀಡಿ ಒಂದು ಹಿಡಿ ನೋಟನ್ನು ಕೊಡುವುದಕ್ಕೆ ಹೋದಾಗ ಆತ ಹೇಳಿದ.

"ಇದೆಲ್ಲ ಬೇಡ ಕುಟ್ಟಿ. ನೀವು ಕಾಸನ್ನ ಹೀಗೆ ನಾನಾ ರೀತಿಯಲ್ಲಿ ಖರ್ಚು ಮಾಡಿ ಹಾಳು ಮಾಡಿಕೊಳ್ಳಬೇಡಿ. ನಾಳೆ ಇನ್ನೂ ನಾಲ್ಕು ಕಾಸು ಸಂಪಾದನೆ ಮಾಡಬೇಕು."

ಹಣ ಸಂಪಾದಿಸಬೇಕು—ಅದಾಗಿತ್ತು ಮೊದಲಿನ ತೀರ್ಮಾನ. ಅಗತ್ಯವಿದ್ದದ್ದಕ್ಕೆ ಮಾತ್ರ ಖರ್ಚು ಮಾಡುವುದು.

ಊರಿನ ವಿಷಯವೇನೂ ತಿಳಿದಿಲ್ಲ. ಕೆಲಸ ಸಿಕ್ಕಿದ ದಿವಸವೇ ರಾಮಕೃಷ್ಣ ಮಾಸ್ತರಿಗೆ ಒಂದು ಕಾಗದ ಬರೆದ. ಉತ್ತರ ಬಂತು. ಎರಡನೆ ಕಾಗದಕ್ಕೆ ಉತ್ತರ ಬರಲಿಲ್ಲ. ಮತ್ತೂ ಬರೆದು ನೋಡಿದ. ಮಾಸ್ತರು ಆ ಸ್ಥಳದಿಂದ ಬೇರೆ ಕಡೆಗೆ ವರ್ಗವಾಗಿ ಹೋಗಿರ-ಬಹುದು.

ತುಂಬ ದಿವಸಗಳಾಗಿವೆ? ಆಲೋಚಿಸುವುದಕ್ಕೆ ಪ್ರಾರಂಭಿಸಿ. ಒಂದು ಸಲ ಊರಿಗೆ ಹೋಗಿ ಬರಬೇಕು. ಅಲ್ಲಿ ಕೆಲಸವೇನೂ ಇಲ್ಲ, ಸುಮ್ಮನೆ. ಊರಿನ ಮೇಲಿನ ಪ್ರೀತಿ-ಹೋಗಿಲ್ಲ. ಅಲ್ಲಿ ಆತ್ಮೀಯರು ಯಾರೂ ತನಗಾಗಿ ಕಾದಿರುತ್ತಾರ ಅಂತಲೂ ಅಲ್ಲ. ಒಂದು ಸಲ. ಹೋಗಿ ಬರಬೇಕು. ಪಡಕ್ಕೆಪಾಟ್ ನೋಡಿಕೊಂಡು ಬರಬೇಕು. ಅವರೂ ನೋಡಲಿ. ಯಾರಿಗೂ ಬೇಡದೆ ಇದ್ದ ಅಪ್ಪುಣ್ಣಿ ಹೇಗೆ ಅಭಿವೃದ್ಧಿಗೆ ಬಂದಿದ್ದಾನೆ

ತಿನ್ನುವುದನ್ನು; ಯಾರ ಹತ್ತಿರವೂ ಸಹಾಯವನ್ನು ಬೇಡದೆ ಅಪ್ಪುಣ್ಣಿ ಈಗ ಜೀವಿಸಬಲ್ಲ ನೆನ್ನುವುದನ್ನು ನೋಡಲಿ.

ರಜಾ ತೆಗೆದುಕೊಂಡು ಊರಿಗೆ ಹೋಗುವ ವಿಷಯವನ್ನು ಜೊತೆಯವರೊಡನೆ ಯಾರ ಹತ್ತಿರವೂ ಹೇಳಿಲ್ಲ. ಹೇಳಿದರೆ ಅವರು ಆಶ್ಚರ್ಯ ಪಡುತ್ತಾರೆ. ಅಪ್ಪುಣ್ಣಿ ರಜಾ ತೆಗೆದುಕೊಳ್ಳದ ಮನುಷ್ಯ ಎಂದೇ ಎಲ್ಲರ ಭಾವನೆ.

ಗದ್ದೆ ಬಯಲಿನ ನಡುವೆ ಎದೆಯುಬ್ಬಿಸಿಕೊಂಡು ನಡೆಯಬೇಕು. ಇದೋ ಅಪ್ಪುಣ್ಣಿ ಬಂದಿದ್ದಾನೆ—ಎಂದು.

ಹೊರಡುವ ಮೊದಲು ಸೈದಾಲಿಕುಟ್ಟಿಯನ್ನು ಒಮ್ಮೆ ಕಂಡು ಹೋಗಬೇಕು. ಅವನನ್ನು ನೋಡಿ ಎಂಟೋ ಒಂಬತ್ತೋ ತಿಂಗಳಾಗಿವೆ. ಮೊದಮೊದಲು ವಾರಕ್ಕೊಂದು ಸಲವಾದರೂ ಹೋಗಿ ಕಾಣುತ್ತಿದ್ದ. ಮಧ್ಯೆ ಮಧ್ಯೆ ಆತನೂ ಇಲ್ಲಿಗೆ ಬಂದು ಹೋಗುತ್ತಿದ್ದ.

ಸೈದಾಲಿಕುಟ್ಟಿಯನ್ನು ಕಂಡಾಗ ಹಿಂದಿನ ಕಾಲವೆಲ್ಲ ನೆನಪಾಗಿ ಬಿಡುತ್ತದೆ.

ಕೆಲಸದವನು ಪುನಃ ಬಂದು ಕರೆದ.

"ನೀರು ಆರ್ತಾ ಇದೆ."

ಆತ ಮೇಲೆದ್ದ. ಒಳಗೆ ಹೋದ. ಆಗಲೂ ಆಲೋಚಿಸುತ್ತಿದ್ದ. ಅದೊಂದು ಅನುಭವ-ಅನುಭವ ಎಂದು.

*    *    *    *    *

ಎಸ್ಟೇಟ್ ರೋಡ್ ಹೋಗಿ ತಲಪುವುದು ದೊಡ್ಡ ರಸ್ತೆಯನ್ನು. ತಿರುವಿನಲ್ಲಿ ಕೈ ತೋರಿಸುವ ಎಸ್ಟೇಟಿನ ಹೆಸರನ್ನು ಬರೆದಿಟ್ಟ ಒಂದು ಬೋರ್ಡನ್ನು ನಟ್ಟಿದ್ದರು. ರಸ್ತೆಯಲ್ಲಿ ಅಪ್ಪುಣ್ಣಿ ನಡೆದು ಬರುತ್ತಿದ್ದಾಗ ಎದುರಿನಲ್ಲಿ ಫಿಲಿಪ್ಸ್ ಬರುತ್ತಿದ್ದುದು ಕಾಣಿಸಿತು. ಒಂದು ಸಲ ತುಟಿ ಅರಳಿಸಿ ಮುಂದೆ ಹೋಗುತ್ತಿದ್ದಾಗ ಆತ ಕೇಳಿದ:

"ಯಾವ ಕಡೆಗೆ?"

"ಸುಮ್ಮನೆ ಸ್ವಲ್ಪ ದೂರ......"

ಸೈದಾಲಿಕುಟ್ಟಿಯ ಅಂಗಡಿಯ ಮುಂದೆ ಹೋದಾಗ ಹೊರಗೆ ಯಾರೂ ಇರಲಿಲ್ಲ. ಒಂದು ನಿಮಿಷ ನಿಂತ. ಆಗ ಮುಹಮ್ಮದ್ ಕುಟ್ಟಿ ಹೊರಗೆ ಬಂದ.

ಅಂಗಡಿಗೆ ಹೋಗಿ ಕೇಳಿದ.

"ಅಪ್ಪ ಇಲ್ವಾ ಮುಹಮ್ಮದ್ ಕುಟ್ಟಿ?"

"ಮಲಗಿಕೊಂಡಿದ್ದಾರೆ, ಒಳಕ್ಕೆ ಬನ್ನಿ."

"ಯಾಕೆ ಮಲಗಿರೋದು?"

"ಸೌಖ್ಯ ಇಲ್ಲ."

ಹೊರಗಿನ ಶಬ್ದ ಸೈದಾಲಿಕುಟ್ಟಿಗೆ ಕೇಳಿಸಿರಬೇಕು. ಸೈದಾಲಿಕುಟ್ಟಿ ಕರೆದು ಕೇಳಿದ:

"ಯಾರೋ ಅದು?"

"ಅಪ್ಪುಣ್ಣಿಯೋರು."

"ಒಳಕ್ಕೆ ಬರವೇಳು."

ಅಪ್ಪುಣ್ಣಿ ಬಾಗಿಲಿಗೆ ಕಟ್ಟಿದ್ದ ಗೋಣಿ ಚೀಲದ ಪರದೆಯನ್ನು ಸರಿಸಿ ಒಳಕ್ಕೆ ಹೋದ. ನೆಲದಲ್ಲಿ ಒಂದು ಚಾಪೆಯ ಮೇಲೆ ಸೈದಾಲಿಕುಟ್ಟಿ ಮಲಗಿದ್ದಾನೆ. ಹಿಂದಿನ ಸೈದಾಲಿಕುಟ್ಟಿ ಎಂದು ಹೇಳಲು ಸಾಧ್ಯವೇ ಇಲ್ಲ. ಶರೀರ ಕೃಶವಾಗಿದೆ. ಮುಖದ ಎಲುಬುಗಳು ಎದ್ದು ಕಾಣುತ್ತಿವೆ. ಅವನನ್ನು ಕಂಡಾಗ ಸೈದಾಲಿಕುಟ್ಟಿ ಒಂದು ಸಲ ನಕ್ಕ. ಆ ಮೇಲೆ ಹೇಳಿದ:

"ಮೇಲೇಳೋದಕ್ಕೆ ಆಗೋದಿಲ್ಲ ಕುಟ್ಟಿ."

"ಯಾಕೆ ಸೈದಾಲಿಕುಟ್ಟಿ?"

"ವಾತ. ಏಳೋದಕ್ಕೆ ಆಗೋದಿಲ್ಲ. ಬಲದ ಕೈ-ಕಾಲಿನಲ್ಲಿ ಜೀವ ಇಲ್ಲ."

ಪಾತುಮ್ಮ ಹತ್ತಿರದಲ್ಲಿ ಬಂದು ನಿಂತು ಕಣ್ಣೀರನ್ನೊರೆಸಿಕೊಳ್ಳುತ್ತಾ ಹೇಳಿದಳು:

"ಮೂರು ತಿಂಗಳಾಯ್ತು ಮಲಗಿ. ಪಕ್ಷವಾತ ಅಂತ ಡಾಕ್ಟರು ಹೇಳ್ತಾರೆ."

"ಕೂತ್ಕೊಳ್ಳೋದಕ್ಕೆ ಒಂದು ಮಣೆ ಹಾಕ್ಕೊಡು."

"ಏನೂ ಬೇಡ."

ಅಪ್ಪುಣ್ಣಿ ಸೈದಾಲಿಕುಟ್ಟಿಯ ಚಾಪೆಯ ಮೇಲೆ ಕುಳಿತುಕೊಂಡ. ಅಪರಾಧ ಮಾಡಿದವನಂತೆ ಹೇಳಿದ:

"ನನಗೆ ಗೊತ್ತಿರಲಿಲ್ಲ."

ಪಾತುಮ್ಮ ಕಣ್ಣೀರೊರೆಸಿಕೊಳ್ಳುತ್ತ ಹೇಳಿದಳು:

"ಅಲ್ಲಾ ಹೀಗೆ ಮಾಡಿದ. ಮಮ್ಮದು ಕುಟ್ಟಿ ಕೈಲಿ ಹೇಳಿ ಕಳಿಸ್ಬೇಕು ಅಂತ, ಸುಮಾರು ದಿನದಿಂದ ನಿಮ್ಮನ್ನು ನೋಡಬೇಕು ಅಂತ ಇದ್ದೆ."

ಪಾತುಮ್ಮನ ಮುಖದಲ್ಲಿ ಹಿಂದಿನ ಕಳೆಯಿಲ್ಲ. ಬಾಗಿಲಿನ ಹತ್ತಿರ ನಬೀಸಾ ಬಂದು ನಿಂತುಕೊಂಡಾಗ ವಿಷಾದದ ನೆಳಲಿನ ಛಾಯೆಗಳು ಅವಳ ಕಣ್ಣಿನಲ್ಲಿಯೂ ಕಾಣಿಸುತ್ತಿದ್ದುವು. ಆತ ಆ ಮನೆಯ ಮಸಿ ಹಾಕಿ ಉಜ್ಜಿದ ನೆಲದ ಮೇಲೆ ದೃಷ್ಟಿನಟ್ಟು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದ.

"ಇನ್ನು ಮೇಲೆದ್ದು ತಿರುಗಾಡೋದು ಕಷ್ಟ. ಏನ್ಮಾಡ್ಲಿ, ಈ ಮಕ್ಕಳಿಗೆಲ್ಲ ಕಷ್ಟ ಬಂತು."

ಸೈದಾಲಿಕುಟ್ಟಿಯ ಧ್ವನಿ ಕುಗ್ಗಿತ್ತು.

ಪಾತುಮ್ಮ ಸ್ವಲ್ಪ ಸ್ವಲ್ಪವಾಗಿ ಮನೆಯ ಸ್ಥಿತಿಯೆಲ್ಲವನ್ನೂ ವಿವರಿಸಿದಳು.

ವ್ಯಾಪಾರದಲ್ಲಿ ಈಗೇನೂ ಲಾಭ ಇಲ್ಲ. ಐದು ತಿಂಗಳ ಬಾಡಿಗೆ ಕೊಟ್ಟಿಲ್ಲ. ಅಂಗಡಿ ಯಾವಾಗ ಖಾಲಿಮಾಡಿ ಕೊಡಬೇಕು ಅಂತಲೂ ಗೊತ್ತಿಲ್ಲ. ದೇವರು ಏನೇನು ಮಾಡ್ತಾನೆ ಅಂತ ಗೊತ್ತಾಗೋದಿಲ್ಲ."

ಯಾರೂ ಮಾತನಾಡದೆ ಮೌನವಾಗಿದ್ದರು. ಅಪ್ಪುಣ್ಣಿ ಸೈದಾಲಿಕುಟ್ಟಿಯ ಚಾಪೆಯ ಮೇಲೆ ಕುಳಿತಿದ್ದ. ನಬೀಸಾ ಹಣತೆ ಹಚ್ಚಿಕೊಂಡು ಬಂದು ನೆಲದ ಮೇಲೆ ಡಬ್ಬದ ಮೇಲಿಟ್ಟಳು.

"ಪಾತುಮ್ಮ. ಒಂದಿಷ್ಟು ಟೀ ಮಾಡೋದಕ್ಕೆ ಏನಾದರೂ ಉಂಟಾ?"

ಅಪ್ಪುಣ್ಣಿ ಕೂಡಲೇ ಹೇಳಿದ:

"ನನಗೆ ಈಗೇನೂ ಬೇಡ."

ಪಾತುಮ್ಮ ಒಳಕ್ಕೆ ಹೋದಳು. ಅಲ್ಲಿ ಅಪ್ಪುಣ್ಣಿ ಮತ್ತು ಸೈದಾಲಿಕುಟ್ಟಿ ಮಾತ್ರ ಇದ್ದದ್ದು.

"ಕುಟ್ಟಿ, ಇದೆಲ್ಲ ದೇವರ ಲೀಲೆ, ನಾನು ಮಾಡಿದ ಪಾಪದ ಫಲಾನ ಈಗ ಅನು-ಭವಿಸ್ತಾ ಇದ್ದೀನಿ."

ಅಪ್ಪುಣ್ಣಿಗೆ ಸೈದಾಲಿಕುಟ್ಟಿಯ ಮುಖದ ಕಡೆಗೆ ನೋಡುವುದಕ್ಕೆ ಸಾಧ್ಯವಾಗಲಿಲ್ಲ.

"ನೀವು ಒಂದು ಒಳ್ಳೆ ಸ್ಥಿತಿಗೆ ಬಂದ್ರಲ್ಲ......ಅದೊಂದು ಸಂತೋಷ."

ಮತ್ತೂ ನಿಶ್ಶಬ್ದತೆ ಆವರಿಸಿತು.

"ಬುದ್ಧಿ ತಿಳಿಯದೆ ಸೈದಾಲಿಕುಟ್ಟಿ ದೇವರು ಮೆಚ್ಚದ ಒಂದು ಕೆಲಸ ಮಾಡಿಬಿಟ್ಟ."

ಸೈದಾಲಿಕುಟ್ಟಿಗೆ ಏನು ಉತ್ತರ ಕೊಡಬೇಕೆಂದು ತಿಳಿಯದೆ ಅಪ್ಪುಣ್ಣಿ ಕಷ್ಟಪಡು-ತ್ತಿದ್ದ.

"ನಿಮ್ಮ ತಂದೆಯೂ ನಾನೂ ಒಂದೇ ತಟ್ಟೆಯಲ್ಲಿ ಊಟ ಮಾಡಿದವರು."

ಅಪ್ಪುಣ್ಣಿಯ ಮುಖ ಕೆಂಪಾಯಿತು. ಕಣ್ಣುಗಳನ್ನು ಒರೆಸಿಕೊಳ್ಳುತ್ತ ಆತ ಹೇಳಿದ:

"ಆದದ್ದಾಗಿ ಹೋಯಿತು. ಇನ್ಯಾಕೆ ಅದು?"

"ನಿಮಗೆ ಆ ವಿಷಯ ಗೊತ್ತಿಲ್ಲ ಕುಟ್ಟಿ, ಗೊತ್ತಾದರೆ......"

"ನನಗೆ ಗೊತ್ತಿದೆ. ನಾನು ಅದನ್ನು ಕೇಳಿದ್ದೇನೆ, ಮರೆತಿದ್ದೇನೆ."

ಆಗ ಸೈನಬಾ ಸೈದಾಲಿಕುಟ್ಟಿಯ ಚಾಪೆಯ ಹತ್ತಿರದಿಂದ ಕಡ್ಡಿ ಪೆಟ್ಟಿಗೆಯನ್ನು ತೆಗೆದುಕೊಳ್ಳಲು ಬಂದಳು. ಸೈದಾಲಿಕುಟ್ಟಿ ಏನನ್ನೋ ಹೇಳಬೇಕೆಂದಿದ್ದವನು ಬಚ್ಚಿಡಲು ಪ್ರಯತ್ನಿಸುತ್ತಿದ್ದ.

"ದೇವರು ಮರೆಯೋಲ್ಲ. ನಾನು ಕಣ್ಣು ಮುಚ್ಚಿದರೆ......ಬೆಳೆದು ನಿಂತ ಒಂದು ಹೆಣ್ಣು, ತನ್ನ ಕಾಲ ಮೇಲೆ ತಾನು ನಿಲ್ಲದ ಒಂದು ಹುಡುಗ ಎಲ್ಲಾ ದೇವರ ಲೀಲೆ."

ತುಂಬ ಪ್ರಯಾಸದಿಂದ ಅಪ್ಪುಣ್ಣಿ ಹೇಳಿದ:

"ಸೈದಾಲಿಕುಟ್ಟಿ ಚಿಂತೆ ಹಚ್ಚಿಕೊಳ್ಳಬಾರದು."

ಪಾತುಮ್ಮ ಕಲಕಿದ ನೀರಿನಂತಿದ್ದ ಒಂದು ಗ್ಲಾಸು ಟೀ ತಂದು ಇರಿಸಿದಳು. ಅವನು ಅದನ್ನು ಕುಡಿಯುತ್ತಾ ಮಧ್ಯೆ ಹೇಳಿದ:

"ನಾನು ನಾಳೆ ಊರಿಗೆ ಹೋಗ್ತೇನೆ."

ಸೈದಾಲಿಕುಟ್ಟಿಯ ಮುಖದಲ್ಲಿ ಆಶ್ಚರ್ಯ ವ್ಯಕ್ತಪಟ್ಟಿತು.

"ಒಳ್ಳೆಯದು, ಹೋಗಿ ಬನ್ನಿ."

ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದ ಬಳಿಕ ಆತ ಎದ್ದು ನಿಂತು ಒಳಗಿನ ಬಾಗಿಲ ಕಡೆಗೆ ಹೋದ. ಪಾತುಮ್ಮ ಗೋಡೆಯನ್ನೊರಗಿ ನಿಂತುಕೊಂಡಿದ್ದಳು. ಅವಳ ಹಿಂದೆ ಒಂದು ನೆಳಲಿನಂತೆ ನಬೀಸಳೂ.

"ಸೈದಾಲಿಕುಟ್ಟಿಗೆ ಅಗತ್ಯವಾದದ್ದನ್ನು ಮಾಡಬೇಕು. ನಾಳೆ ಬಾಡಿಗೆ ಕೊಡೋಣ. ಮುಹಮ್ಮದನನ್ನು ಬೆಳಿಗ್ಗೆ ಹೊತ್ತಿಗೆ ಮುಂಚೆ ಒಂದು ಸಲ ಅಲ್ಲಿಗೆ ಕಳಿಸಿ......"

ಆ ಮಂದ ಪ್ರಕಾಶದಲ್ಲಿ ಪಾತುಮ್ಮನ ಕಣ್ಣುಗಳಲ್ಲಿ ನೀರಾಡುತ್ತಿದ್ದುದನ್ನು ಆತ ಕಂಡ. ಅಪ್ಪುಣ್ಣಿ ಇನ್ನೂ ಹೆಚ್ಚಿನ ಆತ್ಮ ವಿಶ್ವಾಸದಿಂದ ಹೇಳಿದ:

"ಏನೂ ಚಿಂತೆ ಮಾಡಬೇಡಿ. ನಿಮಗೆ ಯಾವ ತೊಂದರೆಯೂ ಆಗುವುದಿಲ್ಲ."

ಪಾತುಮ್ಮನ ಹಿಂದಿನಿಂದ ಒಂದು ಕೆಮ್ಮಿನ ಶಬ್ದ ಕೇಳಿಸಿತು. ಆತ ನಿಧಾನವಾಗಿ ಸೈದಾಲಿಕುಟ್ಟಿಯ ಹಾಸಿಗೆಯ ಹತ್ತಿರ ನಿಂತುಕೊಂಡು ಮತ್ತೂ ಒಂದು ಸಲ 'ಹೋಗಿ ಬರುತ್ತೇನೆ' ಎಂದು ಹೇಳಿ ಹೊರಟ. "ಊರಿನಿಂದ ಬಂದ ತಕ್ಷಣ ಬಂದು ಕಾಣುತ್ತೇನೆ."

"ಕುಟ್ಟೀ" ಅವನು ಹೊರಟಾಗ ಸೈದಾಲಿಕುಟ್ಟಿ ಕರೆದ. "ಎಷ್ಟೋ ಕಾಲ ಆಯಿತು. ಹೇಳಬೇಕು ಹೇಳಬೇಕು ಅನ್ನಿಸಿ."

"ಏನು?"

"ತಾಯೀನ ನೀವು ಮರೀಬಾರದು. ಅವರಿಗೆ ನೀವಲ್ಲದೆ ಬೇರೆ ಯಾರು?"

ಅಪ್ಪುಣ್ಣಿಯ ಹಣೆ ಬೆವರಿತು.

"ನೋಡಿಕೊಂಡು ಬರ್‍ತೀನಿ ಸೈದಾಲಿಕುಟ್ಟಿ."

ಆತ ಬೇಗ ಬೇಗ ಹೆಜ್ಜೆ ಹಾಕುತ್ತಾ ಹೊರಟ. ಎರಡು ಕಡೆಗಳಲ್ಲಿಯೂ ಮಂದ ಪ್ರಕಾಶದ ಬೆಳಕುಗಳು ಮಿನುಗುಟ್ಟುತ್ತಿದ್ದುವು. ಸಾಯಂಕಾಲದ ಸಮಯವಾದದ್ದರಿಂದ ಅಂಗಡಿಗಳಲ್ಲಿ ವ್ಯಾಪಾರದ ಗಲಾಟೆಯಿತ್ತು. ಅಂಗಡಿಗಳಲ್ಲಿ ಐದು ವರ್ಷದಿಂದ ಯಾವ ವ್ಯತ್ಯಾಸವೂ ಆಗಿಲ್ಲ, ಅದೇ ಸ್ಥಳ......ಅಲ್ಲಿ ಮೊದಲು ಬಂದು ಬಸ್ಸಿನಿಂದ ಇಳಿದದ್ದು ಹಳೆಯ ಷರಟು, ಲುಂಗಿ, ಒಂದು ಕೈಚೀಲ, ತಬ್ಬಿಬ್ಬಾಗಿ ಇಳಿದದ್ದು.........

ಮಾರನೆಯ ದಿನ ಬಿಸಿಲು ಇಳಿಯುವ ಹೊತ್ತಿಗೆ ಆತ ಪಳ್ಳಿಪುರ ಸ್ಟೇಶನ್ನಿನಲ್ಲಿ ಬಂದು ಇಳಿದ.

ಕೂಲಿಯವನ ತಲೆಯ ಮೇಲೆ ದೊಡ್ಡ ಸೂಟ್‌ಕೇಸನ್ನೂ ಹೋಲ್ಡಾಲನ್ನೂ ಹೊರಿಸಿಕೊಂಡು ಸೀದಾ ಹೊರಟ. ಪರಿಚಯವಿರುವ ಮುಖ ಸ್ಟೇಶನ್ನಿನ ಪರಿಸರದಲ್ಲಿ ಯಾವುದಾದರೂ ಇದೆಯೇ ಎಂದು ನೋಡಬೇಕೆಂದಿತ್ತು. ಅವರು ಏತಕ್ಕೆ ಬೇಕು? ಟಿಕೆಟ್ಟನ್ನು ಪೋರ್ಟರನ ಕೈಯಲ್ಲಿ ಕೊಟ್ಟು, ರೈಲ್ವೆ ರಸ್ತೆಗಾಗಿಯೇ ನಡೆದ. ಮುಕ್ಕಾಲು ಮೈಲಿ ನಡೆದರೆ ಕರುನ್ನೂರ್ ಸೇತುವೆ.

ಸೇತುವೆ ಕೆಳಗೆ ಬಂದಾಗ ಒಂದು ಸಲ ನೋಡಿದ. ಕಪ್ಪಾದ ದೊಡ್ಡ ಸೇತುವೆಯ ಕಂಬಗಳು ಎಂದಿಗಿಂತ ಹೆಚ್ಚಾಗಿ ನೀರಿನೊಳಗೆ ಮುಳುಗಿ ಹೋಗಿವೆ. ಹೊಳೆ ತುಂಬಿ ಹರಿಯುತ್ತಿದೆ. ಹೊಳೆ ಪಕ್ಕದಲ್ಲಿ ನಡೆದು ಗೊನೆ ಕತ್ತರಿಸಿ ಹಾಕಿದ ನೇಂದ್ರ ಬಾಳೆಯ ತೋಟಗಳನ್ನು ದಾಟಿ ಕೂಟ ಕಡವಿನ ಹತ್ತಿರಕ್ಕೆ ಹೋದ.

ಖಾಲಿ ಕುಕ್ಕೆಗಳನ್ನಿಟ್ಟುಕೊಂಡು ಅಲ್ಲಿ ಮೂರು ನಾಲ್ಕು ಜನರು ಕುಳಿತಿದ್ದರು. ಅವರು ಸಂಶಯದಿಂದ ಅವನ ಕಡೆಗೊಮ್ಮೆ ನೋಡಿದರು. ಅದನ್ನು ನೋಡಿಯೂ ನೋಡದವನಂತೆ ಆತ ಹೊಳೆಯ ಕಡೆಗೆ ಹೆಜ್ಜೆ ಇರಿಸಿದ.

ನೀರಿನ ಹತ್ತಿರದ ವರೆಗೆ ನಡೆದ. ದಡದಲ್ಲಿ ನೊರೆ ಅಲ್ಲಲ್ಲಿ ಕಟ್ಟಿ ನಿಂತಿದೆ.

ಕೆಂಪಾದ ಲಂಗದ ನೆರಿಗೆಗಳಂತೆ ಕಲಕಿದ ನೀರು ಮಳಲು ತಿಟ್ಟನ್ನು ಸವರಿಕೊಂಡು ಹರಿಯುತ್ತಿತ್ತು.

ದೋಣಿ ಹತ್ತಿರ ಬಂದಿತು. ಹುಲ್ಲು ಕಟ್ಟನ್ನೂ ಓಲೆಯ ಗೊರಬೆಯನ್ನೂ ಇಟ್ಟುಕೊಂಡಿದ್ದ ಹೊಲೆಯರು ದೋಣಿಯ ತುಂಬ ಇದ್ದರು. ಪಂಚೆ ವ್ಯಾಪಾರಿ ರಾವುತ್ತರೂ ಅವನ ಬಟ್ಟೆಯ ಗಂಟೂ ಇತ್ತು.

ಆತ ಚಪ್ಪಲಿಯನ್ನು ಕಳಚಿ ಪಂಚೆಯನ್ನು ಮೇಲಕ್ಕೆ ಕಟ್ಟಿಕೊಂಡು ದೋಣಿಯಲ್ಲಿ ಕುಳಿತ. ದೋಣಿಯವನು ಒಂದು ಸಲ ಕೂಗಿದ. ದೂರದಲ್ಲಿ ಮರಳು ದಿಣ್ಣೆಯ ಕಡೆಯಿಂದ ಇಬ್ಬರು ಬರುತ್ತಿದ್ದರು. ಅವರು ತಕ್ಷಣ ಬೇಗ ಬೇಗ ಹೆಜ್ಜೆ ಹಾಕಿದರು.

ಕೂಲಿಯವನು ಸೂಟ್‌ಕೇಸನ್ನೂ, ಹೋಲ್ಡಾಲನ್ನೂ ಕೆಳಗಿಳಿಸಿ ದೋಣಿಯ ಒಂದು ಪಕ್ಕದಲ್ಲಿ ನೀರಿನ ಕಡೆಗೆ ಉಗಿಯುತ್ತ ನಿಂತಿದ್ದ.

ಮೊದಲಿನ ದೋಣಿಯವನಲ್ಲ. ತೆಳ್ಳನೆಯ ಕೋಲು ಮುಖದ ಒಬ್ಬ ಯುವಕನಾಗಿದ್ದ ಅಂದು. ಈಗ ಒಬ್ಬ ಗಡ್ಡದ ಮುದುಕ.

ದೋಣಿಯವನ ದೃಷ್ಟಿಯೆಲ್ಲ ಸೂಟ್‌ಕೇಸಿನ ಕಡೆಗೂ, ಹೋಲ್ಡಾಲಿನ ಕಡೆಗೂ, ನೀರಿನ ಕಡೆಗೂ, ಸಿಗರೇಟ್ ಸೇದುತ್ತ ಹಲಗೆಯ ಮೇಲೆ ಕುಳಿತಿದ್ದ ಅಪ್ಪುಣ್ಣಿಯ ಕಡೆಗ ೨ ಇತ್ತು. ಮತ್ತಿಬ್ಬರು ಪ್ರಯಾಣಿಕರೂ ಬಂದು ದೋಣಿ ಹತ್ತಿದಾಗ ದೋಣಿಯವನು

ಮರಳಿನಿಂದ ದೋಣಿಯನ್ನು ನೂಕಿದ. ದೋಣಿ ನೆಲ ಬಿಟ್ಟು ಹೊರಟಾಗ ನೆಗೆದು ದೋಣಿಯಲ್ಲಿ ಕುಳಿತು ಜಲ್ಲೆಯನ್ನು ಕೈಗೆತ್ತಿಕೊಂಡ.

ಎದುರು ಭಾಗದಲ್ಲಿ ಕುಳಿತುಕೊಂಡಿದ್ದ ಇಬ್ಬರ ದೃಷ್ಟಿಯೆಲ್ಲಾ ತನ್ನ ಕಡೆಗೇ ಇದೆ ಎಂದು ಅಪ್ಪುಣ್ಣಿಗೆ ತಿಳಿಯಿತು. ಆತ ನೀರಿನ ಕಡೆಗಿಟ್ಟಿದ್ದ ದೃಷ್ಟಿಯನ್ನು ಬೇರೆ ಕಡೆಗೆ ತಿರುಗಿಸಲಿಲ್ಲ. ಅವರಲ್ಲಿ ಒಬ್ಬ ಅಪ್ಪುಣ್ಣಿಯ ಕೂಲಿಯವನನ್ನು ಕೇಳಿದ:

"ಸ್ವಾಮಿಯೋರು ಯಾರು?"

"ನಂಗೊತ್ತಿಲ್ಲ. ಟ್ರೈನ್‌ನಲ್ಲಿ ಬಂದರು."

ಮತ್ತೊಬ್ಬ ಪ್ರಯಾಣಿಕ ಅದೇ ರೀತಿ ಮೆಲ್ಲಗೆ ಹೇಳಿದ:

"ಕಳಕ್ಕ* ಇರಬೇಕು."

ಆಚೆಯ ದಡವನ್ನು ತಲಪಿದಾಗ ಆತ ಮೊದಲು ಇಳಿದ. ಮತ್ತಿಬ್ಬರು ಅವನಿಗೆ ಸ್ಥಳ ಬಿಟ್ಟು ನಿಂತರು. ದೋಣಿಯ ಮಾಪಿಳ್ಳೆಗೆ ಎಂಟಾಣೆಯ ನಾಣ್ಯವನ್ನು ತೆಗೆದು-ಕೊಟ್ಟ.

"ಚಿಲ್ಲರೆ ಇಲ್ಲವಲ್ಲ?"

"ಪರವಾಇಲ್ಲ. ಇಟ್ಟುಕೊ."

ಮುದುಕನ ಮುಖ ಅರಳಿತು. ಬಿಟ್ಟ ಕಣ್ಣು ಬಿಟ್ಟ ಹಾಗೆಯೇ ನೋಡುತ್ತ ನಿಂತು ಕೊಂಡಿದ್ದ. ಮತ್ತಿಬ್ಬರು ಪ್ರಯಾಣಿಕರು ಆಶ್ಚರ್ಯ ಗೌರವಗಳಿಂದ ನೋಡುತ್ತಿದ್ದರು. ಆತ ರಸ್ತೆಯನ್ನು ತಲಪಿದ.

ಕಡವಿನ ಪರಿಸರದಲ್ಲಿ ಯಾವ ಬದಲಾವಣೆಯೂ ಇಲ್ಲ. ಸ್ವಲ್ಪ ಮೇಲ್ಭಾಗದಲ್ಲಿ ಮುರಕಲ್ಲಿನಿಂದ ಕಟ್ಟಿದ ಒಂದು ಸಣ್ಣ ಮಸೀದಿಯಿದೆ, ಹೊಸದಾಗಿ. ಎರಡು ಕಡೆಗಳಿಗೂ ನೋಡದೆ ಅಪ್ಪುಣ್ಣಿ ತಲೆಯೆತ್ತಿಕೊಂಡು ನಡೆಯುತ್ತಿದ್ದ. ಗದ್ದೆ ಕೊಯಿದಾಗಿತ್ತು. ದೊಡ್ಡ ಬಯಲಿಗೆ ಆತ ಬಂದಾಗ ಮತ್ತೊಂದು ಸಿಗರೇಟು ಹಚ್ಚಿದ. ಎದುರಿಗೆ ಬಂದ ಒಬ್ಬ ಮುದುಕ ಪಾಣನ್ ನಮಸ್ಕರಿಸಿ ಗದ್ದೆಗೆ ಇಳಿದು ದಾರಿಬಿಟ್ಟು ನಿಂತುಕೊಂಡ.

ಮುಚ್ಚಿದ್ದ ಬಾಗಿಲನ್ನು ದೂರದಿಂದಲೇ ಕಾಣಬಹುದಾಗಿತ್ತು. ನಡಿಗೆ ಸ್ವಲ್ಪ ವೇಗ ವಾಯಿತು. ಮುಂಬಾಗಿಲನ್ನು ಗಟ್ಟಿಯಾಗಿ ನೂಕಿ ಮೆಟ್ಟಿಲು ಹತ್ತಿ ಅಂಗಳಕ್ಕೆ ಹೋದಾಗ ಅಲ್ಲಿ ಯಾರೂ ಕಾಣಿಸಲಿಲ್ಲ. ಸಂಶಯಪಟ್ಟುಕೊಂಡು ಸ್ವಲ್ಪ ಹೊತ್ತು ನಿಂತ. ಬಡಗು ಭಾಗದಲ್ಲೂ ಯಾರೂ ಇಲ್ಲ. ಪಡಸಾಲೆಯಲ್ಲಿ ಪೆಟ್ಟಿಯ ಶಬ್ದ ಮಾಡುತ್ತ ಗಟ್ಟಿಯಾಗಿ ಕೇಳಿದ.

"ಇಲ್ಲಿ ಯಾರೂ ಇಲ್ಲವಾ?"

---

* ಮನೆಯ ಹೆಸರು.

ಉತ್ತರವಿಲ್ಲ. ಪಡಸಾಲೆಗೆ ಬಂದಾಗ ಬಡಗು ಭಾಗದ ಬಾಗಿಲು ಮುಚ್ಚಿದ್ದುದನ್ನು ಕಂಡ.

ಪುನಃ ಹೊರಗೆ ಬಂದ. ಆಗ ಅವನು ಕಂಡದ್ದು ಬತ್ತಾಯದ ಮನೆಗೂ ಚೌಕಟ್ಟಿನ ಮನೆಗೂ ಮಧ್ಯೆ ಅಂಗಳದಲ್ಲಿ ಒಂದು ಬೇಲಿ ಹಾಕಿದ್ದದ್ದನ್ನು. ಕೂಲಿಯವನು ಪೆಟ್ಟಿಗೆ-ಯನ್ನೂ ಹೋಲ್ಡಾಲನ್ನೂ ಹೊತ್ತುಕೊಂಡು ತನ್ನ ಅಸಮಾಧಾನವನ್ನು ವ್ಯಕ್ತಪಡಿ-ಸುತ್ತಾ ನಿಂತಿದ್ದ.

ಆತ ಪಡುಭಾಗದ ಅಂಗಳಕ್ಕೆ ಹೋದ. ಅಲ್ಲಿ ಮತ್ತೊಂದು ಮುಳ್ಳು ಬೇಲಿಯನ್ನು ಕಂಡ. ಬತ್ತಾಯದ ಮನೆಗೂ ಕೈಯಾಲೆಗೂ ಮಧ್ಯೆ ಇತ್ತು ಅದು. ಕೈಯಾಲೆಯ ಅಂಗಳದಲ್ಲಿ ಒಬ್ಬ ಸ್ತ್ರೀ ಕೆಲಸಮಾಡುತ್ತಿದ್ದಳು. ಅವಳು ಮನೆಗೆ ಎದುರಾಗಿ ಕುಳಿತಿದ್ದಳು ಬಿಳಿಯ ರವಕೆ ತೊಟ್ಟಿದ್ದ ಕಪ್ಪನೆಯ ಒಬ್ಬ ಸಣ್ಣ ಸ್ತ್ರೀ.

ಅಪ್ಪುಣ್ಣಿ ಕೆಮ್ಮಿದ. ಆ ಸ್ತ್ರೀ ತಿರುಗಿ ನೋಡಿದಳು. ಮೀನಾಕ್ಷಕ್ಕ!

ಅವರು ಮೊರವನ್ನು ಕೆಳಗಿಟ್ಟು ಎದ್ದು ನಿಂತರು. ಆಶ್ಚರ್ಯದಿಂದ ನೋಡು-ತ್ತಿದ್ದರು. ಆತನನ್ನು ಗುರುತಿಸಲು ಅವರು ಕಷ್ಟಪಡುತ್ತಿದ್ದಂತೆ ತೋರಿತು.

"ಯಾಕೆ. ಗೊತ್ತಾಗಲಿಲ್ಲವಾ ಮೀನಾಕ್ಷಕ್ಕ?"

"ಯಾರು ಅಪ್ಪುಣ್ಣಿಯಾ?"

ಅವರ ಮೂಳೆ ಬಿಟ್ಟುಕೊಂಡಿದ್ದ ಕಪ್ಪು ಮುಖದಲ್ಲಿ ಆಶ್ಚರ್ಯ ಮೂಡಿತು. ಬೇಲಿಯ ಹತ್ತಿರಕ್ಕೆ ಅವರು ಬಂದು ನಿಂತರು.

"ಮೀನಾಕ್ಷಕ್ಕನಿಗೆ ಗೊತ್ತಾಗಲಿಲ್ಲ. ಅಲ್ಲವಾ?"

"ಆಳು ತುಂಬಾ ಬೆಳೆದಿದ್ದೀಯಲ್ಲ"

ಆತ ಚೌಕಟ್ಟಿನ ಮನೆಯ ಕಡೆಗೆ ನೋಡುತ್ತಾ ಕೇಳಿದ:

"ಅಲ್ಲಿ ಯಾರೂ ಇಲ್ಲವಾ?"

"ಆ ಮನೆ ಮಾವನಿಗೆ ಸೇರಿತಲ್ಲ? ಮಧ್ಯೆ ಮಧ್ಯೆ ಬರ್ತಾ ಇರ್ತಾರೆ ಅಷ್ಟೆ."

"ಇಲ್ಲಿ ಇರೋರು ಯಾರು?"

"ಕುಟ್ಟನೂ ಮಾಳೂನೂ. ಪಾಲಾದ ಮೇಲೆ ಒಂದು ವರ್ಷ ಇದ್ದರು. ಆ ಮೇಲೆ ಸಿಂಗಾಪುರದಿಂದ ಬಂದ ರಾಘವನ್ ನಾಯರಿಗೆ ಮಾರಿದರು. ಅಲ್ಲಿ ಯಾರೂ ವಾಸ-ಮಾಡ್ತಾ ಇಲ್ಲ."

ಚೌಕಟ್ಟಿನ ಮನೆ ದೊಡ್ಡ ಮಾವನಿಗೆ.

ಬತ್ತಾಯದ ಮನೆ ಕುಟ್ಟಿ ಮಾವನಿಗೆ.

ಮೀನಾಕ್ಷಿಯಕ್ಕನಿಗೆ ಕೈಯಾಲೆ.

"ದೊಡ್ಡಮ್ಮ?"

"ಅಕ್ಕನೂ ಮಕ್ಕಳೂ ಅವರ ಮನೆಗೆ ಹೋದರು."

ಕೈಯಾಲೆಯನ್ನು ತೋರಿಸುತ್ತಾ ಮೀನಾಕ್ಷಕ್ಕ ಹೇಳಿದರು:

"ನನ್ನ ಮನೆ ಈಗ ಇದು" ಎಂದು.

ಆತನಿಗೆ ವಿಷಯವೆಲ್ಲ ತಿಳಿಯಿತು.

ಆತ ಕಳದಾಟಿ ಕೈಯಾಲೆಯ ಮುಂದಕ್ಕೆ ಹೋದ. ಕೂಲಿಯವನ ತಲೆಯ ಮೇಲಿನಿಂದ ಪೆಟ್ಟಿಗೆಯನ್ನು ಕೆಳಗಿಳಿಸಿ ಕೈಯಾಲೆಯ ಜಗಲಿಯ ಮೇಲಿಟ್ಟ. ಕೂಲಿ ಕೊಟ್ಟು ಅವನನ್ನು ಕಳುಹಿಸಿದ.

ಮೀನಾಕ್ಷಕ್ಕ ಮೆಟ್ಟಿಲುಗಳನ್ನು ಹತ್ತಿ ಬಂದಳು. ಅಪ್ಪಣ್ಣ ಅವಳನ್ನು ಹಿಂಬಾಲಿಸಿದ.

ಉದ್ದವಾಗಿ ನಿರ್ಮಿಸಿದ ಒಂದು ಓಲೆಯ ತಟ್ಟಿಯ ಮನೆ ಕೈಯಾಲೆ. ಹಿಂದೆ ಮಳೆಗಾಲದಲ್ಲಿ ಹುಲ್ಲಿನ ಕಂತೆಗಳನ್ನು ಸಂಗ್ರಹಿಸುವುದಕ್ಕೂ ಭತ್ತ ಬಡಿಯುವುದಕ್ಕೂ ಉಪಯೋಗಿಸುತ್ತಿದ್ದದ್ದು. ಒಳಗೆ ಮಣ್ಣಿನ ಗೋಡೆಗಳನ್ನು ಹಾಕಿ ಮೂರು ಭಾಗ ಮಾಡಿದ್ದಾರೆ.

"ಯಾರೇ ಅದು?"

ತುಂಬ ಕ್ಷೀಣಿಸಿದ ಒಂದು ಶಬ್ದ.

"ಯಾರು?" ಅಪ್ಪಣ್ಣ ಕೇಳಿದ.

"ಅಜ್ಜಿ."

ಆತ ಮಣ್ಣಿನ ಗೋಡೆಯ ನಡುವಿನಲ್ಲಿ ಆ ಕಡೆಗೆ ಹೋದ. ಅಲ್ಲಿ, ಒಂದು ಪಕ್ಕದಲ್ಲಿ ಹರಿದು ಹೋದ ಕೆಂಪು ಶಾಲನ್ನು ಹೊದೆದುಕೊಂಡು ಅವರು ಮಲಗಿದ್ದರು.

"ಯಾರೇ ಮೀನಾಕ್ಷಿ?"

ಆತ ಚಾಪೆಯ ಹತ್ತಿರ ಬಗ್ಗಿ ನಿಂತುಕೊಂಡು ಹೇಳಿದ.

"ನಾನು ಅಜ್ಜಿ ಅಪ್ಪಣ್ಣ."

ಅಜ್ಜಿ ಪ್ರಯಾಸಪಟ್ಟು ಎದ್ದು ಕುಳಿತರು. ಒಣಗಿದ ಹೊಗೆ ಸೊಪ್ಪಿನ ಮಂಡಿಕೆಗಳಂತಿದ್ದ ಶುಷ್ಕವಾದ ತೋಳುಗಳನ್ನೂ ಸುಕ್ಕುಗಟ್ಟಿದ ಮುಖವನ್ನೂ ಅಪ್ಪಣ್ಣ ನೋಡಿದ. ತಲೆಗೂದಲನ್ನು ತೆಗೆಸಿದ್ದಾರೆ. ಅವನ ಶರೀರವನ್ನು ಮುಟ್ಟಿ ತಡವಿಕೊಂಡು ಅವರು ಹೇಳಿದರು:

"ನನ್ನಪ್ಪ, ಅಂತೂ ಒಂದು ಸಲ ಬಂದೆಯಲ್ಲ ಸದ್ಯ."

ಅಪ್ಪಣ್ಣ ಮೌನವಾಗಿದ್ದ.

"ಅಜ್ಜಿಗೆ ಕಣ್ಣು ದೃಷ್ಟಿ ತೀರ ಇಲ್ಲದ ಹಾಗಾಯ್ತು. ಇನ್ನು ದಿನಾ ದಿನಾ ತಡ ಮಾಡೋದರ ಬದಲು ಬೇಗ ಆ ಕಡೆಗೆ ನನ್ನ ಕರಕೊಂಡದ್ರೆ ಚೆನ್ನಾಗಿತ್ತು."

ಆ ಕಣ್ಣುಗಳನ್ನು ಅವನು ದಿಟ್ಟಿಸಿ ನೋಡಿದ. ಅವು ಹಳದಿ ಬಣ್ಣದ ಕಫ ಕಟ್ಟಿದಂತಿ-ದ್ದುವು.

ತಲೆಯನ್ನೂ ಕತ್ತನ್ನೂ ಒಂದು ಸಲ ತಡವಿ ನೋಡಿ ಅಜ್ಜಿ ಹೇಳಿದರು:

"ನನ್ನ ಕುಟ್ಟೀ ನೀನು ಹೋಗಿ ಎಷ್ಟು ವರ್ಷ ಆಯ್ತು."

"ನಾಲ್ಕೈದು ವರ್ಷ ಕಳೆದುವಲ್ಲ?"

ಅಲ್ಲಿ ಕುಳಿತರೆ ಅಡಿಗೆ ಮನೆಯನ್ನು ಕಾಣಬಹುದಿತ್ತು. ನಾಲ್ಕೈದು ಮಡಕೆಗಳು, ಎರಡು ಕಂಚಿನ ತಟ್ಟೆಗಳು. ಮರದ ಕಾಲಿನ ಮೇಲಿದ್ದ ಒಂದು ಚಿಮಿಣಿ ಎಣ್ಣೆಯ ಹಣತೆ.

ಅಪ್ಪುಣ್ಣಿ ಎದ್ದು ಹೊರಗಿನ ಕೋಣೆಗೆ ಬಂದ. ಅಲ್ಲಿ ಮೀನಾಕ್ಷಕ್ಕ ಮರದ ಕಂಬಿ-ಗಳನ್ನು ಹಿಡಿದುಕೊಂಡು ಹೊರಕ್ಕೆ ನೋಡುತ್ತಾ ನಿಂತುಕೊಂಡಿದ್ದರು.

"ಎಲ್ಲಾ ನನ್ನ ಹಣೆಬರಹ. ಅವರೇನೋ ಬೇಗ ಕಣ್ಣು ಮುಚ್ಚಿಕೊಂಡರು." ಸ್ವಲ್ಪ ಹೊತ್ತು ಬಿಟ್ಟು ತನಗೆ ತಾನೇ ಸಮಾಧಾನ ಮಾಡಿಕೊಳ್ಳುವಂತೆ ಅವರು ಹೇಳಿದರು "ಹೋದವರು ಕಷ್ಟವಿಲ್ಲದೆ ಹೋದರು."

"ಕುಟ್ಟಿ ಮಾವನೂ ಮಾಳೂ ಈಗೆಲ್ಲಿದ್ದಾರೆ?"

"ಬಡಗು ಕೋಣೆಯಲ್ಲಿ—"

ಅಪ್ಪುಣ್ಣಿಯ ಕಣ್ಣುಗಳು ಬಿರುಕುಬಿಟ್ಟ ಗೋಡೆಗಳನ್ನೂ ಹಪ್ಪಳಿಕೆ ಎದ್ದ ಸೆಗಣಿ ನೆಲವನ್ನೂ ಹಣೆಯ ಮೇಲಿದ್ದ ಹರಕು ಬಟ್ಟೆಗಳನ್ನೂ ನೋಡುತ್ತ ಸಂಚರಿಸುತ್ತಿದ್ದುವು.

ಆತ ಮರದ ಕಂಬಿಗಳ ಮೂಲಕ ಹೊರಗೆ ನೋಡಿದ. ವಡಕ್ಕೇಪಾಟ್‌ನ ಚೌಕಟ್ಟಿನ ಮನೆಯ ಬಾಗಿಲು ಮುಚ್ಚಿತ್ತು.

ಮೀನಾಕ್ಷಕ್ಕ ಕೇಳಿದಳು:

"ಅಪ್ಪುಣ್ಣಿ ರಜದಲ್ಲಿ ಬಂದದ್ದಾ?"

"ಹೌದು."

"ಇಲ್ಲಿ ಕುಳಿತುಕೊಳ್ಳೋದಕ್ಕೇನೂ ಅನುಕೂಲ ಇಲ್ಲ. ಅಕ್ಕನ ಮನೆಗಾದರೂ ಹೋಗಿದ್ದರೆ ತೊಂದರೆಯಾಗ್ತಿರಲಿಲ್ಲ."

"ನಾನಿಲ್ಲೇ ಇರ್ತೇನೆ. ನನ್ನಿಂದ ನಿಮಗೆ ಯಾವ ತೊಂದರೆಯೂ ಆಗೋದಿಲ್ಲ."

ಮೀನಾಕ್ಷಕ್ಕ ಯಾವ ಭೇದ ಭಾವವೂ ಇಲ್ಲದೆ ಹೇಳಿದರು:

"ನನಗೆ ಯಾವ ತೊಂದರೆಯೂ ಇಲ್ಲ."

ಪರಟು ತೆಗೆದು ಗೋಡೆಯ ತಟ್ಟೆಯಲ್ಲಿದ್ದ ಮೊಳೆಗೆ ತೂಗು ಹಾಕಿ. ಹೋಲ್ಡಾಲ್ ಕಟ್ಟು ಬಿಚ್ಚಿ ಅದರ ತುದಿಯಲ್ಲಿ ಕುಳಿತುಕೊಂಡ.

ಆತ ಪೆಟ್ಟಿಗೆಯನ್ನು ತೆರೆದು ಒಂದು ಹತ್ತು ರೂಪಾಯಿಯ ನೋಟನ್ನು ಮೀನಾಕ್ಷ-ಕ್ಕನ ಕೈಯಲ್ಲಿ ಕೊಟ್ಟು ಹೇಳಿದ:

"ಅತ್ಯಾವಶ್ಯಕವಾಗಿ ಬೇಕಾದದ್ದನ್ನು ತರಿಸಿಕೊಳ್ಳಿ."

ರಾತ್ರಿ ಬೆಳದಿಂಗಳು ಹರಡಿತ್ತು. ಕನ್ಯಾ ಮಾಸದ ಬೆಳದಿಂಗಳು. ಅಪ್ಪುಣ್ಣಿ ಊಟ ಮಾಡಿ ಕೈಯಾಲೆಯ ಹೊರಗೆ ಬಂದ.

ಕೈಯಾಲೆಯ ಹಿಂದೆ ನಾಗಬನ. ಅದರ ನಡುವಿನಲ್ಲಿ ಬಹುದೊಡ್ಡ ಮರ. ಕತ್ತಿಯ ಅಲಗಿನಂತೆ ಹೊಳೆಯುವ ಬೆಳ್ದಿಂಗಳಲ್ಲಿ ಒಂದು ಭೀಕರ ರೂಪವನ್ನು ಆ ಮರ ನಿರ್ಮಿಸಿತ್ತು.

ಬೆಳದಿಂಗಳಿನಲ್ಲಿ ಸರ್ಪಗಳು ಹೆಡೆಬಿಚ್ಚಿ ಆಡುತ್ತವೆಂದು ಚಿಕ್ಕಂದಿನಲ್ಲಿ ಕೇಳಿದ ಕಥೆ ನೆನಪಾಯಿತು. ಅಲೆಗಳ ಶಬ್ದವಿಲ್ಲದ ಪ್ರಶಾಂತತೆಯ ಒಂದು ಸಮುದ್ರ ಸುತ್ತಲೂ, ತನಗರಿಯದಂತೆ ಅವ್ಯಕ್ತವಾದ ಗಾನದ ಹಾಗೆ ಒಂದು ವಿಷಾದ ಧಾರೆ ಅವನ ಹೃದಯಕ್ಕೆ ನುಗ್ಗಿ ಬರುತ್ತಿತ್ತು.

ಹೊರಟು ಬರುವಾಗ ಇದ್ದ ಆವೇಶವೆಲ್ಲ ಇಳಿದು ಹೋದಂತೆ ತೋರಿತು.

ಐದು ವರ್ಷಗಳ ನಂತರ ಅಪ್ಪುಣ್ಣಿ ಊರಿಗೆ ಹಿಂದಿರುಗಿ ಬಂದ ವಿಷಯ ಮಾರನೆಯ ದಿನವೇ ಊರಿನಲ್ಲೆಲ್ಲ ಹರಡಿ ಹೋಗಿತ್ತು.

ಹಿಂದಿನ ಅಪ್ಪುಣ್ಣಿಯಲ್ಲ ಬಂದಿರುವುದು. ಟೀ ತೋಟದಲ್ಲಿ ಉದ್ಯೋಗಸ್ಥ. ಕೈಯಲ್ಲಿ ಹಣವಿದೆ. ಪ್ರತಿದಿನ ಹತ್ತು ರೂಪಾಯಿ ನೋಟನ್ನು ಮೀನಾಕ್ಷಿ ಅಕ್ಕ ಹೊಲೆಯರ ಹುಡುಗನ ಹತ್ತಿರ ಅಂಗಡಿಗೆ ಕೊಟ್ಟು ಕಳುಹಿಸುತ್ತಿದ್ದಾಳೆ, ಎನ್ನುವ ಮಾತುಕಥೆ ಊರಿನಲ್ಲೆಲ್ಲ ಹರಡಿತು. ಮೀನಾಕ್ಷಿ ಅಮ್ಮನಿಗೆ ಬಂದ ಒಳ್ಳೆಯ ಕಾಲವನ್ನು ಕುರಿತು ಮಾತನಾಡಿಕೊಳ್ಳುತ್ತಿದ್ದ ಜನರೂ ಇದ್ದರು.

ಮೂರನೆಯ ದಿನ ಬೆಳಗಿನ ಹೊತ್ತು ಯಾರೋ ಅಪ್ಪುಣ್ಣಿಯನ್ನು ಕಾಣಲು ಬಂದಿದ್ದರು. ಒಬ್ಬ ವಯಸ್ಸಾದ ಮುದುಕಿ.

"ಯಾರು?"

ಅಪ್ಪುಣ್ಣಿ ಕೇಳಿದ. ಮೀನಾಕ್ಷಕ್ಕ ಹೇಳಿದರು:

"ಸಂಬಂಧಿಕರು."

"ಓಹೋ".

ಅಪ್ಪುಣ್ಣಿಯ ಹತ್ತಿರ ಬಂದು ಅವರ ನಿಂತಾಗ ಅವರ ಮುಖ ಅರಳಿತು. ಇನ್ನೇನು ಮಾತನಾಡಬೇಕು ಅನ್ನುವಷ್ಟರಲ್ಲಿ ಶಾಂತವಾಗಿ ಅಪ್ಪುಣ್ಣಿ ಕೇಳಿದ:

"ಏನು?"

"ಯಾರಪ್ಪ ಇದು? ಗೊತ್ತು ಮಾಡೋದಕ್ಕೇ ಆಗೋದಿಲ್ಲ. ಸಂಪೂರ್ಣವಾಗಿ ಬದಲಾಯಿಸಿ ಬಿಟ್ಟಿದ್ದೀ?"

ಅಪ್ಪುಣ್ಣಿ ಅದಕ್ಕೇನೂ ಉತ್ತರ ಕೊಡಲಿಲ್ಲ.

"ನಿಮಗೆ ಹಾಗೆಲ್ಲ ನಾವು ನೆನಪಾಗೋದಿಲ್ಲ. ನೀವೆಲ್ಲ—"

"ನಾನೊಂದನ್ನೂ ಮರೆತಿಲ್ಲ."

"ಬಂದ ಸುದ್ದಿ ಕೇಳಿ ಬಂದೆ."

"ಯಾಕೆ?"

ಯಾವ ಆತ್ಮೀಯತೆಯನ್ನು ತೋರಿಸಿಕೊಳ್ಳದೆ ಅಪ್ಪುಣ್ಣಿ ಕೇಳಿದ.

"ಕೈಲಾಗದ ಕಾಲ ಬಂತು. ನೀವೇ ತಾನೇ ಆಶ್ರಯ. ಎಲೆ ಅಡಿಕೆಕೊಂಡು ಕೊಳ್ಳೋದಕ್ಕೆ ಕೂಡ ಗತಿಯಿಲ್ಲದ ಹಾಗಾಯ್ತು. ಏನಾದರೂ ಅನುಕೂಲ ಮಾಡಿಕೊಡ-ಬೇಕು."

ಪ್ರೀತಿ ಬೆರೆತ ಒಂದು ಅಧಿಕಾರವಾಣಿಯಲ್ಲಿ ಅವನು ನಗುತ್ತಾ ಹೇಳಿದನು:

"ನೀವು ನನ್ನನ್ನ ಹುಡುಗನಾಗಿದ್ದಾಗ ನೋಡಿದ್ದಿರಾ?"

"ಯಾಕೆ ಹಂಗೆಲ್ಲ ಕೇಳ್ತೀಯಾ?"

"ನೀವು ನನ್ನನ್ನು ಕಂಡದ್ದುಂಟೆ? ನನ್ನ ಹತ್ತಿರ ಮಾತಾಡಿದ್ದುಂಟೇ ಅಂತ. ನಿಮಗೂ ನನಗೂ ಏನು ಸಂಬಂಧ?"

ಅವರ ನಗು ನಿಂತಿತು.

"ನಾವೆಲ್ಲ ಒಂದೇ ಮನೆತನದವರು. ರಕ್ತ ಸಂಬಂಧ ಹೋದೀತಾ?"

"ಈ ಸಂಬಂಧ ನಿನ್ನೆ ದಿನ ಉಂಟಾದದ್ದಲ್ಲವಾ? ಸುಮ್ಮನೆ ಹೋಗಿ. ನನ್ನಿಂದ ಏನೂ ಸಿಕ್ಕಲಾರದು."

ಅವರು ಮತ್ತ ಮಾತನಾಡುವುದಕ್ಕೆ ಅಲ್ಲಿ ನಿಲ್ಲಲಿಲ್ಲ. ಮೀನಾಕ್ಷಕ್ಕನ ಹತ್ತಿರವೂ ಅಜ್ಜಿಯ ಹತ್ತಿರವೂ ಹೇಳಿ ಹೋಗುವುದನ್ನು ಮರೆತು ಹೊರಟು ಹೋದಾಗ ಅಪ್ಪುಣ್ಣಿ ಹೇಳಿದ:

"ರಕ್ತ ಸಂಬಂಧದ ಹಕ್ಕು."

* * * * *

ಅದೇ ದಿನ ಕೃಷ್ಣನ್‌ಕುಟ್ಟಿಯೂ ಬಂದದ್ದು. ಕೆಂಪು ಟ್ರಾಸರ್ ಹಾಕಿಕೊಂಡು ಓಡಾಡುತ್ತಿದ್ದ ಕೃಷ್ಣನ್‌ಕುಟ್ಟಿ ಈಗ ಬೆಳೆದಿದ್ದಾನೆ.

"ಏನು ಕೃಷ್ಣನ್‌ಕುಟ್ಟಿ?"

"ಏನೂ ಇಲ್ಲ."

"ಸೌಖ್ಯವಾಗಿದ್ದೀ ತಾನೆ?"

"ಹೌದು."

ಅಲ್ಲಿಗೆ ಆ ಸಂಭಾಷಣೆಯನ್ನು ನಿಲ್ಲಿಸಿದ. ಕೃಷ್ಣನ್‌ಕುಟ್ಟಿ ಸ್ವಲ್ಪ ಹೊತ್ತು ಸುಮ್ಮನೆ ಬೆರಳುಗಳ ನೆಟಿಗೆ ತೆಗೆಯುತ್ತಾ ನಿಂತಿದ್ದ. ಒಳಗೆ ಹೋಗಿ ಅಜ್ಜಿಯನ್ನು ಕಂಡು ಎರಡು

ನಿಮಿಷಗಳ ನಂತರ ಅವನು ಪುನಃ ಬಂದ. ಹತ್ತಿರ ಬಂದು ಸಂಕೋಚಪಟ್ಟುಕೊಂಡು ಹೇಳಿದ:

"ಅಮ್ಮ ಅಪ್ಪಣ್ಣ ಅಣ್ಣನ್ನ ಕರಕೊಂಡು ಬರಹೇಳಿದ್ದಾಳೆ."

"ಏನು ವಿಶೇಷ?"

"ಏನೂ ಇಲ್ಲ. ಇಲ್ಲಿ ಇರೋದಕ್ಕೆ ತೊಂದರೆಯಾದರೆ ಅಲ್ಲೇ ಬಂದಿರಲಿ ಅಂತ ಹೇಳಿದ್ದಾಳೆ."

"ನನಗೆ ಇಲ್ಲಿ ತುಂಬ ಅನುಕೂಲವಿದೆ."

ಕೃಷ್ಣನ್‌ಕುಟ್ಟಿ ಪುನಃ, "ಅಮ್ಮ ಒಂದು ಸಲ ಕಾಣಬೇಕು ಅಂತ ಹೇಳಿ ಕಳಿಸಿದ್ದಾಳೆ." ಎಂದ.

ಅಪ್ಪಣ್ಣ ಸಿಗರೇಟಿನ ತುಂಡನ್ನು ನೆಲಕ್ಕೆಸೆಯುತ್ತಾ ಮತ್ತೆ ಹೇಳಿದ: "ಅಮ್ಮನ ಹತ್ರ ಹೇಳು—ಅಷ್ಟೊಂದು ಕಾಣಬೇಕು ಅನ್ನುವ ಆಸೆಯಿದ್ದರೆ ಇಲ್ಲೇ ಬಂದು ಕಾಣಲಿ ಅಂತ".

ಬಾಡಿದ ಮುಖದ ಮೇಲೆ ಕಷ್ಟಪಟ್ಟು ನಗುವನ್ನು ತಂದುಕೊಂಡ. ಅವನ ಮುಖ ಬೆವರಿತ್ತು.

"ನಾನೆಷ್ಟೋ ಸಲ ಕಂಡಿಲ್ಲವ?"

ಎರಡು ದಿವಸಗಳ ನಂತರ ಸಂದರ್ಶಕರಾರೂ ಇರಲಿಲ್ಲ. ಹೊಳೆ ಪಕ್ಕದ ಅಬೂಬಕರ್ ತನ್ನನ್ನು ಕಾಣಲು ಬಂದಿದ್ದ. ಬರುವಾಗ ಒಂದು ಹುಲಿ ಮೀನನ್ನು ಹಿಡಿದುಕೊಂಡು ಬಂದಿದ್ದ. ಮೀನಾಕ್ಷಕ್ಕನಿಗೆ ಅವರ ಬೆಲೆ ಕೊಡುವುದಕ್ಕೆ ಹೇಳಿದ.

ಹಗಲಿಡೀ ಕೈಸಾಲೆಯಲ್ಲಿ ಕುಳಿತು ಏನಾದರೂ ಓದುತ್ತಿದ್ದ. ಸಾಯಂಕಾಲ ಹೊರಗೆ ಎಲ್ಲಿಯಾದರೂ ಸ್ವಲ್ಪ ದೂರ ಹೋಗಿ ತಿರುಗಾಡಿಕೊಂಡು ಬರುತ್ತಿದ್ದ.

ಮೀನಾಕ್ಷಕ್ಕ ಹಿಂದಿನಂತೆಯೇ ಮಾತಾಡಿಸಿದರೆ ಮಾತ್ರ ಮಾತಾಡುವುದು. ಹಗಲು ಹೊತ್ತು ಕಳೆಯುವುದೇ ಕಷ್ಟವಾಗಿತ್ತು.

ರಾತ್ರಿ ಊಟವಾದ ಮೇಲೆ ತುಂಬ ಹೊತ್ತು ಅಂಗಳದಲ್ಲಿ ತಿರುಗಾಡುತ್ತಿದ್ದ. ಅಂಗಳದ ಅಂಚಿನಲ್ಲಿ ಕತ್ತರಿಸಿ ಹಾಕಿದ ಒಂದು ಹಲಸಿನ ಮರದ ಮೋಟು ನಿಂತಿದೆ. ಅದರ ಮೇಲೆ ಕುಳಿತುಕೊಂಡು ರಾತ್ರಿಯ ಬೆಳದಿಂಗಳು ನೂಕಿದ ಕತ್ತಲೆಗೆ ಆಶ್ರಯವನ್ನು ನೀಡುತ್ತಿದ್ದ ನಾಗಬನದ ಕಡೆಗೆ ನೋಡುತ್ತ ಕುಳಿತಿದ್ದ.

ಅಲ್ಲಿ ಸರ್ಪಗಳು ಹೆಡೆಯೆತ್ತಿ ಆಡುತ್ತವೆಯೆ?

ಅದನ್ನು ನೆನೆಸಿಕೊಂಡಾಗಲೆಲ್ಲ ದೀಪದ ಕಾಂತಿಯಲ್ಲಿ ಆಡಿ ನಲಿದಾಡುವ ಒಂದು ಅರ್ಧ ನಗ್ನಳಾದ ಹುಡುಗಿಯ ಚಿತ್ರ ಕಣ್ಣೆದುರಿಗೆ ಬರುತ್ತದೆ......ಅವರನ್ನು ಕುರಿತು ವಿಚಾರಿಸಬೇಕು ಎನ್ನಿಸಿತ್ತು. ಕೇಳಿದರೆ ತಿಳಿಯುತ್ತದೆ. ಆದರೆ ಕೇಳಲಿಲ್ಲ.

ಹಿಂದಿನ ದಿನ ಮನೆಯ ಹಿಂದಿನ ಕಾಲು ದಾರಿಯಲ್ಲಿ ಹೊರಟು ಗುಡ್ಡದ ಮೇಲೆ ಹೋಗಿದ್ದಾಗ ಮೀನಾಕ್ಷಕ್ಕನ ಹತ್ತಿರ ಕೇಳಿ ತಿಳಿದಿದ್ದ. ಹಳ್ಳದಿಂದ ಹಿಡಿದು ಚಾತಪ್ಪನ ಗುಡಿಸಿಲಿನ ವರೆಗಿರುವ ಕಣಿವೆಯನ್ನು ಆತನಿಗೆ ಬಿಟ್ಟಿದ್ದಾರೆ. ಉರುಟುಗಲ್ಲುಗಳೂ ಪುಲ್ಲಾನಿ ಪೊದರುಗಳೂ ತುಂಬಿದ್ದ, ಶೂನ್ಯತೆಯ ಸಾಮ್ರಾಜ್ಯದಂತಿದ್ದ ಆ ಭೂಮಿ ತನ್ನ ಮಣ್ಣು, ತನ್ನ ಸ್ವಂತ ಭೂಮಿ.

ಆಸ್ತಿಯನ್ನು ಪಾಲು ಮಾಡಿಕೊಂಡಿದ್ದ ವಿಷಯವನ್ನು ಆಗಲೇ ಮೀನಾಕ್ಷಕ್ಕ ಹೇಳಿದ್ದುದರಿಂದ ಎಲ್ಲವೂ ತಿಳಿದಿತ್ತು. ವಡಕ್ಕೇ ಪಾಟ್ ಇಡೀ ದೊಡ್ಡ ಮಾವನ ಸ್ವಂತ ಸ್ವತ್ತೆಂದು ತೀರ್ಮಾನವಾಯಿತು. ದೊಡ್ಡಮ್ಮನಿಗೂ ಮಕ್ಕಳಿಗೂ ನಾಲ್ಕು ಪಾಲು ಬಂದಿತು. ದೋಣಿ ಕಡವಿನಿಂದ ಹಿಡಿದು ಪುಂಜಪ್ಪಾಡದ ವರೆಗಿನ ಒಳ್ಳೆಯ ಭಾಗವೆಲ್ಲ ಅವರದಾಗಿತ್ತು. ಅದನ್ನೆಲ್ಲಾ ಗೇಣಿಗೆ ಕೊಟ್ಟಿದ್ದಾರೆ. ಬತ್ತಾಯದ ಮನೆಯನ್ನು ಕುಟ್ಟಿ ಮಾವ ತೆಗೆದುಕೊಂಡಿದ್ದಾರೆ.

ವಾದಿಸಲು ಯಾರೂ ಇಲ್ಲದವರಿಗೆ ಜೇಡದ ಭಾಗಗಳನ್ನು ತೆಗೆದಿಟ್ಟರು.

ಕಲ್ಲು ಬಂಡೆಗಳು, ಬರೀ ಹುಲ್ಲು ಮಾತ್ರ ಬೆಳೆಯುವಂಥ ಭೂಮಿಯನ್ನು ಮಂಟಿಯ ಭಾಗವನ್ನು ಅಪ್ಪುಣ್ಣಿಗೆ ಬಿಟ್ಟಿದ್ದರು. ಆ ಕೆಂಪು ಮಣ್ಣು ಯಾರೂ ಮಾತ-ನಾಡಿಸದೆ ನೂರಾರು ವರ್ಷಗಳಿಂದ ಹಾಗೇ ಬಿದ್ದಿದೆ. ಅದರ ಮಧ್ಯೆ ನಿಂತಾಗ ಆ ಮಣ್ಣಿ-ನಲ್ಲಿ ಬೆಳೆ ಒಂದು ಕಾಲಕ್ಕೆ ಎದ್ದು ನಿಲ್ಲಲೂಬಹುದು ಎನ್ನಿಸಿತು.

ದೂರದಲ್ಲಿ ನದೀ ತೀರದ ಹತ್ತಿರ ಕಾಣುವ ದಿಗಂತದ ಕಡೆಗೆ ಕಣ್ಣಾಡಿಸುತ್ತ ಅವನು ನಿಂತ.

ಗುಡ್ಡದ ಕೆಳಗಿನಿಂದ ಟೊಪ್ಪಿ ಕೊಡೆ ಧರಿಸಿದ್ದ ಒಬ್ಬ ಮನುಷ್ಯ ಗುಡ್ಡ ಹತ್ತಿ ಬರು-ತ್ತಿದ್ದರು. ಹತ್ತಿರ ಬಂದಾಗ ತಿಳಿಯಿತು. ಕುಟ್ಟಿ ಮಾವ. ಮುಖದಲ್ಲಿ ಹಿಂದಿನ ಒರಟುತನ ವಿಲ್ಲ. ಮುಖ ಅರಳಿಸಿಕೊಂಡು ಅವರು ಹತ್ತಿರ ಬಂದದ್ದು. ಹತ್ತಿರಕ್ಕೆ ಬಂದಾಗ ಟೊಪ್ಪಿ ಕೊಡೆಯನ್ನು ತಲೆಯಿಂದ ತೆಗೆದು ಕೆಳಗಿರಿಸಿ ಕೇಳಿದರು:

"ಅಪ್ಪುಣ್ಣಿ ಯಾವಾಗ ಬಂದದ್ದು?"

"ನಾಲ್ಕು ದಿನ ಆಯ್ತು."

"ಮೀನಾಕ್ಷಿ ಹೇಳಿದಳು. ನೀನು ಗುಡ್ಡದ ಹತ್ತಿರಕ್ಕೆ ಹೋಗಿದ್ದೀ ಅಂತ. ಅಲ್ಲಿಯಾಗಿ-ದ್ದಿದ್ದರೆ ಸರಿಯಾಗಿ ಮಾತಾಡೋದಕ್ಕಾಗಿರಲಿಲ್ಲ. ಒಳ್ಳೆಯದಾಯ್ತು."

ಆಗ ಕೆಲವು ವಿಷಯಗಳನ್ನು ಮಾತನಾಡುವುದಕ್ಕೆ ಸಿದ್ಧವಾಗಿ ಬಂದಿದ್ದಾರೆಂದು ಅಪ್ಪುಣ್ಣಿ ಭಾವಿಸಿದ.

"ಏನು?"

"ಒಂದು ಸಲ ಕಾಣಬೇಕು ಅಂದುಕೊಂಡೆ."

ಕಂಡು ಆಯ್ತಿಲ್ಲ, ಇನ್ನು ಹೋಗಿ ಅನ್ನಬೇಕು ಎನ್ನಿಸಿತ್ತು ಮೊದಲು. ಆದರೆ ಅಪ್ಪಣ್ಣಿ ತಡೆದುಕೊಂಡ.

"ಪಾಲಾದ ಮೇಲಿನ ಸ್ಥಿತಿ ತೀರ ಕೆಟ್ಟು ಹೋಯ್ತು."

"ಯಾರ ಸ್ಥಿತಿಯೂ ಚೆನ್ನಾಗಿಲ್ಲ."

"ನಾನೂ ಮಾಳೂನೂ ಈಗ ಇರೋದು ಆ ಬಡಗು ಮನೆ ಕುಟ್ಟಾಪ್ಪುನ ಮನೆಯಲ್ಲಿ."

"ಗೊತ್ತಾಯ್ತು."

"ನನಗೆ ಈಗ ಹಿಂದಿನ ಹಾಗೆ ಕೆಲಸ ಮಾಡೋದಕ್ಕಾಗೋದಿಲ್ಲ. ಆ ಹೆಣ್ಣಿನ ಸ್ಥಿತಿ ಆಲೋಚಿಸಿದಾಗ ನನಗೆ ತುಂಬ ಸಂಕಟವಾಗುತ್ತೆ."

ಅದಕ್ಕೆ "ಹ್ಞೂಂ" ಎಂದ ಅಪ್ಪೆ.

"ಅವಳಿಗೆ ನೀನು ಅಂದರೆ ಪ್ರಾಣ......"

"ಅದಕ್ಕೆ ನಾನೇನು ಮಾಡಬೇಕು ಅಂತೀರಿ?"

"ಅವಳಿಗೆ ನೀನೇ ಆಶ್ರಯ ನೀಡಬೇಕು."

ಅಪ್ಪಣ್ಣಿಯ ಮನಸ್ಸಿನಲ್ಲಿ ಹಿಂದಿನ ನೆನಪುಗಳೆಲ್ಲವೂ ಸುಂಟರ ಗಾಳಿಯಂತೆ ಬೀಸಿ ಬಂದುವು. ನಿಧಾನವಾಗಿ ಆತ ಹೇಳಿದ:

"ನಾನು ಡಿಪ್ಟಿ ಕಮಿಶನರ್ ಆಗಿಲ್ಲವಲ್ಲ."

ಕುಟ್ಟಿ ಮಾವನ ಮುಖ ಚಿಕ್ಕದಾಯಿತು.

"ಯಾಕೆ ಅಪ್ಪಣ್ಣಿ ಹಾಗಂತೀ?"

"ನನ್ನ ವಿಷಯವಾಗಿ ತಿರುಗಿ ಮಾತೆತ್ತಬೇಡಿ."

ಆತ ಟೊಪ್ಪಿ ಕೊಡೆಯನ್ನು ತಲೆಯ ಮೇಲಿಟ್ಟುಕೊಂಡು ಗುಡ್ಡ ಇಳಿದು ಹೋಗುವಾಗ ಅಪ್ಪಣ್ಣಿಗೆ ಕ್ರೂರವಾದ ಒಂದು ಆನಂದವುಂಟಾಯಿತು. ದೂರದಲ್ಲಿ ಕಾಣುವ ನದೀ ತೀರದ ಕಡೆಗೆ ನೋಡುತ್ತ ಮತ್ತು ಸ್ವಲ್ಪ ಹೊತ್ತು ಕುಳಿತಿದ್ದ ಅಪ್ಪಣ್ಣಿ.

ಮಾಳುವನ್ನು ಕುರಿತು ನೆನಸಿಕೊಂಡಾಗ ಅವನಿಗೆ ಅಯ್ಯೋ ಎನ್ನಿಸುತ್ತಿತ್ತು. ಪಾಪ ಏನೂ ತಿಳಿಯದ ಹುಡುಗಿ. ಆದರೆ—

ಆಲೋಚಿಸಿದಾಗ ಆತನಲ್ಲಿ ಒಂದು ರೀತಿಯ ಅಸಮಾಧಾನವುಂಟಾಗುತ್ತಿತ್ತು. ಪ್ರತೀಕಾರ ತೀರಿಸಿಕೊಂಡ ಆನಂದವನ್ನು ಅನುಭವಿಸುತ್ತಿದ್ದ.

ಮಾಳು ಈಗ ಬೆಳೆದಿರಬೇಕು. ಕೆಲವು ವರ್ಷಗಳ ಹಿಂದೆ ಮೊತ್ತ ಮೊದಲು ಇಲ್ಲಿಗೆ ಬಂದ ದಿನ ಮೂಡು ಭಾಗದ ಅಂಗಳದಲ್ಲಿ ಕುಳಿತಿದ್ದಾಗ ಹತ್ತಿರ ಬಂದು ಮಾತನಾಡಿಸಿದ. ಆ ಕಪ್ಪು ದೇಹದ, ಕೋಲು ಮುಖದ ಹೆಣ್ಣಿನ ಚಿತ್ರ ಕಣ್ಣಮುಂದೆ ಬಂದಿತು. ಅವಳ ವಿಷಯವಾಗಿ ಅನುಕಂಪವಿದೆ. ಆದರೆ ಅದಕ್ಕಿಂತಲೂ ಹೆಚ್ಚಾಗಿ ಏನನ್ನೂ ವ್ಯಕ್ತಪಡಿಸಲಾರ.

ಬಿಳಿ ಮೋಡಗಳ ಮಧ್ಯೆ ಹೊಳೆಯುವ ಚಂದ್ರ ಕಾಂತಿ ಪ್ರಸರಿಸಿದಾಗ ಆತ ಮನೆಗೆ ಹಿಂದಿರುಗಿದ್ದ.

ಹಾಸಿಗೆಯ ಮೇಲೆ ಉರುಳಿಕೊಂಡಾಗ ಆತನ ಮನಸ್ಸಿನಲ್ಲಿ ಕೆಲವು ಮುಖಗಳು ಕಾಣಿಸಿಕೊಂಡುವು. ಕಾಡಿಗೆ ಹಚ್ಚಿದ ಅರೆಮುಚ್ಚಿದ ಕಣ್ಣುಗಳೂ, ಕರಿಯ ಸರ್ಪಗಳು ಹೆಡೆಯೆತ್ತಿ ಆಡಿದಂತೆ ಹೊಳೆಯುತ್ತಿದ್ದ ಸಮೃದ್ಧವಾದ ತಲೆಗೂದಲಿದ್ದ ಒಂದು ಹುಡುಗಿಯ ಚಿತ್ರ—

ಆಶ್ಚರ್ಯವೂ ವೇದನೆಯೂ ವ್ಯಕ್ತವಾಗುವ ಕಣ್ಣುಗಳ, ಕಪ್ಪನೆಯ ಕೋಲು ಮುಖದ ಮತ್ತೊಂದು ಹುಡುಗಿಯ ಚಿತ್ರ—ರಾತ್ರಿಯ ಹೊತ್ತಿನಲ್ಲಿ ಪಡು ದಿಕ್ಕಿನಲ್ಲಿ ಮೋಡಗಳ ಹಿಂದೆ ಅರೆ ಮರೆಯಾದ ಚಂದ್ರಕಾಂತಿಯನ್ನು ಅನುಸ್ಮರಣೆಗೊಳಿಸುತ್ತಿದ್ದ ಇನ್ನೊಂದು ಹುಡುಗಿಯ ಚಿತ್ರ. ಹೊಳೆಯುತ್ತ ಮರೆಯಾಗುತ್ತ ಇದ್ದ ಆ ಮುಖಗಳನ್ನು ಕಾಣುತ್ತ ಆತ ಮಲಗಿದ.

ಅವನು ಊರಿಗೆ ಬಂದ ಮಳನೆಯ ದಿನ ಅದು. ಆ ದಿನ ಬೆಳಗ್ಗೆ ದೊಡ್ಡ ಮಾವ ಅಲ್ಲಿಗೆ ಬಂದು ಕಾಣಿಸಿಕೊಂಡರು. ಹೊರಗೆ ಸಿಗರೇಟು ಸೇದುತ್ತ ಅತ್ತಿತ್ತ ತಿರುಗಾಡುತ್ತಿದ್ದಾಗ ಚೌಕಟ್ಟಿನ ಮನೆಯ ಮುಂಭಾಗದಿಂದ ಮರದ ಪಾದರಕ್ಷೆಗಳ ಸಪ್ಪಳ ಕೇಳಿಸಿತು. ಕೈಯಾಲೆಯ ಮುಂಭಾಗದಲ್ಲೇ ಬರುತ್ತಿದ್ದರು.

"ಅಪ್ಪಣ್ಣೇ"

ಮೊತ್ತ ಮೊದಲಾಗಿ ಆತನ ಹೆಸರನ್ನು ಹಿಡಿದು ಕರೆಯಲು ದೊಡ್ಡ ಮಾವನ ನಾಲಗೆ ಹಿಡಿಯುತ್ತಿತ್ತು.

ಚೂರಿಯಲ್ಲಿ ಚುಚ್ಚಿದ ಹಾಗಾಯಿತು ಅಪ್ಪಣ್ಣನಿಗೆ.

"ಅಪ್ಪಣ್ಣಿ ಸ್ವಲ್ಪ ಈಕಡೆ ಬರ್‍ತೀಯಾ?"

"ಯಾಕೆ?"

"ಇಲ್ಲಿ ಅಂಗಳಕ್ಕೆ ಬಾ" ತುಂಬ ಶಾಂತವಾಗಿ ಕರೆದರು. ಗುಡುಗಿನ ಧ್ವನಿಯಲ್ಲಿ ಮಾತ್ರ ಮಾತನಾಡುತ್ತಿದ್ದ ದೊಡ್ಡ ಮಾವನೇನಾ ಇದು?

"ಇಲ್ಲೇ ನಿಂತರೂ ಸಾಕು."

ಜಾಲಿಯ ಆಚೆಕಡೆ ಅವರು ನಿಂತರು. ಅಪ್ಪಣ್ಣ ಸಂಪೂರ್ಣವಾಗಿ ಆಕ್ರೋಶಕ್ಕೊಳಗಾಗಿದ್ದ. ತನ್ನ ಅಸಮಾಧಾನವನ್ನು ಬೆರಳುಗಳನ್ನು ಹೊಸಗುವುದರ ಮೂಲಕ ವ್ಯಕ್ತಪಡಿಸುತ್ತ ನಿಂತಿದ್ದ.

ದೊಡ್ಡ ಮಾವನ ಮುಖದಲ್ಲಿ ಹಿಂದಿನ ಪ್ರತಾಪಗಳೇನೂ ಕಾಣುತ್ತಿಲ್ಲ. ಶರೀರವೂ ಮನಸ್ಸೂ ದುರ್ಬಲಗೊಂಡಿವೆ ಎನ್ನುವುದು ಸ್ಪಷ್ಟವಾಗುತ್ತಿತ್ತು. ಅಪ್ಪಣ್ಣನಯ ಕಣ್ಣುಗಳ ಕಡೆಗೆ ನೇರವಾಗಿ ನೋಡುವುದಕ್ಕೂ ದೊಡ್ಡ ಮಾವ ಕಷ್ಟಪಡುತ್ತಿದ್ದಾರೆಂದು ತೋರಿತು.

"ಮೂರು ನಾಲ್ಕು ದಿನಗಳಿಂದಲೂ ಬರಬೇಕು ಅಂದುಕೊಂಡಿದ್ದೆ."

"ಹ್ಞುಂ"

ದೊಡ್ಡ ಮಾವನ ಮುಪ್ಪು ಆವರಿಸಿದ ಮುಖದ ಕಡೆಗೆ ನೋಡಿದಾಗ ಅಪ್ಪುಣ್ಣಿಯ ಮನಸ್ಸಿನಲ್ಲಿ ಹಿಂದಿನ ಚಿತ್ರಗಳೆಲ್ಲ ಒಂದೊಂದಾಗಿ ನೆನಪಾದುವು.

ಆದಿನ ಕುತ್ತಿಗೆ ಹಿಡಿದು ತಳ್ಳಿದರು......

ಹುಳಿತ ನಾಯಿಯನ್ನು ಓಡಿಸುವ ಹಾಗೆ......ಹಿತ್ತಿಲೊಳಕ್ಕೆ ಕಾಲಿರಿಸಿದರೆ ಕಾಲು ಮುರಿದು ಹಾಕಿಯೇನು ಎಂದ ಮನುಷ್ಯನೇ ಈಗ ತನ್ನ ಮುಂದೆ ಶಾಂತನಾಗಿ ನಿಂತಿದ್ದಾನೆ.

"ನಾನು ಬಂದದ್ದು ಒಂದು ಕೆಲಸಕ್ಕಾಗಿ"

"ಹೇಳಿ."

"ಪಾಲಾದಾಗ ಈ ಮನೆ ನಾನು ತೆಗೆದುಕೊಂಡೆ. ಕುಟುಂಬದ ಮನೆ ಅಲ್ಲವೆ? ಭಗವತಿ ಇರೋಸ್ಥಳವಲ್ಲವೆ? ಪರಾಧೀನ ಮಾಡಬಾರದು ಅಂತ ಭಾವಿಸಿದೆ."

"ಅದು ಒಳ್ಳೇದೇ ಆಯ್ತು."

ಆ ಮನೆ, ಭಗವತಿ ಇರೋ ಮನೆ ಎಲ್ಲವನ್ನೂ ಐದು ನೂರು ರೂಪಾಯಿಗೆ ಭೋಗ್ಯ ಹಾಕಿದ್ದೇನೆ. ಅದು ಈಗ ಕಷ್ಟಕ್ಕೆ ಬಂದಿದೆ."

ಅಪ್ಪುಣ್ಣಿ ಮೌನವಾಗಿ ಕೇಳಿಸಿಕೊಳ್ಳುತ್ತಿದ್ದ. ಕೆಲವು ನಿಮಿಷಗಳು ಅನುಮಾನಿಸುತ್ತಾ ನಿಂತಿದ್ದು ಆಮೇಲೆ ದೊಡ್ಡ ಮಾವ ಹೇಳಿದರು.

"ಹತ್ತನೇ ತಾರೀಕಿನೊಳಗೆ ಹಣ ಜೊತೆಯಾಗದಿದ್ದರೆ ಮನೆ ಖಾಲಿ ಮಾಡಬೇಕು ಅಂತ ತೀರ್ಮಾನ ಆಗಿದೆ. ಎಷ್ಟಾದರೂ ನಮ್ಮ ಕುಟುಂಬದ ಮನೆ ಅಲ್ಲವೆ?"

ಅಪ್ಪುಣ್ಣಿ ಮತ್ತೆ ಹ್ಞೂಂಗುಟ್ಟಿದ.

"ಕೊಂಡು ಕೊಳ್ಳೋದಕ್ಕೆ ಮಾಪಿಳ್ಳೆಗಳಿದ್ದಾರೆ. ಆದರೆ ಭಗವತಿ ಇರೋ ಸ್ಥಳ. ಮಾಪಿಳ್ಳೆಗೆ ಹೇಗೆ ಕೊಡೋದು?"

ಅವರ ವೇದನೆಯ ಧ್ವನಿ ಮೂರ್ಧನ್ಯಕ್ಕೆ ತಲಪಿದಾಗ ಅಪ್ಪುಣ್ಣಿ ಗಂಟಲತ್ತರಿಸಿ ಕೇಳಿದ:

"ಅದಕ್ಕೆ ನಾನೇನು ಮಾಡಬೇಕು?"

"ನಿನ್ನ ಹತ್ರ ಹಣ ಇದೆ ಅಂತ ಕೇಳಿದೆ. ಐನೂರು ರೂಪಾಯಿ ಸಾಲವಾಗಿ ಕೊಟ್ಟಿರು. ಡಿಮಾಂಡ್ ನೋಟು ಬೇಕಾದರೂ ಬರೆದು ಕೊಡ್ತೀನಿ."

ಬೇಲಿಯ ಗಿಡದ ತುದಿಯನ್ನು ಸವರುತ್ತ ಆ ಮುದುಕನ ಚಿತ್ರ ಮರೆಯಾಗಿ, ಪಡಸಾಲೆಯಿಂದ ಕುತ್ತಿಗೆ ಹಿಡಿದು ನೂಕಿ, ಕೈತೋರಿಸಿ ಹೇಳಿದ ಆ ದೊಡ್ಡ ಮನುಷ್ಯನ ಚಿತ್ರವೇ ಕಣ್ಣೆದುರಿಗೆ ಬಂದಿತು.

"ಈ ಚೌಕಟ್ಟಿನ ಮನೆ ಶಾಶ್ವತವಾಗಿ ಉಳಿಯಬೇಕು ಅಂತ ನನಗೇನೂ ಆಶೆಯಿಲ್ಲ"

ಅಪ್ಪುಣ್ಣಿ ಸಿಟ್ಟಿನಿಂದ ಹೇಳಿದ.

"ಏನು ಹೇಳಿದೆ ಅಪ್ಪುಣ್ಣೀ?"

"ಮತ್ತೂ ಒಂದು ಸಲ ಹೇಳ್ತೀನಿ. ಈ ಚೌಕಟ್ಟಿನ ಮನೆ ಶಾಶ್ವತವಾಗಿರಬೇಕೂಂತ ನನಗೆ ಯಾವ ಆಶೆಯೂ ಇಲ್ಲ ಅಂತ. ಇಲ್ಲಿಂದ ನನ್ನ ಕುತ್ತಿಗೆ ಹಿಡಿದು ನೂಕಿದ್ದನ್ನ ನೀವು ಮರೆತಿರಬಹುದು. ಆದರೆ ನನಗೆ ಮರೆಯೋದಕ್ಕಾಗೋದಿಲ್ಲ."

ನಿಶ್ಶಬ್ದತೆ ಅವರ ಮಧ್ಯೆ ಆವರಿಸಿತ್ತು. ಗದ್ಗದ ಕಂಠದಲ್ಲಿ ದೊಡ್ಡ ಮಾವ ಹೇಳಿದರು:

"ಅದೆಲ್ಲ ನಡೆದು ಹೋಯ್ತು. ಅದನ್ನು ಕುರಿತು ನನಗೂ ದುಃಖವುಂಟು. ಆಗಿ ಹೋದದ್ದನ್ನೆಲ್ಲ ಮರೆತುಬಿಡು ಅಪ್ಪುಣ್ಣೀ"

"ಅದು ಅಷ್ಟು ಸುಲಭವಲ್ಲ."

"ಯಾವ ದಾರಿಯೂ ತೋರದೇ ಇದ್ದಾಗ ನೀನು ಬಂದ ಸುದ್ದಿ ಕೇಳಿ ಬಂದೆ. ಪುರಾತನ ಕಾಲದಿಂದ ಬಾಳಿ ಬದುಕಿದ ಮನೆ."

"ನನ್ನ ಹತ್ತಿರ ಹಣವೇನೋ ಇದೆ. ಆದರೆ ಸದ್ಯದಲ್ಲಿ ಕೊಡುವ ಆಲೋಚನೆ ಯಿಲ್ಲ."

ಬೇಲಿಯ ಗಿಡಗಳ ತಲೆಯ ಮೇಲೆ ಕೈಯಾಡಿಸುತ್ತ ದೊಡ್ಡ ಮಾವ ತಲೆತಗ್ಗಿಸಿ-ಕೊಂಡು ನಿಂತಿದ್ದರು. ಅಪ್ಪುಣ್ಣಿಯೂ ನೆಲದ ಕಡೆಗೆ ನೋಡುತ್ತ ನಿಂತುಕೊಂಡಿದ್ದ......

ಮೆಲ್ಲ ಮೆಲ್ಲನೆ ದೊಡ್ಡ ಮಾವ ನಡೆದು ಹೋಗುತ್ತಿದ್ದಾಗ ಅಪ್ಪುಣ್ಣಿ ಕರೆದ.

"ನಿಲ್ಲಿ."

ದೊಡ್ಡ ಮಾವ ಹಿಂದಿರುಗಿ ನಿಂತರು.

"ಮಾಪಿಳ್ಳೆಗೆ ಮಾರೋದಕ್ಕಲ್ವೇ ನಿಮಗೆ ಬೇಸರ? ನಾನು ಕೊಂಡುಕೊಳ್ಳೋ-ದಾದರೆ?"

ದೊಡ್ಡ ಮಾವ ದಿಗ್ಭ್ರಾಂತರಾದರು. ಕಂಬದ ಹಾಗೆ ನಿಂತಿದ್ದು ಆ ಮೇಲೆ ಹೇಳಿದರು;

"ಆಲೋಚನೆ ಮಾಡ್ತೀನಿ."

"ಆಲೋಚನೆ ಮಾಡಿ ಆಗಿಲ್ಲವೆ? ಈಗ, ಈ ನಿಮಿಷದಲ್ಲಿ ತೀರ್ಮಾನಿಸಬೇಕು. ನನ್ನ ಕೈಯಲ್ಲಿ ಇದನ್ನ ಕೊಂಡು ಕೊಳ್ಳೋದಕ್ಕೆ ಆಗ್ತದೋ ಇಲ್ಲವೋ ನೋಡ್ತೀನಿ."

"ಮನೆಗೆ ಮತ್ತು ಜಮೀನಿಗೆ ಒಟ್ಟಿಗೆ ಎಷ್ಟು ಬೆಲೆ ಹೇಳಿ?"

ದೊಡ್ಡ ಮಾವ ಮಾತನಾಡುವುದಕ್ಕೆ ಹಿಂದೆ ಮುಂದೆ ಆಲೋಚಿಸುತ್ತಿದ್ದಾಗ ಅಪ್ಪುಣ್ಣಿ:

"ಹೇಳಿ, ಇದು ವ್ಯಾಪಾರ. ಸಾಧ್ಯವಾಗಬಹುದು ಅನ್ನಿಸಿದರೆ ನಾನು ಕೊಂಡು ಕೊಳ್ತೀನಿ."

ದೊಡ್ಡ ಮಾವ ಮತ್ತೂ ಸಂಶಯಗೊಂಡು ನಿಂತಿದ್ದಾಗ ಅಪ್ಪುಣ್ಣಿಗೆ ವಿಪರೀತ ಸಿಟ್ಟುಬಂದಿತು.

"ಯಾಕೆ ಅಪ್ಪುಣ್ಣಿಯ ಪಣಕ್ಕೆ ಬೆಲೆ ಇಲ್ಲ ಅಂತಲಾ?"

"ಹಾಗೇನೂ ಅಲ್ಲ."

"ಹಾಗಿದ್ದರೆ ಹೇಳಿ. ಈ ಮನೆಗೆ ಬೆಲೆ ಹೇಳುವಾಗ ಮುರಿದು ಬೀಳ್ತಾ ಇರೋಮನೆ ಅನ್ನೋದನ್ನ ದೃಷ್ಟಿಯಲ್ಲಿಟ್ಟುಕೊಂಡು ಹೇಳಿ."

"ನಾಲ್ಕು ಸಾವಿರಕ್ಕೆ ಪೋಟ್ಕುರ ಹಾಜಿ ಕೇಳಿದ್ದ......"

ಅಪ್ಪುಣ್ಣಿ ಆಲೋಚಿಸಿ ಹೇಳಿದ:

"ಗಾಳಿ ಬೆಳಕಿಲ್ಲದ ಈ ಮನೆಯಲ್ಲಿ ಮನುಷ್ಯರು ವಾಸ ಮಾಡೋದಕ್ಕೆ ಸಾಧ್ಯವಿಲ್ಲ ಏನಿದ್ದರೂ ನಾನು ನಾಲ್ಕು ಸಾವಿರ ಕೊಡ್ತೀನಿ. ಸಮಾಧಾನವಿದ್ದರೆ ಪತ್ರ ಬರೆಸೋದಕ್ಕೆ ಏರ್ಪಾಟು ಮಾಡಿ."

ದೊಡ್ಡ ಮಾವನ ಕುತ್ತಿಗೆ ಮತ್ತಷ್ಟು ಬಾಗಿತು.

"ಏನು ತೀರ್ಮಾನಿಸಿದಿರಿ?"

ತುಂಬ ಕಷ್ಟಪಟ್ಟು ದೊಡ್ಡ ಮಾವ ಹೇಳಿದರು:

"ಆಯ್ತು."

"ಹಾಗಿದ್ದರೆ ಪತ್ರ ಬರೆಸೋ ಏರ್ಪಾಟು ಮಾಡಿ."

ನಿಧಾನವಾಗಿ ಹೆಜ್ಜೆಯಿರಿಸುತ ಹೋದಾಗ ಆ ಮರದ ಪಾದರಕ್ಷೆಯ ಶಬ್ದ ಕ್ರಮೇಣ ದೂರವಾಗುತ್ತಿದ್ದುದನ್ನು ಕೇಳಿಸಿಕೊಳ್ಳುತ್ತ ಆತ ಅಲ್ಲಿಂದ ಹಿಂದಿರುಗಿದ.

ಪಡಸಾಲೆಯ ಒಳಗೆ ಬಂದು ಉರುಳಿಕೊಂಡಾಗ ಮೀನಾಕ್ಷಿ ಅಕ್ಕ ಕೇಳಿದಳು:

"ಹೋದರಾ?"

"ಹೋದರು."

"ಮಾವನಿಗೆ ಎಲ್ಲ ರೀತಿಯಿಂದಲೂ ಕಷ್ಟದ ಕಾಲ ಇದು."

ಆ ರೀತಿ ಅನುಕಂಪವನ್ನು ವ್ಯಕ್ತಪಡಿಸಿದ್ದು ಅಪ್ಪುಣ್ಣಿಗೆ ಅಷ್ಟಾಗಿ ಹಿಡಿಸಲಿಲ್ಲ.

"'ಹೂದೋಟ'ದ ಆಸ್ತಿಯಿಲ್ಲವಾ?"

ಅದುಂಟು. ಒಳ್ಳೆ ದೇವತೆಯಾಗಿದ್ದಳು. ಅವಳೂ ಹೋದಳು.

"ಯಾರು?"

"ಅಪ್ಪುಣ್ಣಿಗೆ ಆ ವಿಷಯ ಗೊತ್ತಿಲ್ಲವಾ? ಮೊದಲನೆಯ ಹೆರಿಗೆ ಪಾಪ......"

"ಯಾರು ಮೀನಾಕ್ಷಕ್ಕ?"

"ಅಮ್ಮಿಣ್ಣಿಕುಟ್ಟಿ ಸತ್ತದ್ದು. ಕಳೆದ ಜ್ಯೇಷ್ಠ ಮಾಸದಲ್ಲಿ."

ಆತ ಮತ್ತೇನೂ ಮಾತನಾಡಲಿಲ್ಲ. ಮೆಲ್ಲನೆ ಕೈ ಊರಿಕೊಂಡು ಬಾಗಿಲಿನ ಹತ್ತಿರಕ್ಕೆ

ಬಂದ. ನಡುಗುವ ಬೆರಳುಗಳಿಂದ ಬಾಗಿಲಿನ ಪಟ್ಟಿಯನ್ನು ಹಿಡಿದುಕೊಂಡು ಕಣ್ಣೀರು ಸುರಿಸುತ್ತಾ ನಿಂತಿದ್ದಾಗ ಮೀನಾಕ್ಷಿ ಅಕ್ಕ ತನ್ನಷ್ಟಕ್ಕೇ ಹೇಳಿಕೊಂಡಳು.

"ಪಾಪ ಒಳ್ಳೆ ಪ್ರೀತಿಯ ಹೆಣ್ಣಾಗಿದ್ಲು!"

* * * * *

ಮುಚ್ಚಿದ್ದ ಮೊಗಸಾಲೆಯ ಬಾಗಿಲನ್ನು ಅಪ್ಪಣ್ಣ ತೆರೆದ. ತೆಂಕು ಪಾರ್ಶ್ವದಲ್ಲಿ ಕತ್ತಲೆ ತುಂಬಿಕೊಂಡಿತ್ತು. ಕಿಟಿಕಿಯನ್ನು ಬಲವಾಗಿ ನೂಕಿದಾಗ ಬೆಳಕಿನ ಕಿರಣಗಳು ಒಳಗೆಲ್ಲ ಹರಡಿದುವು. ಅಲ್ಲೆಲ್ಲ ಗಾಳಿಯಲ್ಲಿ ಯಾವುದೋ ಒಂದು ರೀತಿಯ ವಾಸನೆ ಹರಡಿಕೊಂಡಿತ್ತು. ಮುಚ್ಚಿದ್ದ ಬಾಗಿಲುಗಳನ್ನೆಲ್ಲ ತೆರೆದ. ಮೂಲೆ ಮುಡುಕಲಿನಲ್ಲೆಲ್ಲ ಕತ್ತಲೆ ಇಡಿ ಕಿರಿದಿತ್ತು. ಚಪ್ಪಡಿ ಹಾಸಿದ್ದ ನಡು ಅಂಗಳದಲ್ಲಿ ಕಸಕಡ್ಡಿಗಳು ತುಂಬಿಕೊಂಡಿದ್ದುವು. ಕಂಬಗಳಲ್ಲೆಲ್ಲ ಗೆದ್ದಲು ಹರಡಿತ್ತು.

ಬಡಗು ಕೋಣೆಯ ಬಡಗು ಭಾಗಕ್ಕೆ ಹೋಗಿ ಅತ್ತ ನಿಂತ. ಅದೇ ಏಣಿಯಿರುವ ಕೊಠಡಿ.

ಆ ಕೋಣೆಯಲ್ಲೇ ಮೂರು ವರ್ಷಗಳನ್ನು ಕಳೆದದ್ದು. ಆ ನೆಲದ ಹತ್ತಿರ ಹೋದಾಗ ಕಣ್ಣೀರು ದುಮುಕಬಹುದೆ?

ಅಲ್ಲಿ ನಿಂತಾಗ ಆ ಕತ್ತಲೆಯ ರೂಮಿನಲ್ಲಿ ಗಾಜಿನ ಬಳೆಗಳು ಶಬ್ದ ಮಾಡಬಹುದು ಎನ್ನಿಸಿತು. ಮಲ್ಲಿಗೆ ಹೂವಿನ ಪರಿಮಳ. ಬಚ್ಚಲಿಂದ ಹೊಮ್ಮುವ ಸಾಬೂನಿನ ಸುಗಂಧ, ಆ ಕೊಠಡಿಯೊಳಗಿನ ಗಾಳಿಯಲ್ಲಿ ತಂಗಿ ನಿಂತಿರಬಹುದೆ?

ವೇದನೆಯಾಗಲಿಲ್ಲ. ಮನಸ್ಸೆಲ್ಲವೂ ಒಂದು ರೀತಿಯ ಶೂನ್ಯತೆಗೊಳಗಾಗಿತ್ತು.

ಏಣಿಯ ಕೋಣೆಯ ಮೇಲಕ್ಕೆ ಹೋದ. ಮುಚ್ಚಿದ್ದ ಒಂದು ಕೋಣೆಯನ್ನು ಮಾತ್ರ ತೆರೆಯಲಿಲ್ಲ.

ತಂಗಕ್ಕನ ಬರಲಿರುವ ಗಂಡನಿಗಾಗಿ ಅಣಿಮಾಡಿಟ್ಟಿದ್ದ ಕೋಣೆಯೊಳಗೆ ಇಲಿಗಳು ಸಂಚರಿಸುವ ಶಬ್ದ ಕೇಳಿಸುತ್ತಿತ್ತು.

ತಂಗಕ್ಕನಿಗೆ ವರ ಬಂದನೆಂದು ತಿಳಿಯಿತು. ಮೀನಾಕ್ಷಕ್ಕ ಹೇಳಿದ್ದರು. ಆಮೇಲೆ ಅತ್ತ ಉಪೇಕ್ಷಿಸಿ ಹೋದ ಎಂದೂ ಹೇಳಿದ್ದರು. ಆ ಮನೆಯಲ್ಲಿ ಅಣಿಮಾಡಿಟ್ಟ ಒಂದು ಕೊಠಡಿ ಈಗಲೂ ಇರಬೇಕು.

ಬಿರುಕು ಬಿಟ್ಟ ಗೋಡೆಗಳೂ ಶೀತವಾಗಿದ್ದ ನೆಲವೂ ಇದ್ದ ಆ ಚೌಕಟ್ಟಿನ ಮನೆಯೊಳಗೆ ತಿರುಗಾಡುತ್ತಿದ್ದಾಗ ಹಗಲಾಗಿದ್ದರೂ ಭಯವುಂಟಾಗುತ್ತಿತ್ತು. ಎಷ್ಟೋ ತಲೆಮಾರುಗಳು ಆಶ್ರಯ ಪಡೆದು ಆ ಕತ್ತಲೆಯ ರಂಧ್ರಗಳಲ್ಲಿ ನುಗ್ಗಿ ಹೋಗಿವೆ. ಫೋರೇಮ್ಯಾನ್ ಮಾವನ. ನಾರಾಯಣ ಮಾವನ ಆತ್ಮಗಳು ಅಲ್ಲಿ ಸುತ್ತಾಡುತ್ತಿರಬೇಕು. ಆ ಹುಡುಗಿಯ ಕಥೆಯೂ ನೆನಪಾಯಿತು.

ಈಗ ಹಳೆಯ ನೆನಪುಗಳು ಮಾತ್ರವಾಗಿ ಉಳಿದಿರುವ ಈ ಚೌಕಟ್ಟಿನ ಮನೆ ತನ್ನ ಮನೆ, ಸ್ವಂತ ಮನೆ. ಐದು ವರ್ಷಗಳು ಕಷ್ಟಪಟ್ಟು ಸಂಪಾದಿಸಿದ ಹಣವನ್ನೆಲ್ಲ ಇದಕ್ಕೆ ಹಾಕಿದ್ದಾಯಿತು. ಅಂತೂ ಒಂದು ದೊಡ್ಡ ಆತ್ಮ ಸಂತೃಪ್ತಿಯಿದೆ ಎಂದ ಹಾಗಾಯಿತು. ಇಲ್ಲಿಂದಲೇ ಒಂದು ಕಾಲದಲ್ಲಿ ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಓಡಿ ಹೋದದ್ದು. ಎಲ್ಲರೂ ಆಗ ನಿಷೇಧಿಸಿದರು. ಅದಕ್ಕೆ ಕಾರಣ? ಇಲ್ಲಿಯ ಒಬ್ಬ ಸ್ತ್ರೀ ತಾನು ಇಷ್ಟಪಟ್ಟ ಒಬ್ಬಾತನನ್ನು ಮದುವೆಯಾದದ್ದು !

ಆ ವಿಷಯಕ್ಕೆ ಬಂದಾಗ ಚಿಂತೆಯ ಸುಳಿಗಳು ಉದ್ಭವಿಸಿದುವು.

"ಆ ಸ್ತ್ರೀ ಹೇಗೆ ಜೀವಿಸುತ್ತಿದ್ದಾಳೋ ಏನೋ?"

ಮನೆಯವರ ಸಮ್ಮತಿಯಿಲ್ಲದೆ ಆಕೆ ಈ ಮನೆಯನ್ನು ಬಿಟ್ಟಳು. ಆದ್ದರಿಂದ ಜೀವನ ಪೂರ್ತಿ ಕ್ಲೇಶ ಪಡಬೇಕಾಗಿ ಬಂತು. ಯಾರು ತಿರುಗಿ ನೋಡಲಿಲ್ಲ. ಎಲ್ಲರೂ ಸೂತಕ ಸ್ನಾನ ಮಾಡಿದರು. ಒಳಗಿದ್ದವರು ಸೂತಕ ತೆಗೆದು ಹಾಕಿದರು. ಒಂದು ಕಳಂಕ ತೊಳೆದು ಹಾಕಿದ್ದಾಯಿತು ಎನ್ನುವ ಆಶ್ವಾಸನೆ ಅವರಿಗುಂಟಾಗಿತ್ತು.

ಅದೇ ಹೆಣ್ಣಿನ ಮಗ ಈಗ ಈ ದೊಡ್ಡ ಚೌಕಟ್ಟಿನ ಮನೆಯ ಯಜಮಾನ.

ದುಃಖದಿಂದ ನೆನಸಿಕೊಂಡ. ಆ ಸ್ತ್ರೀ ತನ್ನ ತಾಯಿ ಎಂದು.

ಅವಳನ್ನು ತಾನೂ ಮರೆತಾಗಿತ್ತು.

ತಂದೆ ತೀರಿಕೊಂಡ ಮೇಲೆ ನನ್ನನ್ನು ಸಾಕಿದಳು. ಬೆಳೆಸಿದಳು. ನಂಬೂದಿರಿ ಮನೆಯ ಒರಳು ಕಲ್ಲಿನ ಹಜಾರದಲ್ಲಿ ಕುಳಿತು ಎಂಜಲನ್ನ ತಿಂದು.

ಆ ಮೇಲೆ ತಾನು ಅದೆಲ್ಲವನ್ನೂ ಮರೆತದ್ದಾಗಿತ್ತು. ಆಕೆಗೆ ಯಾರೂ ದಿಕ್ಕಿಲ್ಲದೆ ಬಾಳುತ್ತಿದ್ದಾಗ ಒಬ್ಬ ಮನುಷ್ಯ ಸಹಾಯಕನಾಗಿ ನಿಂತ. ಆ ಸಹಾಯವನ್ನು ಅವಳು ಬೇಡವೆನ್ನಲಿಲ್ಲ. ಧರೆಗೆ ಬಿದ್ದು ಹೋಗುತ್ತಿದ್ದಾಗ ಆ ಕೈ ಹಿಡಿದದ್ದಾಗಿರಬೇಕು. ಅದೊಂದು ತಪ್ಪೆ? ಎಂದು ಆತ ತನ್ನನ್ನು ತಾನೇ ಕೇಳಿಕೊಂಡ.

ತಪ್ಪು ಯಾರದು?

ಈ ಚೌಕಟ್ಟಿನ ಮನೆಯಿಂದ ಹೊರಗೆ ತಳ್ಳಿದ್ದು ಅವರ ತಪ್ಪೆ? ಅಂತೂ ಆತನಿಗೆ ಉಸಿರು ಕಟ್ಟಿ ಬಂದ ಹಾಗಾಯಿತು.........

ಬೆವರಿದ ಶರೀರದಿಂದ ಆತ ಮೊಗಸಾಲೆಯ ಕಡೆಗೆ ಬಂದ. ಮಧ್ಯಾಹ್ನದ ಬಿಸಿಲು ಹೊರಗೆ ರಣ ರಣ ಸುಡುತ್ತಿತ್ತು. ಗಾಳಿ ಬೀಸುತ್ತಿರಲಿಲ್ಲ. ಎಲೆ ಅಲುಗಾಡುತ್ತಿರಲಿಲ್ಲ.

ಇಷ್ಟು ದಿನ ತನ್ನ ವಿಚಾರವಾಗಿ ತಪ್ಪಾಗಿ ಭಾವಿಸಿದ್ದ. ತನಗೆ ಯಾರೂ ಇಲ್ಲ ಎಂದು. ಜಗತ್ತಿನಲ್ಲಿ ಎಲ್ಲರೂ ಇದ್ದಾರೆ ಎನ್ನುವುದು ಸತ್ಯ ಸಂಗತಿಯಾಗಿದ್ದರೂ, ತಾನು ಒಂಟಿ ಎಂದು ಹೇಳುವುದರಲ್ಲಿ ಒಂದು ವಿಧವಾದ ಬೆಲೆ ಕಡಿಮೆಯಾದ ಅಭಿಮಾನ ಕಾಣಿಸು- ತ್ತಿತ್ತು.

ಋಣ ಭಾರದ ಸಂಕೋಲೆಗಳು ಬಂಧಿಸಿವೆ. ದೂರದ ವೈನಾಡಿನಲ್ಲಿ ಪರ್ವತಗಳ ಕಣಿವೆಗಳಲ್ಲಿ ಒಂದು ಸಣ್ಣ ಮನೆಯ ಹತ್ತಿರಕ್ಕೆ ಮನಸ್ಸು ಸಂಚರಿಸಿತು. ಯಾವುದೋ ಒಂದು ವ್ಯಾಪಾರಸ್ಥಳಕ್ಕೆ ಕಾಲುಗಳುಳ್ಳ ಪೆಟ್ಟಿಗೆಯನ್ನು ತೆರೆದಿಟ್ಟುಕೊಂಡು ಚಿಲ್ಲರೆ ಎಣಿಸುತ್ತಿದ್ದ ಒಬ್ಬ ಮುಸ್ಲಿಂ ಯುವಕನನ್ನು ಆತನ ಮನಸ್ಸು ಕಲ್ಪಿಸಿಕೊಂಡಿತು. ಯಾವುದೋ ಕ್ಲಾಸ್ ರೂಮಿನಲ್ಲಿ ಹುಡುಗರ ಮುಂದೆ ಮಾತನಾಡುತ್ತ ನಿಂತ ಉಪಾಧ್ಯಾಯರ ಚಿತ್ರ ಮನಸ್ಸಿನಲ್ಲಿ ಸುಳಿದು ಹೋಯಿತು.

ಒಟ್ಟಿನಲ್ಲಿ ಆಯಾಸಗೊಂಡು ಆತ ಅಂಗಳದಲ್ಲಿ ಗೆದ್ದಲು ಹರಡಿದ ಕಂಬದ ಹತ್ತಿರ ಬಂದು ನಿಂತ.

ಸೋಲು ಗೆಲವುಗಳನ್ನು ತಾಳೆ ಹಾಕುತ್ತಾ ಅವನ ಮನಸ್ಸು ವ್ಯಥಾ ಪಾಡುಪಡುತ್ತಿತ್ತು.

* * * * *

# 10

ಮನೆಯ ಮುಂದಿನ ಮೆಟ್ಟಿಲುಗಳ ಹತ್ತಿರ ಬಂದಾಗ ಆ ಯುವಕ ನಿಂತ. ಹಿಂದೆ ಬರುತ್ತಿದ್ದ ಸ್ತ್ರೀಯೊಡನೆ ಹೇಳಿದ:

"ಅಮ್ಮ ಒಳಗೆ ಬಾ."

ಅವಳು ಅನುಮಾನಿಸುತ್ತ ನಿಂತಿದ್ದುದನ್ನು ಕಂಡು ಆತ ಹೇಳಿದ:

"ಧೈರ್ಯವಾಗಿ ಬಾ."

ತಲೆಯಲ್ಲಿ ನಾಲ್ಕೈದು ಬಿಳಿಯ ಕೂದಲುಗಳು ಕಾಣಿಸುತ್ತಿದ್ದ ಆ ತೆಳ್ಳನೆಯ ಸ್ತ್ರೀ ಪಡಸಾಲೆಗೆ ಬಂದಳು.

ಆಗಲೂ ಆ ವಯಸ್ಸಾದ ಮನುಷ್ಯ ಹೊರಗೆ ಅನುಮಾನಿಸುತ್ತ ನಿಂತಿದ್ದಾಗ ಯುವಕ ಹೇಳಿದ:

"ಬನ್ನಿ"

ಆತನ ತಾಯಿಯ ಜೊತೆಯಲ್ಲಿ ಪ್ರವೇಶಿಸಲು ತನಗೆ ಅರ್ಹತೆಯಿಲ್ಲವೆಂಬ ಭಾವನೆಯಿಂದ ತಾನೂ ಪಡಸಾಲೆಗೆ ಬಂದ.

ಒಳಗೆ ಹೋದಾಗ ಆ ಸ್ತ್ರೀ ಹೇಳಿದಳು:

"ಎಷ್ಟೊಂದು ಕತ್ತಲೆ ಅಪ್ಪಣ್ಣಿ ಇವರೊಳಗೆ?"

"ಹಗಲೂ ಇವರೊಳಗೆ ಕತ್ತಲೆ. ಇಲ್ಲಿ ಹಿಂದಿನವರ ಪ್ರೇತಗಳು ವಾಸಮಾಡುತ್ತಾ ಇರಬೇಕು ಹಗಲಿನಲ್ಲೂ."

ತಾಯಿ ಗಾಬರಿಯಾಗಿ ಆತನ ಮುಖದ ಕಡೆಗೆ ನೋಡಿದಳು.

"ಅಮ್ಮ ಹೆದರಿಕೋಬೇಡ. ಈ ತೊಟ್ಟಿ ಮನೇನ ಮುರಿದು ಹಾಕುವ ಏರ್ಪಾಡು ಮಾಡಬೇಕು. ಇಲ್ಲಿ ಒಳ್ಳೆಯ ಗಾಳಿ ಬೆಳಕು ಬರುವ ಒಂದು ಸಣ್ಣ ಮನೆ ಸಾಕು."

"ಮುರಿದು ಹಾಕೋದಾ? ಭಗವತಿ ಇರೋ ಸ್ಥಳ ಅಲ್ಲವಾ?"

ಆತ ಗಟ್ಟಿಯಾಗಿ ನಕ್ಕ. ಆ ನಗುವಿನ ಧ್ವನಿ ಮನೆಯ ಗೋಡೆಗಳನ್ನು, ಗೆದ್ದಲು ಹತ್ತಿದ ಕಂಬಗಳನ್ನು ಕತ್ತಲೆ ಆವರಿಸಿದ್ದ ಮೂಲೆಗಳನ್ನು ಮುಟ್ಟಿ ಮಾರ್ದನಿ ಕೊಟ್ಟಿತು.

ವಯಸ್ಸಾದ ಆ ಮನುಷ್ಯ ಆಗಲೂ ಪರವಶತೆಗೊಳಗಾಗಿ ತಲೆಬಾಗಿಕೊಂಡು ನಿಂತಿದ್ದ.

---